ಮೈಸೂರು ವಿಶ್ವವಿದ್ಯಾನಿಲಯ ಕನ್ನಡ ಗ್ರಂಥಮಾಲೆ—೪೧

# ತರ್ಕಶಾಸ್ತ್ರ

## (ಭಾಗ—೧ ನಿಗಮನ ನ್ಯಾಯ)

ಪ್ರಧಾನ ಸಂಪಾದಕ:

**ಡಾ|| ಕೆ. ವಿ. ಪುಟ್ಟಪ್ಪ,** ಎಂ.ಎ., ಡಿ.ಲಿಟ್.

ಲೇಖಕ:

**ಜಿ. ಹನುಮಂತರಾವ್,** ಎಂ.ಎ.









ಮೈಸೂರು:

[illegible]ೂರು ವಿಶ್ವವಿದ್ಯಾನಿಲಯ

೧೯೫೮

[illegible] ಪ್ರತಿ ರೂ. ೨.೧೩ ಉತ್ತಮ ಪ್ರತಿ ರೂ. ೩.೧೩

ಮೈಸೂರು ವಿಶ್ವವಿದ್ಯಾನಿಲಯ ಕನ್ನಡ ಗ್ರಂಥಮಾಲೆ—೪೧

# ತರ್ಕಶಾಸ್ತ್ರ

## (ಭಾಗ—೧ ನಿಗಮನ ನ್ಯಾಯ)

ಪ್ರಧಾನ ಸಂಪಾದಕ:

**ಡಾ|| ಕೆ. ವಿ. ಪುಟ್ಟಪ್ಪ,** ಎಂ.ಎ., ಡಿ.ಲಿಟ್.

ಲೇಖಕ:

**ಜಿ. ಹನುಮಂತರಾವ್,** ಎಂ.ಎ.






ಮೈಸೂರು

ಮೈಸೂರು ವಿಶ್ವವಿದ್ಯಾನಿಲಯ

೧೯೫೮




# ಮುನ್ನುಡಿ

ವಿದ್ಯಾಭ್ಯಾಸದ ಸರ್ವಶ್ರೇಣಿಗಳಲ್ಲಿಯೂ ದೇಶಭಾಷೆ ಶಿಕ್ಷಣಮಾಧ್ಯಮವಾಗಬೇಕಾದುದು ಅತ್ಯವಶ್ಯವಾಗಿದೆ. ಇದು ಒಬ್ಬಿಬ್ಬರು ಭಾಷಾಭಿಮಾನಿಗಳು ದುರುದ್ದೇಶದಿಂದಾಗಲಿ ಪಕ್ಷಪಾತ ಮನೋಭಾವದಿಂದಾಗಲಿ ಹೇಳುವ ಮಾತಲ್ಲ. ರಾಷ್ಟ್ರದ ಸರ್ವತೋಮುಖವಾದ ಪ್ರಗತಿ ಮತ್ತು ವಿದ್ಯಾರ್ಥಿಗಳ ಸರ್ವಾಂಗೀಣವಾದ ವಿಕಾಸ—ಇವುಗಳ ಹಿನ್ನೆಲೆಯಲ್ಲಿ ನಡೆಸಿದ ಕೂಲಂಕಷವಾದ ಚರ್ಚೆ ಮತ್ತು ಸರ್ವಂಕಷವಾದ ವಿಚಾರಮಥನಗಳ ಫಲವಾಗಿ ಸಿದ್ಧಿಸಿದ ತತ್ತ್ವವಿದು. ಡಾ|| ಅಮರನಾಥಝಾರಂಥ ಶ್ರೇಷ್ಠ ಶಿಕ್ಷಣ ತಜ್ಞರಿಂದ ಹಿಡಿದು ಮಹಾತ್ಮ ಗಾಂಧೀಜಿಯಂಥ ರಾಷ್ಟ್ರನಾಯಕರವರೆಗೆ ಎಲ್ಲರೂ ದೇಶಭಾಷಾಮಾಧ್ಯಮದ ಸಾರ್ಥಕತೆಯನ್ನು ಒತ್ತಿ ಹೇಳಿದ್ದಾರೆ. ಹಿಂದಿನ ಆಂಗ್ಲ ಸರ್ಕಾರ ನೇಮಿಸಿದ್ದ ಸ್ಯಾಡ್ಲರ್ ವಿಚಾರಣಾ ಸಮಿತಿ ಮತ್ತು ಹಾರ್ಟೋಗ್ ಸಮಿತಿಗಳೂ ಸರ್ ಚಾರ್ಲ್ಸ್‌ವುಡ್, ಸರ್ ಸಾರ್ಜಂಟ್ ಮೊದಲಾದ ವಿದೇಶೀಯ ಶಿಕ್ಷಣ ತಜ್ಞರೂ ದೇಶಭಾಷಾ ಮಾಧ್ಯಮದಿಂದಲ್ಲದೆ ಭಾರತೀಯರ ಶಿಕ್ಷಣ ಸಫಲವಾಗದೆಂದೂ ಸಮರ್ಪಕವಾಗದೆಂದೂ ಏಕಕಂಠದಿಂದ ಸಾರಿದ್ದಾರೆ.

ಈ ಶಿಕ್ಷಣ ಸೂತ್ರವನ್ನು ದೃಷ್ಟಿಯಲ್ಲಿಟ್ಟುಕೊಂಡೇ ಭರತಖಂಡದ ಅನೇಕ ವಿಶ್ವವಿದ್ಯಾನಿಲಯಗಳಲ್ಲಿ ದೇಶಭಾಷಾಮಾಧ್ಯಮ ಯಶಸ್ವಿಯಾಗಿ ಕಾರ್ಯಗತವಾಗುತ್ತಿದೆ. ನಾಗಪುರ, ಅಲಹಾಬಾದ್, ಕಾಶಿ ಮೊದಲಾದ ವಿಶ್ವವಿದ್ಯಾನಿಲಯಗಳಿಂದ ಅಧಿಕೃತವಾಗಿ ದೊರೆತ ವರದಿಗಳಿಂದ ವಿದ್ಯಾರ್ಥಿಗಳು ಆದರಪೂರ್ವಕವಾಗಿ ಅನಿರ್ಬಂಧವಾಗಿ ದೇಶಭಾಷಾಮಾಧ್ಯಮವನ್ನು ಆರಿಸಿಕೊಳ್ಳುತ್ತಿರುವುದೂ, ಅದರಿಂದ ಪರೀಕ್ಷೆಗಳಲ್ಲಿ ಫಲಿತಾಂಶ ತುಂಬ ಆಶಾದಾಯಕವಾಗಿ ಗೋಚರಿಸುತ್ತಿರುವುದೂ ಸುಸ್ಪಷ್ಟವಾಗುತ್ತಿದೆ.

ದೇಶಭಾಷಾಮಾಧ್ಯಮ ಬೇಡವೆನ್ನುವ ಸಂಪ್ರದಾಯ ಶರಣರ ಸಂಖ್ಯೆ ಈಗೀಗ ಬಹುಮಟ್ಟಿಗೆ ಇಳಿಮುಖವಾಗುತ್ತಿದ್ದರೂ ಅಲ್ಲೊಬ್ಬರು ಇಲ್ಲೊಬ್ಬರು ಇನ್ನೂ ಇದ್ದಾರೆ. ಅವರು ತಮ್ಮ ನಿಲುವನ್ನು ಸಾಧಿಸಲು ಕೊಡುವ ಮುಖ್ಯ ಕಾರಣಗಳಿವು.

೧. ದೇಶಭಾಷೆಗಳಲ್ಲಿ ಪಾರಿಭಾಷಿಕ ಅಥವಾ ವೈಜ್ಞಾನಿಕ ಪದಗಳ ದಾರಿದ್ರ್ಯ.

೨. ಗ್ರಂಥಗಳ ಅಭಾವ.

೩. ವಿವಿಧ ಪ್ರಾಂತಗಳ ವಿದ್ವಾಂಸರ ಸಂಪರ್ಕಕ್ಕೆ ಮತ್ತು ಸರ್ಕಾರಿ ನೌಕರರ ಪರಸ್ಪರ ವಿನಿಮಯಕ್ಕೆ ಅಡಚಣೆ.

ಈ ಕಾರಣಗಳು ಸಂಪೂರ್ಣ ನಿರಾಧಾರವಾದುವೆಂಬುದು ಕೆಳಗಣ ವಿವರಣೆಯಿಂದ ವ್ಯಕ್ತವಾಗುತ್ತದೆ.

೧. ವೈಜ್ಞಾನಿಕ ಅಥವಾ ಪಾರಿಭಾಷಿಕ ವಿಷಯಗಳಿಗೆ ಹೊಸ ಹೊಸ ಶಬ್ದಗಳನ್ನು ಸೃಷ್ಟಿಸುವ ಸಂಕಟಕ್ಕೆ ಗುರಿಯಾಗಬೇಕಾಗಿಲ್ಲ. ಅಂತರ ರಾಷ್ಟ್ರೀಯ ಶಬ್ದಗಳನ್ನೇ ಇದ್ದಕ್ಕಿದ್ದಹಾಗೆಯೆ ಬಳಸಿಕೊಳ್ಳಬಹುದು. ಆವಶ್ಯಕತೆ ಕಂಡುಬಂದರೆ ಮಾತ್ರ ವಿವರಣಾತ್ಮಕವಾಗಿ ದೇಶಭಾಷೆಯ ಶಬ್ದಗಳನ್ನು ಉಪಯೋಗಿಸಬಹುದು. ಪಾರಿಭಾಷಿಕ ಶಬ್ದಗಳು ವಾಸ್ತವವಾಗಿ ಅಂಕಿತನಾಮಗಳು ತಾನೆ! ಕೇಂದ್ರ ಸರ್ಕಾರದ ವಿದ್ಯಾಶಾಖೆ ತಯಾರಿಸಿರುವ ಪಾರಿಭಾಷಿಕ ಪದಗಳ ಕೋಶ ಈ ತತ್ವವನ್ನೆ ಅವಲಂಬಿಸಿದೆ. ಮೈಸೂರು ವಿಶ್ವವಿದ್ಯಾನಿಲಯವೂ ಈ ಮಾರ್ಗವನ್ನೆ ಸಂಪೂರ್ಣವಾಗಿ ಅಂಗೀಕರಿಸಿದೆ.

೨. ಈಗಾಗಲೆ ಎಲ್ಲ ಭಾಷೆಗಳಲ್ಲಿಯೂ ವೈಜ್ಞಾನಿಕ ಗ್ರಂಥಗಳು ಹೊರಬೀಳುತ್ತಿವೆ. ಆವಶ್ಯಕತೆ ಹೆಚ್ಚಿದಂತೆಲ್ಲ ಅವುಗಳ ಸಂಖ್ಯೆಯೂ ಬೆಳೆಯುತ್ತದೆ. ಪೇಟೆಯಲ್ಲಿ ಗಿರಾಕಿ ಇದೆ ಎಂದು ತಿಳಿದರೆ ಸಾಕು, ಗ್ರಂಥಗಳು ಲೆಕ್ಕವಿಲ್ಲದೆ ಹೊರಬರುತ್ತವೆ.

೩. ಅಂತರ ರಾಷ್ಟ್ರೀಯ ಪಾರಿಭಾಷಿಕ ಶಬ್ದಗಳನ್ನು ಬಿಡುವುದಿಲ್ಲವಾದುದರಿಂದಲೂ ಹಿಂದಿ ಅಥವಾ ಇಂಗ್ಲಿಷ್ ಭಾಷೆಯನ್ನು ಕಡ್ಡಾಯವಾಗಿ ಎಲ್ಲ ವಿದ್ಯಾರ್ಥಿಗಳು ಒಂದಲ್ಲ ಒಂದು ರೀತಿಯಲ್ಲಿ ಕಲಿಯಬೇಕಾಗಿರುವುದರಿಂದಲೂ ವಿದ್ವಾಂಸರ ಸಂಪರ್ಕಕ್ಕಾಗಲಿ ಸರ್ಕಾರಿ ನೌಕರರ ವಿನಿಮಯಕ್ಕಾಗಲಿ ಅಡಚಣೆ ಆಗುವುದಿಲ್ಲ. ಈ ದೊಡ್ಡ ರಾಷ್ಟ್ರದಲ್ಲಿ ಸರ್ಕಾರಿ ನೌಕರರ ಸಂಖ್ಯೆ ಅತ್ಯಲ್ಪಭಾಗವೆನ್ನುವುದನ್ನೂ ಈ ಅತ್ಯಲ್ಪ ಸಂಖ್ಯೆಯ ಸರ್ಕಾರಿ ನೌಕರಿ ಜನರ ಹಿತಕ್ಕಾಗಿ ಇಡೀ ರಾಷ್ಟ್ರದ ಕಲ್ಯಾಣವನ್ನು ಬಲಿಗೊಡುವುದು ಸರಿಯಲ್ಲವೆಂಬುದನ್ನೂ ಮರೆಯಬಾರದು.

ಮೈಸೂರು ವಿಶ್ವವಿದ್ಯಾನಿಲಯ ಕನ್ನಡಮಾಧ್ಯಮವನ್ನು ಈಗತಾನೆ ಕಾರ್ಯರೂಪಕ್ಕೆ ತಂದಿದೆ. ಇದಕ್ಕೆ ಸಹಾಯಕವಾಗುವಂತೆ ಈಗಾಗಲೇ ವಿಜ್ಞಾನ ಸಂಬಂಧವಾದ ನಾಲ್ಕಾರು ಗ್ರಂಥಗಳನ್ನು ಪ್ರಕಟಿಸಿರುವುದಲ್ಲದೆ ಎಲ್ಲ ವಿಷಯಗಳ ಮೇಲೂ ಗ್ರಂಥಗಳನ್ನು ಬರೆಸಲು ಯೋಜನೆಯನ್ನು ಸಿದ್ಧಪಡಿಸಿದೆ. ಜಿ. ಹನುಮಂತರಾವ್ ಅವರ 'ತರ್ಕಶಾಸ್ತ್ರ' ಈ ಯೋಜನೆಯ

ಅಂಗವಾಗಿ ಹೊರಬರುತ್ತಿದೆ. ಇನ್ನೂ ನಾಲ್ಕಾರು ಹೆಬ್ಬೊತ್ತಿಗೆಗಳು ಪ್ರಕಟಣೆಗೆ ಸಿದ್ಧವಾಗಿವೆಯೆಂದು ಹೇಳಲೂ ಸಂತೋಷವಾಗುತ್ತದೆ.

ಶ್ರೀಮಾನ್ ಜಿ. ಹನುಮಂತರಾಯರವರು ಹಲವಾರು ವರ್ಷಗಳು ಮೈಸೂರು ವಿಶ್ವವಿದ್ಯಾನಿಲಯದ ಪ್ರಕಟಣಶಾಖೆ ಕಾರ್ಯದರ್ಶಿಗಳಾಗಿ ಸೇವೆ ಸಲ್ಲಿಸಿರುತ್ತಾರೆ. ಅವರ ಪಾಂಡಿತ್ಯ ಗಾಢವೂ ಅಗಾಧವೂ ಆಗಿ ವಿಶೇಷ ಅನುಭವವನ್ನು ಪಡೆದಿದ್ದಾರೆ. ಮೂರು ವರ್ಷದ ಡಿಗ್ರಿತರಗತಿಯಲ್ಲಿ ತರ್ಕ ಶಾಸ್ತ್ರವನ್ನು ಓದುವ ವಿದ್ಯಾರ್ಥಿಗಳಿಗೆ ಇದೊಂದು ಆಧಾರ ಗ್ರಂಥದಂತೆ ಸಹಾಯಕವಾಗಬಲ್ಲದು ಎಂದು ಹೇಳಬಹುದು. ಪಾಂಡಿತ್ಯವನ್ನೂ ನಿಷ್ಕೃಷ್ಟ ವಾದ ಜ್ಞಾನವನ್ನೂ ಗಳಿಸಿ ಖ್ಯಾತರಾಗಿರುವ ಶ್ರೀ ಜಿ. ಹನುಮಂತರಾವ್ ಅವರ ಈ ಗ್ರಂಥ ಸರ್ವಮಾನ್ಯವಾಗುವುದರಲ್ಲಿ ಸಂದೇಹವಿಲ್ಲ.

ಮೈಸೂರು
೧-೪-೧೯೫೮

ಕೆ. ವಿ. ಪುಟ್ಟಪ್ಪ
ಪ್ರಧಾನ ಸಂಪಾದಕ ಮತ್ತು ಪ್ರಕಟನ ಸಮಿತಿಯ ಅಧ್ಯಕ್ಷ

# ಪ್ರಸ್ತಾವನೆ

ಪಾಶ್ಚಾತ್ಯ ತರ್ಕಶಾಸ್ತ್ರವನ್ನು ಕನ್ನಡದ ಮೂಲಕ ವಿದ್ಯಾರ್ಥಿಗಳಿಗೆ ಕಲಿಸಬೇಕೆಂದು ಮೈಸೂರು ವಿಶ್ವವಿದ್ಯಾನಿಲಯದ ಅಧಿಕಾರಿಗಳು ನಿಶ್ಚಯಿಸಿದುದರ ಫಲವಾಗಿ ಈ ತರ್ಕಶಾಸ್ತ್ರದ ಗ್ರಂಥ ಹುಟ್ಟಿತು. ಕನ್ನಡದಲ್ಲಿ ತರ್ಕಶಾಸ್ತ್ರವನ್ನು ಬರೆಯುವಾಗ ಭಾರತೀಯ ತರ್ಕದ ಪಾರಿಭಾಷಿಕ ಪದಗಳನ್ನು ಉಪಯೋಗಿಸಿಕೊಳ್ಳಬೇಕಾದುದು ಅತ್ಯಗತ್ಯ. ಹಾಗೆ ಆ ಪದಗಳನ್ನು ಉಪಯೋಗಿಸಿಕೊಂಡಾಗ ಭಾರತೀಯ ತರ್ಕದ ವಿಚಾರವಾಗಿ ಅಲ್ಪಸ್ವಲ್ಪವಾದರೂ ಹೇಳಿಯೇ ಹೇಳಬೇಕಾಗುತ್ತದೆ. ಆದ್ದರಿಂದ ಪ್ರಾಸಂಗಿಕವಾಗಿ ಭಾರತೀಯ ತರ್ಕಶಾಸ್ತ್ರದ ಕೆಲವು ಅಂಶಗಳನ್ನು ಇಲ್ಲಿ ಪ್ರಸ್ತಾಪಿಸಿದೆ. ನಮ್ಮ ವಿಶ್ವವಿದ್ಯಾನಿಲಯದ ವಿದ್ಯಾರ್ಥಿಗಳು ನಮ್ಮ ದೇಶದಲ್ಲಿ ಹುಟ್ಟಿ ಬೆಳೆದ ತರ್ಕಶಾಸ್ತ್ರದ ಗಂಧವೇ ಇಲ್ಲದೆ ಪಾಶ್ಚಾತ್ಯ ತರ್ಕಶಾಸ್ತ್ರವನ್ನು ಮಾತ್ರ ತಿಳಿದುಕೊಳ್ಳಬೇಕಾಗಿದ್ದ ವಿಶೇಷ ಪರಿಸ್ಥಿತಿಯು ಈ ಮೂಲಕ ಸ್ವಲ್ಪಮಟ್ಟಿಗೆ ಮಾರ್ಪಾಡಾಗುತ್ತದೆ.

ವಿಶ್ವವಿದ್ಯಾನಿಲಯದವರು ತರ್ಕಶಾಸ್ತ್ರವನ್ನು ಕನ್ನಡದಲ್ಲಿ ಬರೆಯಿಸಿ ವಿದ್ಯಾರ್ಥಿಗಳಿಗೆ ಮೂರು ಬಗೆಯಾಗಿ ಉಪಕಾರಮಾಡಿರುತ್ತಾರೆ. ಯಾವ ಭಾಷೆಯಲ್ಲಿ ಬೋಧಿಸಲಿ ತರ್ಕಶಾಸ್ತ್ರವನ್ನು ವಿದ್ಯಾರ್ಥಿಗಳು ತಿಳಿದುಕೊಳ್ಳುವುದು ಕಷ್ಟ. ಅದನ್ನು ಪರಭಾಷೆಯ ಮೂಲಕ ಕಲಿಯಬೇಕಾದಾಗ ವಿದ್ಯಾರ್ಥಿಗಳ ಶ್ರಮ ಮತ್ತಷ್ಟು ಹೆಚ್ಚುವುದು ಖಂಡಿತ. ಸ್ವಭಾಷೆಯ ಮೂಲಕ ಅದನ್ನು ಕಲಿಯಲು ಅವಕಾಶಮಾಡಿಕೊಟ್ಟು ವಿಶ್ವವಿದ್ಯಾನಿಲಯದವರು ವಿದ್ಯಾರ್ಥಿಗಳ ಶ್ರಮವನ್ನು ಸ್ವಲ್ಪ ಇಳಿಸಿರುತ್ತಾರೆ. ಎರಡನೆಯದಾಗಿ ತರ್ಕವನ್ನು ಕನ್ನಡದ ಮೂಲಕ ಕಲಿಸಿ ವಿದ್ಯಾರ್ಥಿಗಳ ಗಮನವು ಸ್ವಲ್ಪಮಟ್ಟಿಗಾದರೂ ತಮ್ಮ ದೇಶದ ತರ್ಕದ ಕಡೆಗೆ ಹರಿಯುವಂತೆ ಅವಕಾಶಮಾಡಿಕೊಟ್ಟಿರುತ್ತಾರೆ. ಕೊನೆಯದಾಗಿ ಇದುವರೆಗೂ ಪಾಶ್ಚಾತ್ಯ ತರ್ಕವನ್ನು ಪರಿಚಯಮಾಡಿಕೊಳ್ಳಲಾಗದ ಕರ್ನಾಟಕದ ಅನೇಕ ಭಾರತೀಯ ತರ್ಕಶಾಸ್ತ್ರ ವಿದ್ಯಾರ್ಥಿಗಳು ಈಗ ಪಾಶ್ಚಾತ್ಯ ತರ್ಕವನ್ನು ತಿಳಿದುಕೊಳ್ಳಲು ಅನುಕೂಲವಾಗಿದೆ. ಈ ಮೂಲಕ ಅವರು ಭಾರತೀಯ ಮತ್ತು ಪಾಶ್ಚಾತ್ಯ ತರ್ಕಗಳಿಗಿರುವ ತಾರತಮ್ಯಗಳನ್ನೂ ಅವುಗಳ ಗುಣಾವಗುಣಗಳನ್ನೂ ತಿಳಿದು ತಮ್ಮ ವಿಚಾರದೃಷ್ಟಿಯನ್ನು ಪುಷ್ಟಿಗೊಳಿಸಿಕೊಳ್ಳಬಹುದು.

ಪಾಶ್ಚಾತ್ಯ ತರ್ಕವನ್ನು ಕನ್ನಡದಲ್ಲಿ ವಿವರಿಸುವಾಗ ಸಾಧ್ಯವಾದಮಟ್ಟಿಗೆ ಭಾರತೀಯ ತರ್ಕದ ಪಾರಿಭಾಷಿಕ ಪದಗಳನ್ನು ಉಪಯೋಗಿಸಿಕೊಂಡಿದೆ. ಪಾಶ್ಚಾತ್ಯ ಪಾರಿಭಾಷಿಕ ಶಬ್ದಗಳಿಗೆ ಸಮಾನವಾದ ಭಾರತೀಯ ತರ್ಕಶಾಸ್ತ್ರದ ಪಾರಿಭಾಷಿಕ ಶಬ್ದಗಳು ದೊರೆಯದ ಸಂದರ್ಭಗಳಲ್ಲಿ ಸುಲಭವಾಗಿ ಭಾಷಾಂತರಿಸಬಹುದಾದುವನ್ನು ಭಾಷಾಂತರಿಸಿದೆ. ಹೀಗೆ ಭಾಷಾಂತರಿಸಿದವುಗಳ ಪಕ್ಕದಲ್ಲಿ ಪಾಶ್ಚಾತ್ಯ ಪಾರಿಭಾಷಿಕ ಪದಗಳನ್ನೂ ಕೊಟ್ಟಿದೆ. ಭಾಷಾಂತರಿಸಲಾಗದಾಗ ಅಥವಾ ಭಾಷಾಂತರ ವಿಕಾರವಾಗಿ ತೋರಿದಾಗ, ಪಾಶ್ಚಾತ್ಯರು ಉಪಯೋಗಿಸಿರುವ ಪದಗಳನ್ನು ಭಾಷಾಂತರಿಸದೆ ಹಾಗೆಯೇ ಬಳಸಿಕೊಂಡಿದೆ.

ಈ ಗ್ರಂಥವು ಎರಡು ಸಂಪುಟಗಳಿಂದ ಕೂಡಿದೆ. ಮೊದಲನೆಯದರಲ್ಲಿ ನಿಗಮನನ್ಯಾಯ (Deductive Logic) ವನ್ನು ವಿವರಿಸಿದೆ. ತದನಂತರದ ಸಂಪುಟದಲ್ಲಿ ಅನುಗಮನ್ಯಾಯ (Inductive Logic) ವನ್ನೂ ಆಧುನಿಕ ವೈಜ್ಞಾನಿಕ ವಿಧಾನ (Scientific Methods) ಗಳನ್ನೂ ವಿವರಿಸಿದೆ. ಈ ಎರಡು ಸಂಪುಟಗಳಲ್ಲಿ ಪಾಶ್ಚಾತ್ಯ ತರ್ಕವೆಲ್ಲವೂ ಸೇರಿದೆಯೆಂದು ಭಾವಿಸಕೂಡದು. ಈ ಎರಡು ಸಂಪುಟಗಳಲ್ಲಿ ಅಡಗಿರುವ ತರ್ಕ ವಿಶ್ವವಿದ್ಯಾನಿಲಯದ ಕೆಳಗಣ ತರಗತಿಗಳಲ್ಲಿ ಬೋಧಿಸಬೇಕಾದಷ್ಟು ಮಾತ್ರವೇ. ಕಳೆದ ಅರ್ಧ ಶತಮಾನದಲ್ಲಿ ವಿಶೇಷವಾಗಿ ಬೆಳೆದಿರುವ ಪಾಶ್ಚಾತ್ಯ ತರ್ಕಭಾಗ ಇವುಗಳಲ್ಲಿ ಸೇರಿಲ್ಲ. ಈ ಭಾಗ ವಿಶ್ವವಿದ್ಯಾನಿಲಯದ ಮೇಲಣ ತರಗತಿಗಳಲ್ಲಿ ಬೋಧಿಸಬೇಕಾದದ್ದು. ಅದನ್ನು ಕನ್ನಡದಲ್ಲಿ ತಿಳಿಸಬೇಕಾದರೆ ಅದಕ್ಕೆ ಬೇರೆಯೊಂದು ಗ್ರಂಥ ಆವಶ್ಯಕ.

ಈ ಪುಸ್ತಕವನ್ನು ಬರೆಯಲು ನನಗೆ ಅವಕಾಶ ಕಲ್ಪಿಸಿಕೊಟ್ಟ ವಿಶ್ವವಿದ್ಯಾನಿಲಯದ ಅಧಿಕಾರಿಗಳಿಗೆ ನಾನು ಕೃತಜ್ಞನಾಗಿರುತ್ತೇನೆ. ಇದರ ಪ್ರೂಫನ್ನು ಓದಿ ಅಮೂಲ್ಯವಾದ ತಿದ್ದುಪಡಿಗಳನ್ನು ಸೂಚಿಸಿದ ನನ್ನ ಮಿತ್ರರಾದ ಶ್ರೀಮಾನ್ ತೀ. ನಂ. ಶ್ರೀಕಂಠಯ್ಯನವರಿಗೆ ನಾನು ಚಿರಋಣಿ.

ಜಿ. ಹನುಮಂತರಾವ್

# ವಿಷಯಾನುಕ್ರಮಣಿಕೆ



# ೧. ಪೀಠಿಕೆ

## ೧. ತರ್ಕಶಾಸ್ತ್ರ ಲಕ್ಷಣ

ಸರಿಯಾದ ಜ್ಞಾನಸ್ವರೂಪವನ್ನು ವಿಚಾರಮಾಡುವ ಶಾಸ್ತ್ರವೆಂದು ತರ್ಕಶಾಸ್ತ್ರದ ಲಕ್ಷಣವನ್ನು ಹೇಳುವುದು ರೂಢಿಯಲ್ಲಿದೆ. ಈ ಶಾಸ್ತ್ರವನ್ನು ಭಾರತೀಯರು **ಆನ್ವೀಕ್ಷಿಕೀ,** ಪ್ರಮಾಣಶಾಸ್ತ್ರ, ನ್ಯಾಯಶಾಸ್ತ್ರ*, ಹೇತುವಿದ್ಯೆ ಎಂದು ಕರೆಯುವುದುಂಟು. ಆನ್ವೀಕ್ಷಿಕೀ ಎಂದರೆ ಪುನಃ ನೋಡುವುದು; ನಾವು ಆಗಲೇ ತಿಳಿದಿರುವುದನ್ನು ಪರೀಕ್ಷಿಸಿ ನೋಡುವುದು. ನಾವು ತಿಳಿದಿರುವುದು ಸರಿಯೇ ತಪ್ಪೇ, ಸರಿಯಾಗಿದ್ದರೆ ಏಕೆ ಸರಿಯಾಗಿದೆ, ತಪ್ಪಾಗಿದ್ದರೆ ಏಕೆ ತಪ್ಪಾಗಿದೆ ಎಂದು ನಿರ್ಧರಿಸುವುದು ತರ್ಕಶಾಸ್ತ್ರದ ಕೆಲಸ. ಡಬ್ಲ್ಯು. ಇ. ಜಾನ್‌ಸನ್ ಎಂಬ ಪ್ರಖ್ಯಾತ ಪಾಶ್ಚಾತ್ಯ ತಾರ್ಕಿಕನು ಹೇಳಿರುವಂತೆ ಜ್ಞಾನವನ್ನು ಬಿಡಿಸಿ ಬಿಡಿಸಿ ನೋಡಿ ಅದರ ಯೋಗ್ಯತೆಯನ್ನು ಪರೀಕ್ಷಿಸುವುದು ತರ್ಕ. ಯಾವುದನ್ನಾದರೂ ಪರೀಕ್ಷಿಸಿ ಅದು ಸರಿ ಅಥವಾ ತಪ್ಪು ಎಂದು ಹೇಳಬೇಕಾದರೆ ಅದನ್ನು ಒಂದು ಗೊತ್ತಾದ ಮಾನ (ಪ್ರಮಾಣ) ದಿಂದ ಅಳೆಯಬೇಕು. ಅದು ಒಂದು ನಿರ್ದಿಷ್ಟವಾದ ಪ್ರಮಾಣಕ್ಕೆ ಸರಿಹೊಂದುತ್ತದೆ ಎಂದು ತಿಳಿಸಬೇಕು. ಹೀಗೆ ಜ್ಞಾನವನ್ನು ಪ್ರಮಾಣಗಳ ಮೂಲಕ ಪರೀಕ್ಷಿಸುವ ಶಾಸ್ತ್ರ ನ್ಯಾಯಶಾಸ್ತ್ರ (ಪ್ರಮಾಣೈರರ್ಥಪರೀಕ್ಷಣಂ ನ್ಯಾಯಂ). ಪ್ರಮಾಣಸಮ್ಮತವಾದ ತಿಳಿವು ನ್ಯಾಯ. ಜ್ಞಾನಕ್ಕೆ ಸರಿಯಾದ ದಾರಿ ತೋರಿಸುವುದು ನ್ಯಾಯ. ಸರಿಯಾದ ದಾರಿ ತೋರಿಸುವುದು ಎಂದರೆ ಸಮಂಜಸವಾದ ಕಾರಣವನ್ನು ಹೇಳುವುದು; ಅಂದರೆ ಸರಿಯಾದ ಹೇತುವನ್ನು ತಿಳಿಸುವುದು. ಜ್ಞಾನಕ್ಕೆ ಸರಿಯಾದ ಕಾರಣ ಹೇಳಿ ಅದನ್ನು ಸ್ಥಾಪಿಸುವುದರಿಂದ ತರ್ಕಶಾಸ್ತ್ರವನ್ನು ಹೇತುವಿದ್ಯೆ ಎಂದೂ ಕರೆಯುವುದುಂಟು. ಆನ್ವೀಕ್ಷಿಕೀ, ನ್ಯಾಯ, ತರ್ಕ, ಹೇತುವಿದ್ಯೆ ಈ ಎಲ್ಲವೂ ಒಂದೇ ಅರ್ಥವನ್ನು ಸೂಚಿಸುತ್ತವೆ. ಒಟ್ಟಿನಲ್ಲಿ ಮಾನವನು ಸತ್ಯಾನ್ವೇಷಣದಲ್ಲಿ ತೊಡಗಿದಾಗ ಅವನು ಅನುಸರಿಸುವ ಆಲೋಚನೆಯ ನಿಯಮಗಳನ್ನೂ ವಾದ ವಿಧಾನಗಳನ್ನೂ ವಿಚಾರಮಾಡಿ ತಿಳಿಸುವುದು ತರ್ಕಶಾಸ್ತ್ರದ ಉದ್ದೇಶ.

---

* ಇಲ್ಲಿ ನ್ಯಾಯ ಎಂಬ ಪದವನ್ನು ಪಾರಿಭಾಷಿಕ ಅರ್ಥದಲ್ಲಿ ಉಪಯೋಗಿಸಿದೆ.

## ೨. ಆಲೋಚನೆ ಎಂದರೆ ಏನು ?

ನಾವು ಆಲೋಚಿಸಿದಲ್ಲದೆ ನಮಗೆ ಜ್ಞಾನ ಉಂಟಾಗುವುದಿಲ್ಲ. ಆಲೋಚನೆ ಎಂದರೆ ಏನು ? ಆಲೋಚನೆ ಎಂಬ ಪದವನ್ನು ನಾವು ಅನೇಕ ಅರ್ಥಗಳಲ್ಲಿ ಬಳಸುತ್ತೇವೆ. ನಮ್ಮ ಮನಸ್ಸಿಗೆ ಹೊಳೆಯುವ, ಅಥವ ಮನಸ್ಸಿನಲ್ಲಿ ಹಾದು ಹೋಗುವ ವ್ಯಾಪಾರಗಳೆಲ್ಲ ಆಲೋಚನೆಗಳೆಂದು ಹೇಳುತ್ತೇವೆ. ಈ ಆಲೋಚನೆಗಳು ಹಗಲುಕನಸುಗಳಾಗಿರಬಹುದು, ಕಲ್ಪನೆಗಳಾಗಿರಬಹುದು, ಗೊತ್ತುಗುರಿ ಇಲ್ಲದ ಭಾವನೆಗಳ ಪರಂಪರೆಯಾಗಿರಬಹುದು. ಮಾನಸಿಕ ಕ್ರಿಯೆಗಳನ್ನೆಲ್ಲ ಆಲೋಚನೆ ಎಂದು ಹೇಳಿದಾಗ ಅದಕ್ಕೆ ನಿರ್ದಿಷ್ಟವಾದ ಸ್ಪಷ್ಟವಾದ ಅರ್ಥವಿಲ್ಲ. ನಮಗೆ ಸಾದೃಶ್ಯವಾಗಿ ಗೋಚರವಾಗದ, ನಮ್ಮ ಕಣ್ಣಿಗೆ ಕಾಣದ ವಿಚಾರಗಳನ್ನು ತಿಳಿಯುವುದು ಆಲೋಚನೆ ಎಂದು ಹೇಳುವುದುಂಟು. ಇದು ಆಲೋಚನೆಯ ಎರಡನೆಯ ಅರ್ಥ. ನಾವು ಯಾವುದನ್ನು ನಂಬುತ್ತೇವೆಯೋ ಅದು ನಮ್ಮ ಆಲೋಚನೆ ಎಂಬುದು ಮೂರನೆಯ ಅರ್ಥ. ನಾವು ನಂಬಿದ್ದು ಆಧಾರ ಇಲ್ಲದ್ದೂ, ಪರೀಕ್ಷೆ ಮಾಡದ್ದೂ ಆಗಿರಬಹುದು. ಅಥವಾ ಸಕಾರಣವಾಗಿ, ವಿಚಾರಮಾಡಿ ನಿಶ್ಚಯಿಸಿದ್ದಾಗಬಹುದು. ಒಬ್ಬನು "ಕರಿಯಪ್ಪ ಕಳ್ಳ" ಎಂದು ನಂಬಬಹುದು. "ಅದು ಹೇಗೆ" ಎಂದು ಕೇಳಿದಾಗ ಅವನು "ಇವನನ್ನು ಕಂಡರೆ ನನಗೆ ಹಾಗೆ ಅನ್ನಿಸುತ್ತದೆ" ಎಂದು ಉತ್ತರ ಕೊಡಬಹುದು. ಅಥವಾ "ಇಲ್ಲಿ ಒಡೆದು ತೆಗೆದ ಕಿಟಕಿಯ ಮೇಲಿರುವ ಹೆಬ್ಬೆಟ್ಟಿನ ಗುರುತು ಇವನದೇ. ಇಲ್ಲಿ ಹೆಜ್ಜೆಯಲ್ಲಿ ಕಾಣುವ ಲಾಳದ ಗುರುತು ಇವನ ಜೋಡಿಗೆ ಕಟ್ಟಿರುವ ಲಾಳದ ಗುರುತು ಒಂದೇ. ಆದ್ದರಿಂದ ಇವನೇ ಕಳ್ಳ" ಎಂದು ಹೇಳಬಹುದು. ಮೊದಲನೆಯ ನಂಬಿಕೆ ಸರಿಯಾದ ಕಾರಣವಿಲ್ಲದ್ದು. ಎರಡನೆಯದು ಸರಿಯಾದ ಆಧಾರ ಉಳ್ಳದ್ದು. ತರ್ಕಶಾಸ್ತ್ರ ವಿಚಾರಮಾಡುವ ನಂಬಿಕೆಗಳು ಹೀಗೆ ಆಧಾರಯುತವಾದುವು ; ಸರಿಯಾದ ಕಾರಣ ಉಳ್ಳವು ; ಸದ್-ಹೇತು ಉಳ್ಳವು. ತರ್ಕಶಾಸ್ತ್ರದಲ್ಲಿ ನಾವು ಯೋಚನೆ ಎಂಬ ಪದವನ್ನು ಉಪಯೋಗಿಸುವುದು ಸರಿಯಾದ ಕಾರಣವುಳ್ಳ ನಂಬಿಕೆಗಳು ಎಂಬ ಅರ್ಥದಲ್ಲಿ. ನ್ಯಾಯಬದ್ಧವಾದ ನಂಬಿಕೆಗಳಿಗೆ ಕಾರ್ಯಕಾರಣ ಸಂಬಂಧ, ಆಧಾರ-ಆಧೇಯ ಸಂಬಂಧ, ಗುಣ ಗುಣಿ ಸಂಬಂಧ, ಅವಯವ ಅವಯವಿ ಸಂಬಂಧ ಮುಂತಾದುವು ತಳಹದಿಯಾಗಿವೆ. ನ್ಯಾಯಬದ್ಧವಾದ, ಸದ್ಧೇತು ಉಳ್ಳ ಜ್ಞಾನಕ್ಕೆ ಪ್ರಮಾ ಎಂದು ಹೆಸರು. ಪ್ರಮೆಗೆ ಸಾಧನ ಪ್ರಮಾಣ. ಇಂಥ ಸಾಧನಗಳನ್ನು ವಿಮರ್ಶಿಸುವ ಶಾಸ್ತ್ರ ಪ್ರಮಾಣಶಾಸ್ತ್ರ.




## ೩. ಶಾಸ್ತ್ರ ಎಂದರೆ ಏನು?

ಪ್ರಮಾಣಗಳನ್ನು ತಿಳಿಸುವ ಶಾಸ್ತ್ರ ತರ್ಕಶಾಸ್ತ್ರ ಎಂದು ಹೇಳಿದಾಗ "ಶಾಸ್ತ್ರ" ಎಂಬ ಪದಕ್ಕೆ ಅರ್ಥವೇನು? ನಾವು ನಿತ್ಯವ್ಯವಹಾರದಲ್ಲಿ ಉಪಯೋಗಿಸುವ ಆಲೋಚನೆಯ ವಿಧಾನವನ್ನು ಶಾಸ್ತ್ರ ಎಂದು ಕರೆಯುವುದಿಲ್ಲ. ನಾವು ನಮ್ಮ ದಿನಚರಿಯ ಜೀವನದಲ್ಲಿ ಕಲ್ಲು, ಮಣ್ಣು, ನೀರು, ಬೆಂಕಿ, ಮುಂತಾದ ಭೌತಪದಾರ್ಥಗಳನ್ನೂ, ಗಿಡ, ಮರ, ಬಳ್ಳಿ ಮುಂತಾದ ಸಸ್ಯಗಳನ್ನೂ, ಹಸು, ಕುದುರೆ, ನಾಯಿ ಮುಂತಾದ ಪ್ರಾಣಿಗಳನ್ನೂ ಕುರಿತು ಯೋಚಿಸುತ್ತೇವೆ. ಆದರೆ ಅವುಗಳ ವಿಚಾರವಾದ ನಮ್ಮ ತಿಳಿವು ನಿರ್ದಿಷ್ಟವಾದುದೂ ಅಲ್ಲ, ನಿರ್ದುಷ್ಟವಾದುದೂ ಅಲ್ಲ. ಭತ್ತ, ರಾಗಿ, ತೊಗರಿ, ಇವು ಧಾನ್ಯಗಳು ಎಂದು ನಮಗೆ ಗೊತ್ತು. ಮೇಕೆ, ಕುರಿ, ಹಸು, ಕುದುರೆ, ಬೆಕ್ಕು, ನಾಯಿ ಇವು ಪ್ರಾಣಿಗಳು ಎಂಬುದೂ ನಮಗೆ ಗೊತ್ತು. ಎಕ್ಕದಗಿಡ, ಬೇಲದ ಮರ, ಮಾವಿನಮರ ಮುಂತಾದುವು ಸಸ್ಯಗಳೆಂದೂ ನಮಗೆ ಗೊತ್ತು. ಆದರೆ ಇವುಗಳ ನಿರ್ದಿಷ್ಟಸ್ವಭಾವವೇನು? ಇವುಗಳ ಪರಸ್ಪರ ಸಂಬಂಧಗಳು ಯಾವುವು? ಇವುಗಳಿಗಿರುವ ವ್ಯತ್ಯಾಸಗಳು ಯಾವುವು? ಇವುಗಳ ಲಕ್ಷಣಗಳೇಸು, ಇವುಗಳ ನಡವಳಿಕೆಗಳು ಯಾವ ನಿಯಮಗಳಿಗೆ ಒಳಪಟ್ಟಿವೆ? ಎಂದು ನಮ್ಮನ್ನು ಕೇಳಿದಾಗ ನಾವು ಸಮಂಜಸವಾದ ಉತ್ತರ ಹೇಳಲು ಶಕ್ತರಾಗಿರುವುದಿಲ್ಲ. ಅಂದರೆ ನಮ್ಮ ತಿಳಿವು ವ್ಯವಸ್ಥಿತವಾದ ಜ್ಞಾನವಲ್ಲ, ಕ್ರಮಬದ್ಧವಾದ ಜ್ಞಾನವಲ್ಲ. ಆದರೆ ಅದೇ ಪ್ರಶ್ನೆಗಳನ್ನು ಭೌತಶಾಸ್ತ್ರಜ್ಞನನ್ನೋ, ಸಸ್ಯಶಾಸ್ತ್ರಜ್ಞನನ್ನೋ, ಪ್ರಾಣಿಶಾಸ್ತ್ರಜ್ಞನನ್ನೋ ಕೇಳಿದರೆ ಅವನು ಆ ಪ್ರಶ್ನೆಗಳಿಗೆ ಸಮಂಜಸವಾದ ಉತ್ತರ ಕೊಡುತ್ತಾನೆ. ಏಕೆಂದರೆ ಅವನು ಆ ವಿಷಯಗಳನ್ನು ಪರೀಕ್ಷಿಸಿ, ಪ್ರತ್ಯೇಕಿಸಿ, ವರ್ಗೀಕರಣಮಾಡಿ ಸಂಶೋಧನೆಗಳನ್ನು ನಡೆಸಿ ಅವುಗಳ ವೈಶಿಷ್ಟ್ಯವನ್ನೂ ಅವುಗಳು ಒಳಪಟ್ಟಿರುವ ನಿಯಮಗಳನ್ನೂ ವ್ಯವಸ್ಥಿತವಾಗಿ ತಿಳಿದಿರುತ್ತಾನೆ. ಶಾಸ್ತ್ರಜ್ಞಾನವು ವ್ಯವಸ್ಥಿತವಾದ ಜ್ಞಾನ ಅಂದರೆ ಕ್ರಮಬದ್ಧವಾದ ಜ್ಞಾನ, ಸಕಾರಣವಾದ ಜ್ಞಾನ.

ಕ್ರಮಬದ್ಧವಾದ ವ್ಯವಸ್ಥಿತವಾದ ಆಲೋಚನೆಯ ಲಕ್ಷಣಗಳು ಮೂರು: (೧) ಕ್ರಮಬದ್ಧವಾದ ಯೋಚನೆ ನಿರ್ದಿಷ್ಟವಾದ ಕೆಲವು ಅಂಶಗಳಿಂದ ಪ್ರಾರಂಭಿಸಿ, ಅವುಗಳನ್ನು ಬಿಡಿಸಿ ಬಿಡಿಸಿ ನೋಡಿ ಅಂದರೆ ವಿಭಜಿಸಿ, ಅವುಗಳನ್ನು ವಿಂಗಡಿಸಿ, ಕ್ರಮಕ್ರಮವಾಗಿ ಒಂದೊಂದಕ್ಕೂ ಇರುವ ಸಂಬಂಧವನ್ನು ಸ್ಪಷ್ಟಗೊಳಿಸಿ ಕೊನೆಯಲ್ಲಿ ಅವುಗಳನ್ನು ಒಂದುಗೂಡಿಸುವ ಸೂತ್ರ

ವನ್ನು ಅಥವ ನಿಯಮವನ್ನು ಹೊರಗೆಡಹುವುದು. ಅದು ವಿಭಜನೆ ಮತ್ತು ಸಂಯೋಜನೆ ಎರಡನ್ನೂ ಒಳಕೊಂಡಿದೆ. (೨) ವ್ಯವಸ್ಥಿತವಾದ ಜ್ಞಾನ ವಿವೇಚನೆಯಿಂದ (Reflective thinking) ಕೂಡಿದ ಜ್ಞಾನ, ವಿಚಾರಪರ ವಾದ ಜ್ಞಾನ (Critical thinking). ಸರಿಯಾದ ಕಾರಣ ತಿಳಿಯದೆ ಅದು ಏನನ್ನೂ ನಂಬುವುದಿಲ್ಲ. (೩) ಅದು ಒಂದು ಗೊತ್ತಾದ ಗುರಿಯುಳ್ಳ ಯೋಚನೆ, ವ್ಯವಸ್ಥಿತವಾದ ಯೋಚನೆ. ಒಂದು ನಿರ್ದಿಷ್ಟವಾದ ಸಮಸ್ಯೆ ಯನ್ನು ಲಕ್ಷ್ಯದಲ್ಲಿಟ್ಟುಕೊಂಡು ಅದನ್ನು ಪರಿಹರಿಸುವ ತಿಳಿವನ್ನು ಬೆಳೆಸು ವುದು. ಇದಕ್ಕೆ ಒಂದು ಉದಾಹರಣೆಯನ್ನು ಕೊಟ್ಟು ಸ್ಪಷ್ಟಪಡಿಸಬಹುದು.

ಹತ್ತೊಂಬತ್ತನೆಯ ಶತಮಾನದ ಕೊನೆಯ ಭಾಗದಲ್ಲಿ ಪಾಶ್ಚಾತ್ಯ ವೈದ್ಯರಿಗೆ ಅದುವರೆಗೂ ಅವರಿಗೆ ಪರಿಚಯವಿಲ್ಲದ ಒಂದು ವಿಧವಾದ ಜ್ವರಕ್ಕೆ ಏನು ಕಾರಣ ಎಂಬ ಸಮಸ್ಯೆ ತಲೆದೋರಿತು. ಈ ಜ್ವರ ಸಾಧಾರಣವಾಗಿ ಜೌಗು ಪ್ರದೇಶಗಳಲ್ಲಿ ಕಾಣಬರುತ್ತಿತ್ತು. ಆ ಜೌಗುಪ್ರದೇಶಗಳಲ್ಲಿ ಕೆಟ್ಟ ಗಾಳಿ ಬೀಸುತ್ತಿದ್ದುದನ್ನು ನೋಡಿ ವೈದ್ಯರು ಈ ಜ್ವರಕ್ಕೆ ಜೌಗುಪ್ರದೇಶದ ಕೆಟ್ಟ ಗಾಳಿ ಕಾರಣವೆಂದು ಊಹಿಸಿ ಅದಕ್ಕೆ ಮಲೇರಿಯ (ಕೆಟ್ಟ ಗಾಳಿಯಿಂದ ಹುಟ್ಟಿದ ಜ್ವರ) ಎಂದು ಹೆಸರಿಟ್ಟರು. ಆದರೆ ಈ ಜ್ವರಪೀಡಿತರನ್ನು ಹೆಚ್ಚು ಹೆಚ್ಚಾಗಿ ಪರೀಕ್ಷಿಸಿ ನೋಡಿದಾಗ, ಜೌಗು ಇಲ್ಲದ ಪ್ರದೇಶಗಳಲ್ಲೂ ಜನರು ಈ ಜ್ವರದಿಂದ ನರಳುತ್ತಿದ್ದದ್ದು ಅವರ ಗಮನಕ್ಕೆ ಬಂದು ಬರಿಯ ಜೌಗು ಪ್ರದೇಶದ ಕೆಟ್ಟ ಗಾಳಿ ಇದಕ್ಕೆ ಕಾರಣವೆಂಬುದು ಸಂಶಯಾಸ್ಪದವಾಯಿತು. ಆದ್ದರಿಂದ ವೈದ್ಯಶಾಸ್ತ್ರಜ್ಞರು ಈ ವಿಷಯಕ್ಕೆ ಸಂಬಂಧಪಟ್ಟ ಎಲ್ಲ ಅಂಶ ಗಳನ್ನು ಬಿಡಿಸಿ ಬಿಡಿಸಿ, ಅವುಗಳಲ್ಲಿ ಮಲೇರಿಯಾ ಜ್ವರಕ್ಕೆ ನೇರವಾಗಿ ಸಂಬಂಧ ಪಡುವ ಅಂಶವನ್ನು ಪ್ರತ್ಯೇಕಿಸಬೇಕಾಯಿತು. ಹೀಗೆ ಪ್ರಯತ್ನಿಸಿದಾಗ ಸೊಳ್ಳೆಗಳು ಹೆಚ್ಚಾಗಿ ಇದ್ದ ಕಡೆಯಲ್ಲಿ ಈ ಜ್ವರ ಹೆಚ್ಚಾಗಿ ಕಂಡುಬಂತು. ಆದ್ದರಿಂದ ಅವರು ಈ ಜ್ವರಕ್ಕೆ ಸೊಳ್ಳೆ ಕಾರಣ ಎಂದು ಊಹಿಸಿದರು. ಆದರೆ ಕೆಲವು ಕಡೆ ಸೊಳ್ಳೆಗಳಿದ್ದರೂ ಆ ಪ್ರದೇಶದ ಜನರಿಗೆ ಈ ಜ್ವರದ ಕಾಟವಿಲ್ಲ ದ್ದನ್ನು ನೋಡಿ, ಎಲ್ಲ ಸೊಳ್ಳೆಗಳೂ ಇದಕ್ಕೆ ಕಾರಣವಾಗದಿರಬಹುದೆಂದು ಪರೀಕ್ಷಕರಿಗೆ ಹೊಳೆಯಿತು. ಆದ್ದರಿಂದ ಇವರು ಈ ವಿಷಯವನ್ನು ಇನ್ನೂ ಹೆಚ್ಚಾಗಿ ಬಿಡಿಸಿ ಬಿಡಿಸಿ ನೋಡಬೇಕಾಯಿತು. ಸೊಳ್ಳೆಗಳಲ್ಲಿ ಯಾವ ಸೊಳ್ಳೆ ಗಳು ಮಲೇರಿಯಾಕ್ಕೆ ನೇರವಾಗಿ ಕಾರಣ ಯಾವುವು ಅಲ್ಲ ಎಂಬ ವಿಚಾರದಲ್ಲಿ ಹೊಸ ಪರಿಶೋಧನೆಗಳು ಪ್ರಾರಂಭವಾದುವು. ಈ ಪರಿಶೋಧನೆಯ ಪರಿಣಾಮ ವಾಗಿ ಸೊಳ್ಳೆಗಳಲ್ಲಿ ಎರಡು ಮುಖ್ಯ ಜಾತಿಗಳಿರುವುದೂ ಅವುಗಳಲ್ಲಿ

ಅನಾಫಲೀಸ್ ಎಂಬ ಜಾತಿಯ ಸೊಳ್ಳೆ ಕಚ್ಚಿದವರಿಗೆ ಹೆಚ್ಚಾಗಿ ಈ ಜ್ವರ ಬರುತ್ತಿದ್ದುದೂ ಅವರ ಗಮನಕ್ಕೆ ಬಂತು. ಆದ್ದರಿಂದ ಅವರು ಅನಾಫಲೀಸ್ ಸೊಳ್ಳೆ ಮಲೇರಿಯಾಕ್ಕೆ ಕಾರಣ ಎಂದು ನಿರ್ಧರಿಸಿದರು. ಇನ್ನೂ ಹೆಚ್ಚಾಗಿ ಪರೀಕ್ಷೆಯನ್ನು ಮುಂದುವರಿಸಿದಾಗ, ಅನಾಫಲೀಸ್ ಸೊಳ್ಳೆ ಕಚ್ಚಿದ ಕೆಲವರಿಗೆ ಈ ಜ್ವರ ಬಾರದಿದ್ದುದನ್ನು ಕಂಡು ತಮ್ಮ ಪರೀಕ್ಷೆಯನ್ನು ಮತ್ತೂ ಮುಂದುವರಿಸಬೇಕಾಯಿತು. ಈ ವಿಷಯವನ್ನು ಇನ್ನೂ ಸೂಕ್ಷ್ಮವಾಗಿ ಪರಿಶೀಲಿಸಿದಾಗ ಮಲೇರಿಯಾ ಜ್ವರದಿಂದ ನರಳುತ್ತಿದ್ದವರನ್ನು ಕಚ್ಚಿದ ಅನಾಫಲೀಸ್ ಸೊಳ್ಳೆಗಳು ಇತರರನ್ನು ಕಚ್ಚಿದಾಗ ಅವರಿಗೆ ಮಲೇರಿಯಾ ಬರುತ್ತಿದ್ದುದೂ, ಮಲೇರಿಯಾ ಜ್ವರದಿಂದ ನರಳದಿದ್ದವರನ್ನು ಕಚ್ಚಿದ ಸೊಳ್ಳೆಗಳು ಇತರರನ್ನು ಕಚ್ಚಿದಾಗ ಅವರಿಗೆ ಮಲೇರಿಯಾ ಬಾರದಿದ್ದದೂ ಅವರ ಗಮನಕ್ಕೆ ಬಂತು. ಈ ವಿಷಯವನ್ನು ಇನ್ನೂ ಸೂಕ್ಷ್ಮವಾಗಿ ವಿಭಜಿಸಿದ ಮೇಲೆ ಮಲೇರಿಯಾ ಜ್ವರಕ್ಕೆ ಆದರಿಂದ ನರಳುವವನ ರಕ್ತದಲ್ಲಿ ಬೆಳೆಯುತ್ತಿರುವ ಒಂದು ವಿಧವಾದ ಅಣುಜೀವಿಗಳೇ ಕಾರಣ ಎಂದು ಗೊತ್ತಾಯಿತು. ಜ್ವರಬಂದವನ ರಕ್ತವನ್ನು ಅನಾಫಲೀಸ್ ಸೊಳ್ಳೆಯು ಹೀರಿದಾಗ ಆ ಅಣುಜೀವಿಗಳು ಸೊಳ್ಳೆಯ ದೇಹವನ್ನು ಹೊಕ್ಕು ಅಲ್ಲಿ ಬೆಳೆದು ಸೊಳ್ಳೆ ಇತರರನ್ನು ಕಚ್ಚಿದಾಗ ಅವು ಅವರ ರಕ್ತಕ್ಕೆ ಸೇರಿ ಅವರಲ್ಲಿ ರೋಗ ಹುಟ್ಟಲು ಕಾರಣವಾಗುತ್ತವೆ. ಅನಾಫಲೀಸ್ ಸೊಳ್ಳೆ ಮಲೇರಿಯಾಕ್ಕೆ ನೇರವಾದ ಕಾರಣವಲ್ಲ; ಅದು ಮಲೇರಿಯಾ ಸೋಂಕಿನ ವಾಹಕ.

ಮಲೇರಿಯಾ ಪರಿಶೋಧನೆ ಕ್ರಮಬದ್ಧವಾದ ಆಲೋಚನೆ. ಅದು ಕ್ರಮಬದ್ಧವಾದ ಆಲೋಚನೆಯ ಮೂರು ಲಕ್ಷಣಗಳನ್ನೂ ಒಳಗೊಂಡಿರುತ್ತದೆ. ಮಲೇರಿಯಾ ಪರಿಶೋಧನೆಯ ಉದ್ದಕ್ಕೂ ವಿಭಜನೆ ನಿರ್ದಿಷ್ಟವಾಗಿ ಕಾಣುತ್ತದೆ. ವಿಭಜನೆಯ ಮೂಲಕ ಮಲೇರಿಯಾಕ್ಕೆ ಅವಶ್ಯಕವಾದ ಅಂಶವನ್ನು ಅನಾವಶ್ಯಕವಾದ ಅಂಶಗಳಿಂದ ಕ್ರಮಕ್ರಮವಾಗಿ ಬೇರ್ಪಡಿಸಿದೆ. ಎರಡನೆಯದಾಗಿ, ಅದು ವಿವೇಚನೆಯಿಂದ ಕೂಡಿದ ಆಲೋಚನೆ. ಒಂದೊಂದು ಊಹೆಯನ್ನೂ ಪರೀಕ್ಷಿಸಿ, ಅದರಲ್ಲಿರುವ ಲೋಪದೋಷಗಳನ್ನು ಹೊರಹಾಕಿ ಕೊನೆಯಲ್ಲಿ ರುಜುವಾತಾದ ಅಂಶವನ್ನು ಮಾತ್ರ ನಿಜವೆಂದು ನಂಬುತ್ತದೆ. ಮೂರನೆಯದಾಗಿ, ಅದು ಒಂದು ಗೊತ್ತಾದ ಗುರಿಯುಳ್ಳ ಯೋಚನೆ. ಮಲೇರಿಯಾಕ್ಕೆ ಕಾರಣವೇನು ಎಂದು ಕಂಡುಹಿಡಿಯುವುದು ಅದರ ಗುರಿ. ಆ ಗುರಿ ಮುಟ್ಟುವ ವರೆಗೂ ಆ ಆಲೋಚನೆ ವಿಶ್ರಾಂತಿ ಹೊಂದುವುದಿಲ್ಲ.

ಇತರ ಶಾಸ್ತ್ರಗಳಂತೆಯೇ ತರ್ಕಶಾಸ್ತ್ರವೂ ವ್ಯವಸ್ಥಿತವಾದ ಜ್ಞಾನ. ತಿಳಿವಿನ ಲಕ್ಷಣವೇನು, ತಿಳಿವು ಎಷ್ಟು ಬಗೆಯಾಗಿದೆ, ಸರಿಯಾದ ತಿಳಿವಿನ ನಿಯಮಗಳು ಯಾವುವು ಎಂಬುದನ್ನು ಕ್ರಮಬದ್ಧವಾಗಿ ತಿಳಿಸುತ್ತದೆ. ಅದು ತಿಳಿವಿನ ವಿಚಾರವಾಗಿ ವ್ಯವಸ್ಥಿತಜ್ಞಾನ.

ಶಾಸ್ತ್ರವು ವ್ಯವಸ್ಥಿತವಾದ ಜ್ಞಾನವಾದರೂ, ಎಲ್ಲ ಶಾಸ್ತ್ರಗಳೂ ಒಂದೇ ಬಗೆಯವಲ್ಲ. ಸ್ಥೂಲವಾಗಿ ಇವುಗಳನ್ನು ವಾಸ್ತವಿಕಶಾಸ್ತ್ರ (Positive sciences) ಗಳೆಂದೂ, ಪ್ರಮಾಣಶಾಸ್ತ್ರ (Normative sciences) ಗಳೆಂದೂ ವಿಂಗಡಿಸುವುದುಂಟು. ವಸ್ತುವಿನ ನೈಜಸ್ವಭಾವವನ್ನು, ವಾಸ್ತವಿಕಾಂಶವನ್ನು ಅಂದರೆ “ ಇದು ಹೀಗಿದೆ ” ಎಂಬುದನ್ನು ತಿಳಿಸುವುದು ವಾಸ್ತವಿಕಶಾಸ್ತ್ರಗಳ ಉದ್ದೇಶ. ಅವು ವಸ್ತುಗಳ ಬೆಲೆ ಏನು ಎಂಬುದನ್ನು ತಿಳಿಸುವುದಿಲ್ಲ. ಆದರೆ ಪ್ರಮಾಣಶಾಸ್ತ್ರಗಳು ನಾವು ಬಳಸುವ ಪದಾರ್ಥಗಳ, ನಾವು ಮಾಡುವ ಕೆಲಸಗಳ, ನಾವು ಆಲೋಚಿಸುವ ಯೋಚನೆಗಳ ಬೆಲೆಯನ್ನು ತಿಳಿಸುತ್ತವೆ. ಸತ್ಯ, ಧರ್ಮ, ಸೌಕರ್ಯ, ಸೌಂದರ್ಯ ಮುಂತಾದುವು ಬೆಲೆಗಳು ; ನಾವು ಅಪೇಕ್ಷಿಸಬೇಕಾದಂಥುವು—ಪುರುಷಾರ್ಥಗಳು. ಅರ್ಥಶಾಸ್ತ್ರ, ಧರ್ಮಶಾಸ್ತ್ರ, ತರ್ಕಶಾಸ್ತ್ರ, ಇವು ಪ್ರಮಾಣಶಾಸ್ತ್ರಗಳಿಗೆ ಉದಾಹರಣೆಗಳು. ಒಂದು ಉದ್ಯಮವು ಲಾಭದಾಯಕವಾದುದೆ ಇಲ್ಲವೆ ಎಂಬುದನ್ನು ಅರ್ಥಶಾಸ್ತ್ರ ನಿರ್ಧರಿಸುತ್ತದೆ; ಒಬ್ಬನ ನಡತೆ ಒಳ್ಳೆಯದೆ ಕೆಟ್ಟದ್ದೆ ಎಂಬುದನ್ನು ಧರ್ಮಶಾಸ್ತ್ರ ನಿರ್ಧರಿಸುತ್ತದೆ ; ಒಂದು ಆಲೋಚನೆ ಸರಿಯೆ ತಪ್ಪೆ ಎಂಬುದನ್ನು ತರ್ಕಶಾಸ್ತ್ರ ನಿರ್ಧರಿಸುತ್ತದೆ. ಭೌತಶಾಸ್ತ್ರ, ರಸಾಯನಶಾಸ್ತ್ರ, ಪ್ರಾಣಿಶಾಸ್ತ್ರ, ಮನಶ್ಶಾಸ್ತ್ರ ಮುಂತಾದುವು ವಾಸ್ತವಿಕ ಶಾಸ್ತ್ರಗಳು. ಭೌತಶಾಸ್ತ್ರ, ರಸಾಯನಶಾಸ್ತ್ರ ಮುಂತಾದ ನೈಸರ್ಗಿಕ ಶಾಸ್ತ್ರಗಳನ್ನು ವಿಜ್ಞಾನವೆಂದು ಕರೆಯುವುದು ವಾಡಿಕೆಯಾಗಿದೆ.

ತರ್ಕಶಾಸ್ತ್ರವನ್ನು ಬಿಟ್ಟು ಉಳಿದ ಶಾಸ್ತ್ರಗಳು ನಮಗೆ ಈ ವಿಶ್ವದ ಒಂದೊಂದು ಭಾಗದ ಜ್ಞಾನವನ್ನು ಕೊಡುತ್ತವೆ. ಭೌತಶಾಸ್ತ್ರ ಈ ವಿಶ್ವದ ಜಡವಸ್ತುಗಳ ಗುಣಗಳನ್ನೂ ಅವುಗಳ ಚಲನೆಯ ನಿಯಮಗಳನ್ನೂ ತಿಳಿಸುತ್ತದೆ. ಪ್ರಾಣಿಶಾಸ್ತ್ರ ಬಗೆಬಗೆಯ ಜೀವಿಗಳನ್ನೂ ಅವುಗಳ ಹುಟ್ಟು ಬೆಳವಣಿಗೆಯ ರೀತಿಯನ್ನೂ ತಿಳಿಸುತ್ತದೆ. ಇವುಗಳಂತೆ ತರ್ಕಶಾಸ್ತ್ರ ನಮಗೆ ವಿಶ್ವದ ಯಾವುದೊಂದು ಭಾಗದ ಜ್ಞಾನವನ್ನೂ ಕೊಡುವುದಿಲ್ಲ. ಅದು ಈ ಎಲ್ಲ ಶಾಸ್ತ್ರಗಳೂ ಕೊಡುವ ಜ್ಞಾನದ ರೂಪಗಳನ್ನೂ, ಅವು ಅನುಸರಿಸುವ ಆಲೋಚನೆಯ ವಿಧಾನಗಳನ್ನೂ ಪರಿಶೀಲಿಸಿ, ನ್ಯಾಯರೂಪಗಳನ್ನೂ ನ್ಯಾಯವಿಧಿಗಳನ್ನೂ ನಿರ್ಧರಿಸುತ್ತದೆ. ಆದುದರಿಂದ ತರ್ಕಶಾಸ್ತ್ರದ ವಿದ್ಯಾರ್ಥಿಗಳು ವಿಜ್ಞಾನ

ಮತ್ತು ಇತರ ಶಾಸ್ತ್ರಗಳ ವಿಚಾರ ಸರಣಿಯನ್ನೂ ವಿಚಾರ ವಿಧಾನಗಳನ್ನೂ ಅವುಗಳ ಚರಿತ್ರೆಯನ್ನೂ ಸ್ವಲ್ಪಮಟ್ಟಿಗೆ ತಿಳಿದುಕೊಳ್ಳುವುದು ಆವಶ್ಯಕ.

ಹೀಗೆ ಎಲ್ಲ ಶಾಸ್ತ್ರಗಳನ್ನೂ ಪರಿಶೀಲಿಸುವಾಗ ತರ್ಕಶಾಸ್ತ್ರಜ್ಞನು ಗಮನಿಸ ಬೇಕಾದುದು ಅವು ತಿಳಿಸುವ ವಿಷಯಗಳಲ್ಲ; ಆ ವಿಷಯಗಳನ್ನು ತಿಳಿಯು ವಾಗ ಆಯಾ ಶಾಸ್ತ್ರಜ್ಞರು ಉಪಯೋಗಿಸುವ ವಿಧಾನಗಳು ಮತ್ತು ಜ್ಞಾನ ರೂಪಗಳು (Forms). ಹೀಗೆ ಹೇಳಿದಾಗ ವಿಷಯವಿಲ್ಲದೆ ಬರಿಯ ಭಾವನಾ ರೂಪಗಳು ಇರುತ್ತವೆಯೆಂದು ತಿಳಿಯಕೂಡದು. ವಿಷಯವಿಲ್ಲದ ಭಾವನೆ ಇಲ್ಲ. ವಿಷಯವನ್ನು ತಿಳಿಯುವುದಕ್ಕಾಗಿಯೆ, ವಿಷಯವನ್ನು ತಿಳಿಯುವ ಸಂದರ್ಭದಲ್ಲಿಯೆ ಭಾವನಾರೂಪಗಳು ಹುಟ್ಟುವುದು. ಆದರೆ ಈ ವಿಷಯ ಗಳನ್ನು ತಿಳಿದುಕೊಳ್ಳವುದು ತರ್ಕಶಾಸ್ತ್ರದ ಕೆಲಸವಲ್ಲ. ಅವೆಲ್ಲವನ್ನೂ ತಿಳಿದು ಕೊಳ್ಳಬೇಕಾದರೆ ತರ್ಕಶಾಸ್ತ್ರಜ್ಞನು ಸರ್ವಜ್ಞನೇ ಆಗಬೇಕಾಗುತ್ತದೆ. ಇವೆಲ್ಲ ವನ್ನೂ ತಿಳಿದುಕೊಳ್ಳುವುದು ಸಾಧ್ಯವೂ ಅಲ್ಲ, ತರ್ಕಶಾಸ್ತ್ರದೃಷ್ಟಿಯಿಂದ ಅದು ಅಗತ್ಯವೂ ಅಲ್ಲ. ಶಾಸ್ತ್ರಜ್ಞಾನದಲ್ಲಿ ಅಡಗಿರುವ ಭಾವನಾರೂಪಗಳನ್ನು, ಶಾಸ್ತ್ರ ಗಳು ಪಾಲಿಸುವ ನಿಯಮಗಳನ್ನು ಲಕ್ಷ್ಯದಲ್ಲಿಟ್ಟುಕೊಳ್ಳುವುದು ತರ್ಕದ ಮುಖ್ಯ ಕೆಲಸ. ಭಾವನಾರೂಪಗಳೇ ಅದರ ವಿಷಯವಾದುದರಿಂದ, ತರ್ಕಶಾಸ್ತ್ರ ಉಳಿದೆಲ್ಲ ಶಾಸ್ತ್ರಗಳಿಗಿಂತಲೂ ಮುಖ್ಯವಾಗಿ ಭಾವನಾತ್ಮಕವಾದುದು (Formal science). ಅದು ಎಲ್ಲ ಶಾಸ್ತ್ರಗಳ ತಳಹದಿಯಾದ ಭಾವನೆಗಳನ್ನೂ ಪರೀಕ್ಷಿಸುವುದರಿಂದ ಅದನ್ನು ಶಾಸ್ತ್ರಗಳ ಶಾಸ್ತ್ರ (Science of sciences) ಎಂದು ಹೇಳುವುದುಂಟು. ಹೀಗೆ ಹೇಳಿದಾಗ ತರ್ಕಶಾಸ್ತ್ರ ಎಲ್ಲ ಶಾಸ್ತ್ರಗಳಿ ಗಿಂತಲೂ ಮೇಲಾದ ಶಾಸ್ತ್ರವೆಂದಾಗಲಿ, ಅಥವಾ ಎಲ್ಲ ಶಾಸ್ತ್ರಗಳ ಸಾರ ವೆಂದಾಗಲಿ ತಿಳಿಯಕೂಡದು. ಹಾಗೆ ತಿಳಿದುಕೊಳ್ಳುವುದು ಒಂದು ಪ್ರಮಾದ. ಇದನ್ನು ಶಾಸ್ತ್ರಗಳ ಶಾಸ್ತ್ರವೆಂದು ಕರೆದಾಗ ಅದು ಎಲ್ಲ ಶಾಸ್ತ್ರಗಳಿಗೂ ಅಗತ್ಯವಾದ ಪ್ರಮಾಣಗಳನ್ನು ತಿಳಿಸುವ ಶಾಸ್ತ್ರವೆಂದು ಮಾತ್ರ ಅರ್ಥಮಾಡಿ ಕೊಳ್ಳಬೇಕು. ಅದು ಉಪಯೋಗಕರವಾಗಿರುವುದು ಪ್ರಮಾಣಶಾಸ್ತ್ರವಾದದ್ದ ರಿಂದ, ಪ್ರಾಮಾಣಿಕವಾದ ತಿಳಿವಿನ ರೂಪಗಳನ್ನೂ, ಆಧಾರ ನಿಯಮಗಳನ್ನೂ ತಿಳಿಸುವ ಶಾಸ್ತ್ರವಾದದ್ದರಿಂದ. ಪ್ರಮಾಣಶಾಸ್ತ್ರವಾಗಿ, ಹೇತು ವಿದ್ಯೆಯಾಗಿ ಇದರ ಉಪಯೋಗ ಸಾರ್ವತ್ರಿಕವಾದದ್ದು (Universal). ಭಾಷೆಯನ್ನು ಬಳಸುವವನಿಗೆ ಪಾಣಿನೀಯ (=ವ್ಯಾಕರಣ) ಸಾರ್ವತ್ರಿಕ ಉಪಯೋಗಕಾರಿ ಯಾಗಿರುವಂತೆಯೆ ಜ್ಞಾನವನ್ನು ಬಳಸುವವನಿಗೆ ಕಾಣಾದಂ (=ತರ್ಕ) ಸರ್ವತ್ರಿಕ ಉಪಕಾರಿ. " ಕಾಣಾದಂ ಪಾಣಿನೀಯಂ ಚ ಸರ್ವಶಾಸ್ತ್ರೋಪ

ಕಾರಕಂ.” ಈ ಶಾಸ್ತ್ರದ ಸಾರ್ವತ್ರಿಕ ಉಪಕಾರವನ್ನು ಕುರಿತು ಕೌಟಿಲ್ಯನು ಈ ರೀತಿ ಹೊಗಳಿರುತ್ತಾನೆ:

ಹೇತುಭಿರನ್ವೇಷಮಾಣಾ ಆನ್ವೀಕ್ಷಿಕೀ ಲೋಕಸ್ಯೋಪಕರೋತಿ ವ್ಯಸನೇ ಅಭ್ಯುದಯೇ ಚ ಬುದ್ಧಿಮವಸ್ಥಾಪಯತಿ ಪ್ರಜ್ಞಾವಾಕ್ಯ ಕ್ರಿಯಾ ವೈಶಾರದ್ಯಂ ಚ ಕರೋತಿ.

ಪ್ರದೀಪಃ ಸರ್ವವಿದ್ಯಾನಾಂ ಉಪಾಯಃ ಸರ್ವಕರ್ಮಣಾಂ
ಆಶ್ರಯಃ ಸರ್ವಧರ್ಮಾಣಾಂ ಶಾಶ್ವತಾನ್ವೀಕ್ಷಿಕೀಮತಾ

(ಜ್ಞಾನಸಕ್ಕೆ ಆಧಾರವಾದ) ಹೇತುವನ್ನು ಅಂದರೆ ಕಾರಣವನ್ನು ಅನ್ವೇಷಣ ಮಾಡುವ ಆನ್ವೀಕ್ಷಿಕೀ (ತರ್ಕಶಾಸ್ತ್ರ) ಲೋಕಕ್ಕೆ ಉಪಕಾರಿ. ವ್ಯಸನದಲ್ಲೂ ಅಭ್ಯುದಯದಲ್ಲೂ ಬುದ್ಧಿ ಸ್ತಿಮಿತವಾಗಿರುವಂತೆ ಪಳಗಿಸುತ್ತದೆ, ಎಚ್ಚರಿಕೆಯಿಂದ ಮಾತನಾಡುವುದನ್ನು ಕಲಿಸುತ್ತದೆ. ಆನ್ವೀಕ್ಷಿಕೀ ಎಲ್ಲ ವಿದ್ಯೆಗಳಿಗೂ ಬೆಳಕು, ಎಲ್ಲ ಕಾರ್ಯಗಳಿಗೂ ಉಪಾಯ ತಿಳಿಸುತ್ತದೆ. ಎಲ್ಲ ಧರ್ಮಗಳಿಗೂ ಆಶ್ರಯ. ಇದು ಲೌಕಿಕಶಾಸ್ತ್ರ. ಯಾವುದೊಂದು ಕಕ್ಷಿಯನ್ನಾಗಲಿ, ಸಂಪ್ರದಾಯವನ್ನಾಗಲಿ, ಮತವನ್ನಾಗಲಿ ಅನುಸರಿಸುವ ಶಾಸ್ತ್ರವಲ್ಲ. ನಿರ್ಮತ್ಸರವಾಗಿ ಎಲ್ಲ ವಾದಗಳನ್ನೂ ಪರೀಕ್ಷಿಸಿ ಅವುಗಳ ಸರಿ ತಪ್ಪುಗಳನ್ನು ಹೊರಹಾಕಲು ಸಹಾಯಮಾಡುತ್ತದೆ.

ಎಲ್ಲಕ್ಕಿಂತಲೂ ಮುಖ್ಯವಾದುದು ಬುದ್ಧಿಯಮೇಲಿನ ಇದರ ಪರಿಣಾಮ; ಇದು ಬುದ್ಧಿಗೆ ಸರಿಯಾದ ವ್ಯಾಯಾಮವನ್ನು ಕೊಟ್ಟು ಅದನ್ನು ಕುದುರಿಸುತ್ತದೆ. ವೆಲ್ಟನ್ ಎಂಬ ಆಂಗ್ಲ ತಾರ್ಕಿಕನು ಹೇಳುವಂತೆ “ಬುದ್ಧಿಯನ್ನು ಹಿಡಿತದಲ್ಲಿಟ್ಟುಕೊಳ್ಳುವಂತೆ ಪಳಗಿಸುವುದು ತರ್ಕದ ಮುಖ್ಯ ಉಪಯೋಗ. ಬುದ್ಧಿಯನ್ನು ನ್ಯಾಯಬದ್ಧವಾಗಿ ಕುದುರಿಸುವುದು ಎಲ್ಲ ಶಾಸ್ತ್ರಗಳ ಮುಖ್ಯ ಗುರಿಯಾಗಬೇಕು. ಅನೇಕ ಶಾಸ್ತ್ರ ವಿಷಯಗಳ ಸಂಗ್ರಹಣಕ್ಕಿಂತಲೂ, ಸರಿಯಾಗಿ ಯೋಚಿಸುವ ಶಕ್ತಿಯನ್ನು ಬೆಳಸುವುದು, ಪರಿಪೂರ್ಣಗೊಳಿಸುವುದು ಎಲ್ಲ ಶಾಸ್ತ್ರಗಳ ಮುಖ್ಯ ಉದ್ದೇಶವಾಗಿರಬೇಕು.” “ಈ ಲೋಕದಲ್ಲಿ ಮನುಷ್ಯನಿಗಿಂತ ಮೇಲಾದುದಿಲ್ಲ; ಮನುಷ್ಯನಲ್ಲಿ ಮನಸ್ಸಿಗಿಂತ ಉತ್ತಮವಾದುದು ಬೇರೊಂದಿಲ್ಲ. ಸಮತೂಕವಾದ, ಸಮಗ್ರವಾಗಿ ಬೆಳೆದ ಮನಸ್ಸನ್ನು ಪಡೆಯುವುದು ನಿಜವಾಗಿ ಒಂದು ಸೌಭಾಗ್ಯ. ತರ್ಕವನ್ನು ಅಭ್ಯಾಸಮಾಡಿ, ನ್ಯಾಯಬದ್ಧವಾಗಿ ವಿಚಾರಮಾಡುವಂತೆ ಮನಸ್ಸನ್ನು ಪಳಗಿಸಿದವನು ತಾನು ಆಸಕ್ತಿ

ಪಡೆದಿರುವ ಎಲ್ಲ ವಿದ್ಯೆಗಳಲ್ಲೂ, ಎಲ್ಲ ಉದ್ಯಮಗಳಲ್ಲೂ ಅನುಕೂಲವಾದ ಫಲವನ್ನು ಪಡೆಯುತ್ತಾನೆ."

## ೪. ತರ್ಕಶಾಸ್ತ್ರ ಮತ್ತು ವಾದಕಲೆ

ತರ್ಕವು ಶಾಸ್ತ್ರವಲ್ಲದೆ ಕಲೆಯೂ ಹೌದೆ ಎಂದು ಕೆಲವರು ಪ್ರಶ್ನಿಸುವುದುಂಟು. ಅದು ಶಾಸ್ತ್ರವೆಂಬುದು ನಿರ್ವಿವಾದ; ಅದು ಸರಿಯಾದ ತಿಳಿವಿನ ವಿಚಾರವಾದ ವ್ಯವಸ್ಥಿತ ಜ್ಞಾನ. ಜ್ಞಾನವಿಚಾರವಾದ ತಿಳಿವನ್ನು ಕೊಡುವುದು ಅದರ ಮೂಲಕರ್ತವ್ಯವೆಂಬುದರಲ್ಲಿ ಭಿನ್ನಾಭಿಪ್ರಾಯವಿಲ್ಲ. ಜ್ಞಾನವನ್ನು ಕೊಡುವುದು ಶಾಸ್ತ್ರದ ಕೆಲಸ. ಕುಶಲತೆಯನ್ನು ಕುದುರಿಸುವುದು ಕಲೆಯ ಕೆಲಸ. ಸರಿಯಾದ ತಿಳಿವಿನ ನಿಯಮಗಳನ್ನು ತಿಳಿಸುವುದಲ್ಲದೆ, ಸರಿಯಾಗಿ ಆಲೋಚಿಸುವ ಕುಶಲತೆಯನ್ನು ಕಲಿಸುವುದೂ ತರ್ಕದ ಕೆಲಸವೇ ಎಂಬುದು ಚರ್ಚಾಸ್ಪದವಾದ ವಿಷಯ. ತರ್ಕಜ್ಞಾನವೇ ಬೇರೆ, ತರ್ಕಕಲೆಯೇ ಬೇರೆ. ಪ್ರಾಮಾಣಿಕವಾದ ಜ್ಞಾನದ ನಿಯಮಗಳನ್ನು ತಿಳಿಸುವುದು ತರ್ಕಜ್ಞಾನದ ಉದ್ದೇಶ. ತರ್ಕಶಾಸ್ತ್ರ ಮುಖ್ಯವಾಗಿ ಜ್ಞಾನ. ತರ್ಕಜ್ಞಾನ ಪಡೆದವನು ತರ್ಕಮಾಡುವುದನ್ನು ಅಭ್ಯಾಸಮಾಡಿ, ವಾದ ನೈಪುಣ್ಯವನ್ನು ಬೆಳಸಬಹುದು. ಆದರೆ, ಈ ವಾದ ನೈಪುಣ್ಯ ತರ್ಕಶಾಸ್ತ್ರದಿಂದ ಪ್ರತ್ಯೇಕವಾದದ್ದು ಎಂಬುದನ್ನು ಮರೆಯಕೂಡದು. ವಾದ ನೈಪುಣ್ಯಗಳಿಸುವ ಹಂಬಲನ್ನು ಬಿಟ್ಟು ಕೇವಲ ಜ್ಞಾನಾರ್ಥವಾಗಿಯೇ ತರ್ಕವನ್ನು ವಿಚಾರಮಾಡುವುದು ತರ್ಕಶಾಸ್ತ್ರದ ಬೆಳವಣಿಗೆಗೆ ಆವಶ್ಯಕ. ತರ್ಕಶಾಸ್ತ್ರವನ್ನು ಕೇವಲ ಜ್ಞಾನಾರ್ಥವಾಗಿಯೇ ಅಧ್ಯಯನ ಮಾಡುವುದು ಈಗಿನ ಸಂಪ್ರದಾಯ.

ಗ್ರೀಸಿನಲ್ಲೂ ಭಾರತದಲ್ಲೂ ಹಿಂದೆ ಒಂದು ಕಾಲದಲ್ಲಿ ತರ್ಕಶಾಸ್ತ್ರವೂ ವಾದಕಲೆಯೂ ಬೆರೆತಿದ್ದುವು. ಅರಿಸ್ಟಾಟಲಿಗಿಂತ ಹಿಂದೆ ತರ್ಕ ವಿಶೇಷವಾಗಿ ವಾದಕೌಶಲವಾಗಿತ್ತು. ವಾದದಲ್ಲಿ ಗೆಲ್ಲುವುದೇ ಅದರ ಮುಖ್ಯ ಉದ್ದೇಶವಾಗಿತ್ತು. ಅರಿಸ್ಟಾಟಲಿನ ಕಾಲಕ್ಕೆ ವಾದಕಲೆ ಕಡಮೆಯಾಗುತ್ತ ಬಂದು ಅರಿಸ್ಟಾಟಲಿನ ಗ್ರಂಥಗಳಲ್ಲಿ, ಕಲೆಯ ಭಾಗಕ್ಕಿಂತಲೂ ಶಾಸ್ತ್ರಭಾಗಕ್ಕೆ ಹೆಚ್ಚು ಪ್ರಾಧಾನ್ಯ ದೊರೆಯಿತು. ಭಾರತದಲ್ಲೂ ಮೊದಲಲ್ಲಿ ತರ್ಕಶಾಸ್ತ್ರವೂ ವಾದಕಲೆಯೂ ಬೆರೆತು ಇದ್ದುವು. ನ್ಯಾಯಶಾಸ್ತ್ರದ ಹದಿನಾರು ಅಂಶಗಳಲ್ಲಿ ಸಂಶಯ, ಪ್ರಯೋಜನ, ದೃಷ್ಟಾಂತ, ಸಿದ್ಧಾಂತ, ನ್ಯಾಯವಾಕ್ಯ, ತರ್ಕ ಹೇತ್ವಾಭಾಸ ಮುಂತಾದುವನ್ನು ಬಿಟ್ಟರೆ, ಕೇವಲ ವಾದಕಲೆಗೆ ಮುಖ್ಯವಾದ ಜಲ್ಪ, ವಿತಂಡಾವಾದ, ಛಲ, ಜಾತಿ, ನಿಗ್ರಹಸ್ಥಾನ ಎಂಬ ಅಂಶಗಳೇ

ಹೆಚ್ಚಾಗಿ ಕಾಣುತ್ತವೆ. ಹೀಗೆ ತರ್ಕಶಾಸ್ತ್ರದಲ್ಲಿ ವಾದಜಯಕ್ಕೆ ಮುಖ್ಯ ವಾದ ಅಂಶಗಳು ಸೇರಿದಾಗ ತರ್ಕದ ಬೆಳವಣಿಗೆಗೆ ತಡೆಯುಂಟಾಗುತ್ತದೆ. ವಾದದಲ್ಲಿ ಜಯ ಗಳಿಸುವ ಉಪಾಯಗಳ ಕಡೆಗೆ ಗಮನ ಹರಿಸದೆ, ತಾರ್ಕಿಕ ಸಮಸ್ಯೆಗಳಲ್ಲೇ ತಾರ್ಕಿಕನ ಗಮನ ನಾಟಿದಾಗಲೇ ತರ್ಕಶಾಸ್ತ್ರ ಬೆಳೆಯುವ ಸಂಭವ ಹೆಚ್ಚು. ಹಾಗೆಯೇ ವಾದಕಲೆಯಲ್ಲಿ ಆಸಕ್ತನಾದವನು ತಾರ್ಕಿಕ ತತ್ತ್ವದ ಕಡೆಗೆ ಹೆಚ್ಚು ಗಮನ ಕೊಡದೆ, ಯುಕ್ತಿಗಳನ್ನು ಬೆಳಸುವುದ ರಲ್ಲಿ ನಿರತನಾದರೆ, ಅವನು ವಾದಕಲೆ ಬೆಳೆಯುವುದಕ್ಕೆ ಅನುಕೂಲ ವಾಗುತ್ತದೆ. ಅಲ್ಲದೆ ವಾದದಲ್ಲಿ ಗೆಲ್ಲುವುದಕ್ಕೆ ತರ್ಕಶಾಸ್ತ್ರಜ್ಞಾನಮಾತ್ರ ವಿದ್ದರೆ ಸಾಲದು. ಅನೇಕ ವೇಳೆ ತರ್ಕದೃಷ್ಟಿಯಿಂದ ಉತ್ತಮವಾದ ಭಾಷಣ ಜನರ ಮನಸ್ಸನ್ನು ಒಲಿಸಿಕೊಳ್ಳಲಾರದು.

ಜನರ ಮನಸ್ಸನ್ನು ಒಲಿಸಿಕೊಳ್ಳಲು ಅವರ ಹೃದಯ ಮಿಡಿಯುವಂತೆ ರಾಗಗಳನ್ನು ಕೆರಳಿಸುವ ಭಾವೋದ್ರೇಕಗೊಳಿಸುವ ಮಾತು ಆವಶ್ಯಕ. ಷೇಕ್ಸ್ ಪಿಯರಿನ ಜೂಲಿಯಸ್ ಸೀಸರ್ ನಾಟಕದಲ್ಲಿ ತೋರಿಸಿರುವಂತೆ ಬ್ರೂಟಸ್ಸಿನ ಭಾಷಣ ತರ್ಕಬದ್ಧವಾಗಿದ್ದರೂ ಅದರಿಂದ ಅವನು ಜನರನ್ನು ಒಲಿಸಿಕೊಳ್ಳ ಲಾಗಲಿಲ್ಲ. ಆದರೆ ಜನರ ಭಾವಗಳನ್ನು ಉದ್ರೇಕಗೊಳಿಸುವ ಆಂಟೊನಿಯ ಮಾತುಗಳು ಹೆಚ್ಚು ಪರಿಣಾಮಕಾರಿಯಾದುವು. ರಸಮಯವಾದ ಆಲಂಕಾರಿಕ ಭಾಷೆ ವಾದದಲ್ಲಿ ಗೆಲ್ಲಬೇಕೆಂಬುವನಿಗೆ ತುಂಬ ಅಗತ್ಯವಾದ ಕರಣ, ಅಸ್ತ್ರ. ಯಥಾರ್ಥಜ್ಞಾನವನ್ನು ಹುಟ್ಟಿಸುವ ಉದ್ದೇಶದಿಂದ ತರ್ಕಬದ್ಧವಾಗಿ ಹೇಳಿದ್ದು ಅಥವಾ ಬರೆದದ್ದು ಜನರ ಹೃದಯವನ್ನು ಸೆಳೆಯಲಾರದೆ ನೀರಸ ವಾಗುವ ಸಂಭವವೇ ಹೆಚ್ಚು. ಸತ್ಯವಾದುದರಲ್ಲಿ ಕೂಡ ಜನರ ಮನಸ್ಸು ನಾಟುವಂತೆ ಮಾಡಬೇಕಾದರೆ ಅದನ್ನು ಆಕರ್ಷಕವಾದ ರಮಣೀಯವಾದ ರೀತಿಯಲ್ಲಿ ಹೇಳಬೇಕು. ಹೀಗೆ ಆಲಂಕಾರಿಕವಾಗಿ ವಿಷಯವನ್ನು ವಿವರಿಸಿದಾಗ ಅದು ವಾಸ್ತವವಾಗಿರುವುದಕ್ಕಿಂತಲೂ ಕಾಲ್ಪನಿಕವಾಗಿರಬೇಕಾಗುತ್ತದೆ. ಅದು ಸತ್ಯವಾಗಿರುವುದಕ್ಕಿಂತ ಸುಂದರವಾಗಿರಬೇಕಾಗಿರುತ್ತದೆ. ವಿಷಯವನ್ನು ಆಕರ್ಷಣೀಯವಾಗಿ ಮಾಡಬೇಕಾದಾಗ ಕೆಲವು ಅಂಶಗಳನ್ನು ಉಬ್ಬಿಸಿ, ಕೆಲವು ಅಂಶಗಳನ್ನು ಕುಗ್ಗಿಸಿ, ಕೆಲವನ್ನು ಒತ್ತಿ ಇನ್ನು ಕೆಲವನ್ನು ತೇಲಿಸಿ, ಕೆಲವನ್ನು ವಾಚ್ಯವಾಗಿಯೂ ಇನ್ನು ಕೆಲವನ್ನು ವ್ಯಂಗ್ಯವಾಗಿಯೂ ಹೇಳ ಬೇಕಾಗುತ್ತದೆ.

ರಸಮಯವಾದ ಕಲೆ ತರ್ಕಕ್ಕಿಂತ ಜೀವನದಲ್ಲಿ ಅತ್ಯಂತ ಪರಿಣಾಮ ಕಾರಿ. ಆದರೆ ಯಥಾರ್ಥಜ್ಞಾನವನ್ನು ಕಾವ್ಯದಿಂದ ಯಾರೂ ನಿರೀಕ್ಷಿಸ

ಬಾರದು. ಕಾವ್ಯವೂ ನಮಗೆ ಒಂದು ರೀತಿಯಲ್ಲಿ ಸತ್ಯವನ್ನು ತೋರಿಸ ಬಹುದು; ತರ್ಕಕ್ಕಿಂತಲೂ ಇನ್ನೂ ಗಾಢವಾದ ರೀತಿಯಲ್ಲಿ ತೋರಿಸ ಬಹುದು. ಆದರೆ ಕಾವ್ಯದ ಸತ್ಯವೇ ಬೇರೆ ತರ್ಕದ ಸತ್ಯವೇ ಬೇರೆ. ಒಂದು ವಸ್ತು ಭಾವನಿಷ್ಠವಾದುದು, ಇನ್ನೊಂದು ವಸ್ತು ನಿಷ್ಠವಾದುದು; ತರ್ಕದ ಸತ್ಯ ಬೆಳಕು, ಕಾವ್ಯದ ಸತ್ಯ ಹೊಳಪು. ಕಾವ್ಯ ಸತ್ಯ ಹಾರ್ದಿಕ ಸತ್ಯ. ತರ್ಕದ ಸತ್ಯ ಬೌದ್ಧಿಕ ಸತ್ಯ. ಎರಡಕ್ಕೂ ಬೆಲೆ ಇದೆ. ಆದರೆ ಅವುಗಳ ಬೆಲೆ ಬೇರೆ ಬೇರೆ. ಅವುಗಳ ಮೂಲಕ ಸಾಧಿಸಬಹುದಾದ ಪುರುಷಾರ್ಥಗಳೂ ಬೇರೆ ಬೇರೆ.

## ೫. ತರ್ಕಶಾಸ್ತ್ರ ಮತ್ತು ಮನಶ್ಶಾಸ್ತ್ರ

ತರ್ಕಶಾಸ್ತ್ರ ಮತ್ತು ಮನಶ್ಶಾಸ್ತ್ರ, ಇವೆರಡೂ ಮನಸ್ಸಿನಲ್ಲಿ ನಡೆಯುವ ವ್ಯಾಪಾರಕ್ಕೆ ಸಂಬಂಧಪಟ್ಟುವು. ಆದರೂ ಅವು ಒಂದು ಮುಖ್ಯ ವಿಚಾರ ದಲ್ಲಿ ಭಿನ್ನವಾದುವು. ತರ್ಕಶಾಸ್ತ್ರಕ್ಕಿಂತಲೂ ಮನಶ್ಶಾಸ್ತ್ರದ ವ್ಯಾಪ್ತಿ ವಿಶಾಲ ವಾದುದು. ತರ್ಕಶಾಸ್ತ್ರವು ಮುಖ್ಯವಾಗಿ ಮನಸ್ಸಿ (Mind) ನ ಒಂದು ಭಾಗವಾದ ಬುದ್ಧಿಯ (Intellect) ವ್ಯಾಪಾರಕ್ಕೆ ಮಾತ್ರ ಗಮನ ಕೊಡುತ್ತದೆ. ಮನಶ್ಶಾಸ್ತ್ರವಾದರೋ ಬುದ್ಧಿವೃತ್ತಿಗಳನ್ನಲ್ಲದೆ, ವಾಸನೆಗಳು (Instincts), ವೇದನೆಗಳು (Feelings), ಯತ್ನಗಳು (Volitions), ಜಾಗ್ರದವಸ್ಥೆ (Waking state), ಸ್ವಪ್ನಾವಸ್ಥೆ (Dream state), ನಿದ್ರಾವಸ್ಥೆ (Sleep), ಮುಂತಾದ ಎಲ್ಲ ಮಾನಸಿಕ ವ್ಯಾಪಾರಗಳನ್ನೂ ಅವಸ್ಥೆಗಳನ್ನೂ ವಿಚಾರಮಾಡುತ್ತದೆ.

ಮನಶ್ಶಾಸ್ತ್ರದ ವಿಚಾರಕ್ಷೇತ್ರ ತರ್ಕಕ್ಕಿಂತ ವಿಶಾಲವಾಗಿರುವುದೊಂದೇ ಅಲ್ಲ ಅವೆರಡಕ್ಕಿರುವ ವ್ಯತ್ಯಾಸ. ಅವೆರಡರ ವಿಚಾರದೃಷ್ಟಿ (Standpoint)ಯೂ ಬೇರೆ ಬೇರೆ. ನಾವು ಈಗಾಗಲೆ ತಿಳಿದಿರುವಂತೆ ಮನಶ್ಶಾಸ್ತ್ರ ವಾಸ್ತವಿಕಶಾಸ್ತ್ರ, ತರ್ಕಶಾಸ್ತ್ರ ಪ್ರಮಾಣಶಾಸ್ತ್ರ. ನಾವು ವಾಸ್ತವವಾಗಿ ಹೇಗೆ ಯೋಚಿಸು ತ್ತೇವೆ, ನಮ್ಮ ಯೋಚನೆಗಳು ಹೇಗೆ ಹುಟ್ಟುತ್ತವೆ, ಹೇಗೆ ಬೆಳೆಯುತ್ತವೆ ಎಂಬುದನ್ನು ಮನಶ್ಶಾಸ್ತ್ರ ತಿಳಿಸುತ್ತದೆ. ಆ ಯೋಚನೆಗಳು ಸರಿಯೇ ತಪ್ಪೇ ಎಂಬ ಪ್ರಶ್ನೆಯಲ್ಲಿ ಮನಶ್ಶಾಸ್ತ್ರಕ್ಕೆ ಆಸಕ್ತಿ ಇಲ್ಲ. ಅದು ಮಕ್ಕಳ ಯೋಚನೆ ಗಳನ್ನೂ ತಿಳಿಸುತ್ತದೆ, ಬೆಳೆದವರ ಯೋಚನೆಯನ್ನೂ ತಿಳಿಸುತ್ತದೆ, ಸರಿಯಾದ ಚಿತ್ತವುಳ್ಳವರ ಆಲೋಚನೆಯನ್ನೂ ವಿವರಿಸುತ್ತದೆ, ಮನೋವಿಕಾರವುಳ್ಳವರ ಆಲೋಚನೆಯನ್ನೂ ವಿವರಿಸುತ್ತದೆ, ಪ್ರತಿಭಾವಂತರ ಮತ್ತು ಪ್ರಾಜ್ಞರ ಆಲೋಚನೆಗಳನ್ನೂ ವಿವರಿಸುತ್ತದೆ. ತರ್ಕಶಾಸ್ತ್ರವಾದರೋ ನಾವು ಹೇಗೆ

**ಯೋಚಿಸುತ್ತೇವೆ** ಎಂಬುದಕ್ಕಿಂತ ನಾವು **ಹೇಗೆ ಯೋಚಿಸಬೇಕು** ಎಂಬುದರಲ್ಲಿ ಆಸಕ್ತಿಪಡೆದಿದೆ. ಒಂದು ಪ್ರತಿಜ್ಞೆ (Proposition) ಅಥವ ವಾದ ಸರಿಯಾಗಿದೆಯೆ ಅಥವಾ ತಪ್ಪಾಗಿದೆಯೆ ; ಸರಿಯಾಗಿರಬೇಕಾದರೆ ಅದು ಯಾವ ನಿಯಮವನ್ನು ಪಾಲಿಸಬೇಕು ಎಂಬುದು ತರ್ಕಶಾಸ್ತ್ರ ವಿಚಾರಮಾಡುವ ಪ್ರಶ್ನೆಗಳು. ಸರಿಯಾಗಿ ಯೋಚಿಸಬೇಕಾದರೆ ನಾವು ಅನುಸರಿಸಬೇಕಾದ ನ್ಯಾಯರೂಪ (Forms of thought) ಗಳನ್ನು ತರ್ಕಶಾಸ್ತ್ರ ನಿರ್ಧರಿಸುತ್ತದೆ.

ನಾವು ಹೇಗೆ ಯೋಚಿಸಬೇಕು, ನಾವು ಯಾವ ನ್ಯಾಯರೂಪಗಳನ್ನು ಅನುಸರಿಸಬೇಕು ಎಂಬುದನ್ನು ತಿಳಿಯಲು ನಾವು ಹೇಗೆ ಯೋಚಿಸುತ್ತೇವೆ, ನಮ್ಮ ಯೋಚನೆಗಳು ಹೇಗೆ ಹುಟ್ಟುತ್ತವೆ ಹೇಗೆ ಬೆಳೆಯುತ್ತವೆ ಎಂಬುದನ್ನು ಸ್ವಲ್ಪಮಟ್ಟಿಗಾದರೂ ಪರಿಚಯಮಾಡಿಕೊಳ್ಳಬೇಕು. ಇಂದ್ರಿಯಗಳು, ಕುತೂಹಲ (Curiosity) ಸಾಹಚರ್ಯ ಜ್ಞಾನ (Association), ಸ್ಮೃತಿ, (Memory) ಸೂಚನೆ (Suggestion), ಕಲ್ಪನೆ (Imagination) ತರ್ಕ (Reasoning) ಮಮಕಾರ (Egoism) ಕಾಮ (Sex feeling), ಕ್ರೋಧ, ದುರಾಶೆ, ಪೂರ್ವಗ್ರಹ (Prejudice), ಪಕ್ಷಪಾತ, ಅಸೂಯೆ, ಭಯ, ಉತ್ಸಾಹ, ಉದಾತ್ತ ಭಾವನೆ, ಆರ್ಥಿಕ ಆಸಕ್ತಿ, ಧಾರ್ಮಿಕ ಆಸಕ್ತಿ, ಸ್ವಾತಂತ್ರ್ಯ, ಸತ್ಯ ಸೌಂದರ್ಯಗಳ ಮೇಲಿನ ಪ್ರೀತಿ—ಈ ಎಲ್ಲ ಮಾನಸಿಕ ಕ್ರಿಯೆಗಳೂ ನಮ್ಮ ಬೌದ್ಧಿಕ ಜೀವನದಲ್ಲಿ ತುಂಬ ಪರಿಣಾಮಕಾರಿಗಳಾಗಿವೆ. ಇವೆಲ್ಲವೂ ಹೇಗೆ ನಮ್ಮ ಜ್ಞಾನಕ್ಕೆ ಸಾಧಕಗಳಾಗಿವೆ ಅಥವಾ ಬಾಧಕಗಳಾಗಿವೆ ಎಂಬುದನ್ನು ಇಲ್ಲಿ ವಿವರಿಸಲು ಸಾಧ್ಯವಿಲ್ಲ. ದೃಷ್ಟಾಂತರೂಪವಾಗಿ ಇಲ್ಲಿ ಕೆಲವನ್ನು ಮಾತ್ರ ಸಂಗ್ರಹವಾಗಿ ಸೂಚಿಸಬಹುದು.

ನಾವು ಹುಟ್ಟುತ್ತಲೆ ನಮಗೆ ಬಾಹ್ಯಪ್ರಪಂಚದ ಅರಿವು ಉಂಟಾಗುತ್ತದೆ. ತಾಯಿಯ ಪರಿಚಯದಿಂದ ನಮ್ಮ ಅನುಭವ ಆರಂಭಿಸಿ, ಕ್ರಮಕ್ರಮವಾಗಿ ನಮ್ಮ ಮನೆಯವರು, ನಾವು ವಾಸಿಸುವ ಮನೆ, ನಮ್ಮ ನೆರೆಹೊರೆಯವರು, ನಮ್ಮ ಬೀದಿ, ನಮ್ಮ ಕೇರಿ, ನಮ್ಮ ನಾಡು ಹೀಗೆ ನಮ್ಮ ಅನುಭವಪ್ರಪಂಚ ವಿಸ್ತಾರವಾಗುತ್ತ ಹೋಗುತ್ತದೆ. ಶೈಶವದಲ್ಲಿ ನಮ್ಮ ಅನುಭವ ಬೆಳೆಯುವುದಕ್ಕೆ ಮುಖ್ಯವಾಗಿ ಇಂದ್ರಿಯಗಳು ಕಾರಣ. ಮಕ್ಕಳು ಪದಾರ್ಥಗಳನ್ನು ನೋಡಿ, ಅವುಗಳನ್ನು ಕೈಯಲ್ಲಿ ಹಿಡಿದುಕೊಂಡು, ಬಾಯಲ್ಲಿಟ್ಟುಕೊಂಡು, ಅವುಗಳ ಪರಿಚಯಮಾಡಿಕೊಳ್ಳುತ್ತವೆ. ಹೀಗೆ ಪರಿಚಯಮಾಡಿಕೊಳ್ಳಲು ಕುತೂಹಲ (Curiosity) ಕಾರಣ. ದೊಡ್ಡವರಿಗಿಂತ ಮಕ್ಕಳಲ್ಲಿ ಕುತೂಹಲ ಅತಿಶಯವಾಗಿದೆ. ಮಕ್ಕಳು ಪದಾರ್ಥಗಳನ್ನು ಹಿಡಿದುಕೊಂಡು ಅಲ್ಲಾಡಿಸಿ ಎಸೆದು,

ಒಡೆದು, ಕಿತ್ತುಹಾಕಿ, ಅವುಗಳನ್ನು ಕುತೂಹಲದಿಂದ ಪರೀಕ್ಷಿಸುತ್ತವೆ. ಹೀಗೆ ಮಗುವು ಪದಾರ್ಥಗಳೊಡನೆ ಆಟವಾಡಿ ಅವುಗಳ ರುಚಿ, ವಾಸನೆ, ಗಾತ್ರ, ಮೃದುತ್ವ, ಕಾಠಿನ್ಯ, ಸಾಂದ್ರತೆ, ರಚನೆ ಮುಂತಾದುವನ್ನು ತಿಳಿದುಕೊಳ್ಳುತ್ತದೆ. ಆಟವೇ ಮಗುವಿನ ಜ್ಞಾನಾರ್ಜನೆಯ ಮುಖ್ಯಸಾಧನ.

ಮಗುವಿನ ಅನುಭವ ಬೆಳೆದಹಾಗೆಲ್ಲ, ಅದು ಹಿಂದೆ ಅನುಭವಿಸಿದ್ದನ್ನು ಜ್ಞಾಪಕದಲ್ಲಿಟ್ಟುಕೊಂಡು ಸ್ಮೃತಿಯ ನೆರವನ್ನು ಪಡೆಯುತ್ತದೆ. ಬೆಂಕಿಯನ್ನು ಮುಟ್ಟಿ ಅದು ಸುಟ್ಟಾಗ ಬೆಂಕಿಗೂ ಸುಡುವುದಕ್ಕೂ ಅದರ ಮನಸ್ಸಿನಲ್ಲಿ ಸಾಹಚರ್ಯವೇರ್ಪಡುತ್ತದೆ. ಇನ್ನೊಂದು ಸಲ ಅದು ಬೆಂಕಿಯನ್ನು ನೋಡಿದಾಗ ಅದು ಸುಡುತ್ತದೆ ಎಂಬ ಅರಿವು ಉಂಟಾಗಿ ಅದು ಬೆಂಕಿಯನ್ನು ಮುಟ್ಟುವುದಿಲ್ಲ. ಮಕ್ಕಳಲ್ಲಿ ಜ್ಞಾನ ಬೆಳೆಯುವುದಕ್ಕೆ ಸಾಹಚರ್ಯ ತುಂಬ ಸಹಕಾರಿ. ಅನೇಕ ವೇಳೆ ಎರಡು ವಸ್ತುಗಳು ಒಟ್ಟಿಗೆ ನಮ್ಮ ಅನುಭವಕ್ಕೆ ಬಂದಾಗ, ಅಥವಾ ಒಂದರ ಸಮೀಪದಲ್ಲಿ ಒಂದು ವಸ್ತು ಇದ್ದಾಗ, ಅಥವ ಒಂದಾದ ಮೇಲೆ ಒಂದು ಗೋಚರವಾದಾಗ, ಒಂದು ಇನ್ನೊಂದಕ್ಕೆ ಕಾರಣವೆಂಬ ಭಾವನೆ ಹುಟ್ಟುವುದುಂಟು. ಆದರೆ ಜೊತೆಜೊತೆಯಾಗಿ ಇರುವುವು, ಒಂದಾದ ಮೇಲೆ ಒಂದು ಬರುವಂಥವು ಒಂದಕ್ಕೊಂದು ಕಾರಣವಾಗಿರಬೇಕಾಗಿಲ್ಲ. ಒಂದು ಹಕ್ಕಿ ಒಂದು ಗಿಡದ ಮೇಲೆ ಬಂದು ಕೂತಾಗ ಗಿಡದ ಹಣ್ಣು ಉದುರಬಹುದು. ಆದರೆ ಹಣ್ಣು ಬೀಳುವುದಕ್ಕೆ ಹಕ್ಕಿ ಕಾರಣ ಎಂದು ಹೇಳುವಹಾಗಿಲ್ಲ. ನಾವು ಮನೆಯಿಂದ ಹೊರಟಾಗ ಒಂಟಿ ಬ್ರಾಹ್ಮಣ ಎದುರಿಗೆ ಬಂದು ನಾವು ಹೊರಟ ಕೆಲಸ ಆಗದಿದ್ದರೆ, ಅದಕ್ಕೆ ಒಂಟಿ ಬ್ರಾಹ್ಮಣ ಕಾರಣವಲ್ಲ. ಸಾಹಚರ್ಯ ಅನೇಕ ವೇಳೆ ನಮ್ಮ ಮನಸ್ಸಿನಲ್ಲಿ ತಪ್ಪು ಭಾವನೆಗಳನ್ನು ಹುಟ್ಟಿಸುತ್ತದೆ. ಒಂದರ ಜೊತೆಯಲ್ಲಿ ಒಂದು ಅಥವಾ ಒಂದಾದ ಮೇಲೆ ಒಂದು ಬರುವ ಅಂಶಗಳನ್ನು ಪರೀಕ್ಷಿಸಿದಲ್ಲದೆ, ಅವುಗಳಿಗೆ ಇರುವ ಸಂಬಂಧ ಅವಶ್ಯಕವಾದುದೆ ನಿಕಟವಾದುದೆ ಎಂಬುದನ್ನು ಪರೀಕ್ಷಿಸಿದಲ್ಲದೆ ಒಂದು ಇನ್ನೊಂದಕ್ಕೆ ಕಾರಣ ಎಂದು ತಿಳಿಯಬಾರದು. ಆಕಸ್ಮಿಕವಾದುದು ಯಾವುದು, ಆಗಂತುಕವಾದುದು ಯಾವುದು, ಆವಶ್ಯಕವಾದುದು ಯಾವುದು ಎಂಬುದನ್ನು ನಿರ್ಧರಿಸುವುದು ಬುದ್ಧಿಶಕ್ತಿ (Intelligence). ಸ್ಪಿಯರ್‌ಮನ್ ಎಂಬ ಆಂಗ್ಲೇಯ ಮನಶ್ಶಾಸ್ತ್ರಜ್ಞನು ಸಂಬಂಧಗಳನ್ನೂ ಸಾಮ್ಯಗಳನ್ನೂ ಕಂಡುಹಿಡಿಯುವ (Relation and Correlate finding) ಶಕ್ತಿಯನ್ನು ಬುದ್ಧಿಶಕ್ತಿ ಎಂದು ಕರೆದಿದ್ದಾನೆ. ಒಂದು ದೊಡ್ಡದಾದ ಪದಾರ್ಥವನ್ನೂ ಒಂದು ಚಿಕ್ಕದಾದ ಪದಾರ್ಥವನ್ನೂ ನೋಡಿ, ದೊಡ್ಡದು ಚಿಕ್ಕದಕ್ಕೆ ಪ್ರತಿಯಾದುದು (Opposite)

ಎಂದು ತಿಳಿಯುವುದೂ, ಎರಡು ಒಂದಾಣೆಯ ಬಿಲ್ಲೆಗಳನ್ನು ನೋಡಿ ಒಂದು ಇನ್ನೊಂದರಂತೆ ಇದೆ (Similar) ಎಂದು ತಿಳಿಯುವುದೂ ಸಂಬಂಧ ಗಳ ತಿಳಿವಿಗೆ ಉದಾಹರಣೆಗಳು. ಹಸು ಮತ್ತು ಕರು ಎಂಬ ಎರಡು ಅಂಶ ಗಳಿರುವ ಸಂಬಂಧವನ್ನು ತಿಳಿದಮೇಲೆ ತಾಯಿ ಎಂಬ ಅಂಶ ಬುದ್ಧಿಗೆ ಗೋಚರ ವಾದರೆ ಆಗ ಬುದ್ಧಿಯು ಇದಕ್ಕೂ ಮೊದಲೇ ತಿಳಿದ ಎರಡು ಅಂಶ ಗಳಿಗೂ ಇರುವ ಸಾಮ್ಯಾಂಶವನ್ನು ಹುಡುಕಲು ಪ್ರಯತ್ನಿಸುತ್ತದೆ. ಹೀಗೆ ಪ್ರಯತ್ನಿಸಿದಾಗ ಅದಕ್ಕೆ ಮಗು ಎಂಬುದು ಹೊಳೆಯುತ್ತದೆ. ಬುದ್ಧಿಯ ಈ ಕ್ರಿಯೆಗೆ ಪರಸ್ಪರ ಸಂಬಂಧ ಕಂಡುಹಿಡಿಯುವ ಕ್ರಿಯೆ (Correlate finding) ಎಂದು ಹೆಸರು. ಎಲ್ಲ ಬಗೆಯಾದ ಸಮಸ್ಯೆಗಳನ್ನು ಬಗೆಹರಿಸು ವುದೂ ಸಂಬಂಧ ಮತ್ತು ಸಾಮ್ಯಗಳನ್ನು ಕಂಡುಹಿಡಿಯುವ ಶಕ್ತಿ ಯಿಂದ. ಒಂದು ಮಗುವು ಗೂಟಕ್ಕೆ ನೇತುಹಾಕಿರುವ ಕೋಡಬಳೆ ಗಂಟನ್ನು ಅಥವ ಬಡುವಿನ ಮೇಲೆ ಇಟ್ಟಿರುವ ಅವಲಕ್ಕಿ ಡಬ್ಬವನ್ನು ಎಟಕಿಸಿಕೊಳ್ಳಲು ಆದು ಪದಾರ್ಥಗಳ ಸಾಮ್ಯ ಮತ್ತು ಪರಸ್ಪರ ಸಂಬಂಧಗಳನ್ನು ಕಂಡು ಹಿಡಿಯುತ್ತದೆ. ತನ್ನ ಕೈಗೂ ಕೋಡಬಳೆ ಗಂಟಿಗೂ ಇರುವ ಅಂತರವನ್ನು ಕೋಲಿನ ಉಪಯೋಗದಿಂದ ಗೆಲ್ಲುತ್ತದೆ. ಅಥವಾ ಬಡುವಿಗೂ ತನ್ನ ಕೈಗೂ ಇರುವ ಅಂತರವನ್ನು ಒಂದು ಡಬರಿ ಅಥವಾ ಕಾಲುಮಣೆಯ ಉಪಯೋಗ ದಿಂದ ನಿವಾರಿಸಿಕೊಳ್ಳುತ್ತದೆ. ಗಿಡದ ಮೇಲೆ ಇರುವ ಹಣ್ಣನ್ನು ಉದುರಿಸುವ ಸಮಸ್ಯೆಯೂ, ಏರೋಪ್ಲೇನನ್ನು ಉರುಳಿಸುವ ಸಮಸ್ಯೆಯೂ ಒಂದೇ. ಅವೆರಡನ್ನೂ ಪರಿಹರಿಸಲು ಪರಸ್ಪರ ಸಂಬಂಧ ಕಂಡುಹಿಡಿಯುವ ಕ್ರಿಯೆಯೂ ಒಂದೇ. ತರ್ಕಶಾಸ್ತ್ರದಲ್ಲಿ ಬಹು ಮುಖ್ಯವಾದ ಅನುಮಾನ ಕ್ರಿಯೆಗೆ ಸಂಬಂಧ ಕಂಡುಹಿಡಿಯುವ ಕ್ರಿಯೆ ಆಧಾರ. ಹೊಗೆ ಇದ್ದ ಕಡೆ ಬೆಂಕಿ ಇರುತ್ತದೆ ಎಂಬುದನ್ನು ತಿಳಿದವನು ಬೆಟ್ಟದ ಮೇಲೆ ಹೊಗೆಯನ್ನು ಕಂಡಾಗ ಅಲ್ಲಿ ಬೆಂಕಿ ಇದೆ ಎಂದು ತಿಳಿಯುತ್ತಾನೆ. ಹೊಗೆಗೆ ಬೆಂಕಿ ಕಾರಣ ಎಂಬ ಕಾರ್ಯಕಾರಣ ಸಂಬಂಧ ಈ ಅನುಮಾನಕ್ರಿಯೆಗೆ ಆಧಾರ.

ನಮ್ಮ ಅನುಭವ ಬೆಳೆಯುವುದಕ್ಕೆ ಸೂಚನೆ ಒಂದು ಪ್ರಬಲವಾದ ಕಾರಣ. ನಾವು ಪ್ರತಿನಿತ್ಯವೂ ನಮ್ಮ ತಂದೆತಾಯಿಗಳಿಂದ, ನೆರೆಹೊರೆಯವರಿಂದ, ಗುರುಹಿರಿಯರಿಂದ, ಸ್ನೇಹಿತರಿಂದ, ವೃತ್ತಪತ್ರಿಕೆಗಳಿಂದ ಸೂಚನೆಗಳನ್ನು ಪಡೆದು ನಮ್ಮ ಅನುಭವಗಳನ್ನು ಬೆಳೆಸಿಕೊಳ್ಳುತ್ತಿದ್ದೇವೆ. ನಾವು ಪಡೆದಿರುವ ಅನೇಕ ಅಭಿಪ್ರಾಯಗಳು ಹೀಗೆ ಇತರರಿಂದ ಬಂದ ಸೂಚನೆಗಳಿಂದ ಹುಟ್ಟಿವೆ. ಆದರೆ ಸೂಚನೆ ಸರಿಯಾದ ಅಭಿಪ್ರಾಯಗಳಿಗೆ ಕಾರಣವಾದಂತೆ ತಪ್ಪು

ಅಭಿಪ್ರಾಯಗಳಿಗೂ ಕಾರಣವಾಗುವುದುಂಟು. ನಮಗೆ ಇತರರಿಂದ ಬಂದ ಸೂಚನೆಗಳನ್ನು ನಾವು ಅನೇಕ ವೇಳೆ ವಿಮರ್ಶಿಸದೆ ಒಪ್ಪಿಕೊಳ್ಳುತ್ತೇವೆ. ಇದು ಅಪಾಯಕರ. ವ್ಯಾಪಾರಗಾರರು ಜಾಹಿರಾತುಗಳ ಮೂಲಕ ತಮ್ಮ ಸರಕುಗಳು ಉತ್ತಮವಾದುವೆಂದು ಪ್ರತಿನಿತ್ಯವೂ ಸೂಚಿಸುತ್ತಿರುತ್ತಾರೆ. ರಾಜಕೀಯ ಮುಖಂಡರೂ ಮತಬೋಧಕರೂ ತಮ್ಮ ಭಾಷಣಗಳ ಮೂಲಕ ತಮ್ಮ ಪಕ್ಷ ಸರಿಯೆಂದು ಜನರಿಗೆ ಬೋಧಿಸಿ ಜನರನ್ನು ತಮ್ಮ ಕಡೆಗೆ ಒಲಿಸಿಕೊಳ್ಳಲು ಪ್ರಯತ್ನಪಡುತ್ತಿರುವರು. ಕೆಲವು ದೇಶಗಳಲ್ಲಿ ಮಕ್ಕಳು ಪಾಠಶಾಲೆಗಳಲ್ಲಿರುವಾಗಲೆ ಅವರಿಗೆ ಕೆಲವು ರಾಜಕೀಯ ಮತ್ತು ಮತೀಯ ಅಭಿಪ್ರಾಯಗಳನ್ನು ಪುನಃ ಪುನಃ ಒತ್ತಿ ಹೇಳಿ ಅವರ ವ್ಯಕ್ತಿತ್ವವನ್ನು ತಮಗೆ ಬೇಕಾದ ರೀತಿಯಲ್ಲಿ ಸರ್ಕಾರವು ಪಳಗಿಸಲು ಪ್ರಯತ್ನಪಡುತ್ತದೆ.

ನಾವು ಕೊಡುವ ಸೂಚನೆಗಳು ಬೇರೂರುವಂತೆ ಮಾಡಲು ಮೂರು ಉಪಾಯಗಳನ್ನು ಉಪಯೋಗಿಸುವುದುಂಟು. ಒಂದು ಪುನರಾವರ್ತನೆ. ಒಂದು ಸೂಚನೆಯನ್ನು ಪದೇ ಪದೇ ಜನರ ಮುಂದೆ ಇಡುವುದರಿಂದ ಆ ಸೂಚನೆ ದಿನದಿನಕ್ಕೂ ಪ್ರಬಲಗೊಂಡು ಜನರು ಅದನ್ನು ಸತ್ಯವೆಂದು ಒಪ್ಪಿಕೊಳ್ಳುವರು. ಸಂದೇಹಕ್ಕೆ ಎಡೆಕೊಡದಂತೆ, ಯಾವವಿಧವಾದ ವಾದಕ್ಕೂ ಎಡೆಕೊಡದಂತೆ ದೃಢವಾಗಿ, ಗಟ್ಟಿಯಾಗಿ ಘೋಷಿಸುವುದು ಸೂಚನೆಗಳನ್ನು ಬಲಪಡಿಸಲು ಎರಡನೆಯ ಉಪಾಯ. ಸಮಾಜದಲ್ಲಿ ಹೆಸರುಗಳಿಸಿದವರಿಂದ, ಪ್ರತಿಷ್ಠೆಪಡೆದಿರುವವರ ಬಾಯಿಂದ ಸೂಚನೆಗಳನ್ನು ಹೊರಗೆಡಹುವುದು ಮೂರನೆಯ ಉಪಾಯ. ಹೀಗೆ ಬೇರೆ ಬೇರೆ ಉಪಾಯಗಳಿಂದ ಜನರನ್ನು ತಮ್ಮ ಸೂಚನೆಗಳ ಕಡೆಗೆ ಒಲಿಸಿಕೊಳ್ಳುವುದನ್ನು ತಡೆಗಟ್ಟಬೇಕಾದರೆ, ಜನರಲ್ಲಿ ವಿಚಾರಶಕ್ತಿ ಬೆಳೆಯುವಂತೆ ಮಾಡುವುದೊಂದೇ ಮಾರ್ಗ. ಯಾವ ಸೂಚನೆ ಬಂದರೂ ಅದಕ್ಕೆ ಸರಿಯಾದ ಆಧಾರವಿದೆಯೆ, ಅದರ ಸಾಧಕ ಬಾಧಕಗಳೇನು ಎಂಬುದನ್ನು ತರ್ಕಮಾಡಿ ನಿರ್ಧರಿಸುವ ಶಕ್ತಿಯನ್ನು ಬೆಳೆಸುವುದರಿಂದ ಪ್ರಜಾಮತ ವಿವೇಕಯುತವಾಗುವುದು. ಆದ್ದರಿಂದ ಯಾವ ದೇಶದಲ್ಲಿ ಪಾಠಶಾಲೆಗಳಲ್ಲೂ ಉಪನ್ಯಾಸಮಂದಿರಗಳಲ್ಲೂ ವಿಚಾರಪರ ವಾತಾವರಣ ಏರ್ಪಟ್ಟಿರುವುದೋ ಅಂಥಾ ದೇಶವೇ ಪ್ರಜಾಸರ್ಕಾರಕ್ಕೆ ಯೋಗ್ಯವಾದದ್ದು. ಅಂಥಾ ದೇಶದಲ್ಲಿ ಪ್ರಜಾಸರ್ಕಾರ ಯಶಸ್ವಿಯಾಗಿ ನೆಲೆಗೊಳ್ಳಲು ಸಾಧ್ಯವಾಗುತ್ತದೆ.

ನಮ್ಮ ಜೀವನದಲ್ಲಿ ಕಾಮಕ್ರೋಧಗಳು, ಮಮಕಾರ, ಪಕ್ಷಪಾತ ಬುದ್ಧಿ, ಪೂರ್ವಗ್ರಹಗಳು ತುಂಬ ಪರಿಣಾಮಕಾರಿಗಳು. ಇವು ನಮ್ಮ ತಿಳಿವನ್ನು ವಿಶೇಷ ರೀತಿಯಲ್ಲಿ ನಿರ್ಧರಿಸುವುವು. ನಮ್ಮ ಕಣ್ಣುಮುಂದೆ ಪದಾರ್ಥಗಳು ಇದ್ದರೂ,

ಇರುವುದನ್ನೆಲ್ಲ, ಅವು ಇರುವಂತೆಯೆ ನಾವು ನೋಡುವುದಿಲ್ಲ. ನಮ್ಮ ಮಮಕಾರ, ಪಕ್ಷಪಾತಬುದ್ಧಿ, ನಮ್ಮ ಈರ್ಷ್ಯಾಸೂಯೆಗಳು—ಇವು ನಮಗೆ ಬೇಕಾದ ಪದಾರ್ಥಗಳು ಥಟ್ಟನೆ ನಮಗೆ ಕಾಣುವಂತೆ ಮಾಡುತ್ತವೆ, ನಮಗೆ ಬೇಡದ ಪದಾರ್ಥಗಳನ್ನು ನಮ್ಮ ದೃಷ್ಟಿಯಿಂದ ಮರೆಮಾಚುತ್ತವೆ. ನಮ್ಮ ಮೂಗಿಗೆ ಸರಿಯಾಗಿ ನಾವು ನೋಡುವುದು ಲೋಕರೂಢಿ. ನಮಗೆ ಪ್ರಿಯ ರಾದವರ ನಡವಳಿಕೆಯಲ್ಲಿ ನಾವು ದೋಷ ಕಾಣುವುದಿಲ್ಲ, ಒಳ್ಳೆಯದನ್ನು ಕಾಣುತ್ತೇವೆ. ನಮಗೆ ಅಪ್ರಿಯರಾದವರ ನಡತೆಯಲ್ಲಿ ಒಳ್ಳೆಯದನ್ನು ಕಾಣು ವುದಿಲ್ಲ, ಕೆಟ್ಟದ್ದನ್ನೇ ಕಾಣುತ್ತೇವೆ. ನಮ್ಮ ಗುಂಪಿನವರು ಒಳ್ಳೆಯವರು, ಬೇರೆಯ ಗುಂಪಿನವರು ಕೆಟ್ಟವರು. ಅಮೆರಿಕಾದವರಿಗೆ ರಷ್ಯಾದವರು ಹೇಳಿದ್ದು ಮಾಡಿದ್ದು ಎಲ್ಲವೂ ಅಸಾಧುವಾದುದು, ತಮ್ಮ ದೇಶದವರು ಹೇಳಿದ್ದು, ಮಾಡಿದ್ದು ಸಾಧುವಾದುದು. ಹಾಗೆಯೇ ರಷ್ಯಾದವರಿಗೆ ಅಮೆರಿಕಾದವರ ಆಡಿಕೆಗಳು ಮಾಡಿಕೆಗಳು ಅಸಭ್ಯ. ರಾಜಕೀಯ ಪಕ್ಷಾಭಿಮಾನದಂತೆಯೇ ಮತಾಭಿಮಾನ, ಕೋಮಿನ ಅಭಿಮಾನ, ಭಾಷಾಭಿಮಾನ, ವರ್ಣಾಭಿಮಾನ ಜನರ ಆಲೋಚನೆಗಳನ್ನು ನಿರ್ಧರಿಸುತ್ತವೆ. ಒಂದು ಮತದವರು ಬೇರೆಯ ಮತದವರನ್ನು ಕುರಿತು ವಿಧರ್ಮಿಗಳೆಂದು ನಿಕೃಷ್ಟವಾಗಿ ಮಾತನಾಡುತ್ತಾರೆ. ಬಿಳಿಯ ಬಣ್ಣದ ಜನರು, ಕಪ್ಪು ಬಣ್ಣದ ಅಥವಾ ಹಳದಿ ಬಣ್ಣದವರನ್ನು ಹೀನಾಯವಾಗಿ ನೋಡುತ್ತಾರೆ. ಒಂದು ಕೋಮಿನವರು ಇತರ ಕೋಮಿ ನವರ ಅಭಿಪ್ರಾಯಗಳು ಅಸಾಧುವೆಂದು ದೂಷಿಸುತ್ತಾರೆ. ಹೀಗೆಯೇ ಪಶ್ಚಿಮದೇಶದವರು ಪೂರ್ವದೇಶದವರ ಮತ, ಧರ್ಮ, ತತ್ತ್ವ, ನೀತಿಗಳನ್ನು ಕುರಿತು ತಾತ್ಸಾರವಾಗಿ ನುಡಿಯುತ್ತಾರೆ.

ಆದರೆ ಅಭಿಮಾನ ಬರಿಯ ಕೆಟ್ಟ ಭಾವನೆಗಳನ್ನೇ ಹುಟ್ಟಿಸುವುದಿಲ್ಲ. ಒಳ್ಳೆಯ ಭಾವನೆಗಳನ್ನೂ ಹುಟ್ಟಿಸುತ್ತದೆ. ನಮ್ಮ ನಾಡಿನ ವಿಷಯದಲ್ಲಿ ಪ್ರೇಮವನ್ನೂ, ನಮ್ಮ ಮತದಲ್ಲಿ ಆಸಕ್ತಿಯನ್ನೂ, ನಮ್ಮವರ ಶ್ರೇಯೋಭಿವೃದ್ಧಿಯನ್ನೂ ಬೆಳಸುತ್ತದೆ. ಅಭಿಮಾನ ಒಳ್ಳೆಯದಕ್ಕೂ ಕಾರಣ ಕೆಟ್ಟದ್ದಕ್ಕೂ ಕಾರಣ; ಸದ್ಭಾವನೆಗಳಿಗೂ ಕಾರಣ ದುರ್ಭಾವನೆಗಳಿಗೂ ಕಾರಣ.

ನಮ್ಮ ತಿಳಿವನ್ನು ವಾಸ್ತವವಾಗಿ ಯಾವ ಯಾವ ಅಂಶಗಳು ಪ್ರಚೋದನೆ ಗೊಳಿಸುತ್ತವೆ ಎಂಬುದನ್ನು ಮನಶ್ಶಾಸ್ತ್ರವು ತಿಳಿಸುತ್ತದೆ. ಅವು ನಮ್ಮಲ್ಲಿ ಸರಿಯಾದ ತಿಳಿವನ್ನು ಹುಟ್ಟಿಸಬಹುದು, ಅಥವ ತಪ್ಪಾದ ತಿಳಿವನ್ನು ಹುಟ್ಟಿಸ ಬಹುದು. ನಮ್ಮ ತಿಳಿವು ಹೇಗೆ, ಯಾವ ರೀತಿಯಲ್ಲಿ ಹುಟ್ಟುತ್ತದೆ ಎಂಬುದನ್ನು ಮಾತ್ರ ಮನಶ್ಶಾಸ್ತ್ರವು ತಿಳಿಸುತ್ತದೆ. ಸರಿಯಾದ ತಿಳುವಿನ

ಸ್ವರೂಪವೇನು ಎಂಬುದನ್ನು ಅದು ತಿಳಿಸುವುದಿಲ್ಲ; ತಿಳಿಸುವುದು ಅದರ ಕೆಲಸವಲ್ಲ. ಸರಿಯಾದ ತಿಳಿವಿನ ಲಕ್ಷಣವೇನು ಎಂಬುದನ್ನು ತಿಳಿಸುವುದು ತರ್ಕಶಾಸ್ತ್ರದ ಕೆಲಸ.

## ೬. ತರ್ಕ ಮತ್ತು ತತ್ತ್ವಶಾಸ್ತ್ರ

ವಿಜ್ಞಾನದಂತೆ ತತ್ತ್ವಶಾಸ್ತ್ರವೂ ತರ್ಕಬದ್ಧವಾದ ಜ್ಞಾನವನ್ನು ಕೊಡುವ ಶಾಸ್ತ್ರ. ವಿಜ್ಞಾನವು ನಮ್ಮ ವಿಶ್ವದಲ್ಲಿರುವ ಭೌತವಸ್ತುಗಳು, ಅಥವ ಸಸ್ಯಗಳು, ಅಥವ ಪ್ರಾಣಿಗಳು, ಹೀಗೆ ಒಂದೊಂದು ಅಂಶದ ತಿಳಿವನ್ನು ಕೊಡುತ್ತದೆ. ಅದು ವಿಶ್ವವೆಲ್ಲದರ ಒಟ್ಟು ಜ್ಞಾನವನ್ನು ಕೊಡುವುದಿಲ್ಲ. ಆದ್ದರಿಂದ ಅದರ ದೃಷ್ಟಿ ಅಂಶದೃಷ್ಟಿ. ಆದರೆ ತತ್ತ್ವಶಾಸ್ತ್ರವು ವಿಶ್ವವನ್ನು ಆದ್ಯಂತವಾಗಿ ಅಖಂಡವಾಗಿ ತಿಳಿಸಲು ಪ್ರಯತ್ನಿಸುತ್ತದೆ. ಆದ್ದರಿಂದ ಅದರ ದೃಷ್ಟಿ ವಿಜ್ಞಾನಕ್ಕಿಂತಲೂ ವಿಶಾಲವಾದುದು, ಸರ್ವತೋಮುಖವಾದುದು, ಪೂರ್ಣವಾದದ್ದು. ತತ್ತ್ವಶಾಸ್ತ್ರಕ್ಕೂ ವಿಜ್ಞಾನಕ್ಕೂ ಇನ್ನೊಂದು ವ್ಯತ್ಯಾಸವಿದೆ. ವಿಜ್ಞಾನವು ಭೌತವಸ್ತು, ಜೀವ, ಮನಸ್ಸು ಇತ್ಯಾದಿ ಭಾವನೆಗಳನ್ನು ಆಧಾರವಾಗಿ ಇಟ್ಟುಕೊಂಡು ವಿಚಾರಮಾಡುತ್ತದೆ. ಆ ಭಾವನೆಗಳು ಸಕಾರಣವಾದುವೆ ಇಲ್ಲವೆ ಎಂಬುದನ್ನು ವಿಮರ್ಶಿಸುವುದಿಲ್ಲ. ತತ್ತ್ವಶಾಸ್ತ್ರವಾದರೋ ಆ ಭಾವನೆಗಳನ್ನು ವಿಮರ್ಶಿಸುತ್ತದೆ. ಆ ಭಾವನೆಗಳ ಪರಸ್ಪರ ಸಂಬಂಧವನ್ನು ವಿಮರ್ಶಿಸುತ್ತದೆ. ತತ್ತ್ವಶಾಸ್ತ್ರದ ವಿಮರ್ಶೆ ವಿಜ್ಞಾನಕ್ಕಿಂತ ಒಂದು ಹೆಜ್ಜೆ ಮುಂದೆ ಹೋಗುತ್ತದೆ. ಹೀಗೆ ತತ್ತ್ವಶಾಸ್ತ್ರವು ಅತ್ಯಂತ ವಿಮರ್ಶಾತ್ಮಕ ತಿಳಿವಾದುದರಿಂದ, ತತ್ತ್ವಶಾಸ್ತ್ರಕ್ಕೆ ವಿಜ್ಞಾನಕ್ಕಿಂತಲೂ ತರ್ಕದ ಆವಶ್ಯಕತೆ ಹೆಚ್ಚು. ವಿಜ್ಞಾನಿಯು ಸಾಮಾನ್ಯವಾಗಿ ತರ್ಕಶಾಸ್ತ್ರವನ್ನು ತಿಳಿದುಕೊಂಡು ತನ್ನ ಅನ್ವೇಷಣದಲ್ಲಿ ಪ್ರವೇಶಿಸುವುದಿಲ್ಲ. ತತ್ತ್ವಶಾಸ್ತ್ರಜ್ಞನಿಗಾದರೋ ತರ್ಕವನ್ನು ತಿಳಿದ ವಿನಾ ತತ್ತ್ವಶಾಸ್ತ್ರದಲ್ಲಿ ಪ್ರವೇಶಮಾಡಲು ಅವಕಾಶವಿಲ್ಲ. ಪ್ರತಿಯೊಬ್ಬ ತತ್ತ್ವಶಾಸ್ತ್ರಜ್ಞನೂ ತರ್ಕಶಾಸ್ತ್ರವನ್ನು ಅಭ್ಯಾಸ ಮಾಡಲೇಬೇಕು. ಆದ್ದರಿಂದ ತತ್ತ್ವಶಾಸ್ತ್ರಕ್ಕೂ ತರ್ಕಶಾಸ್ತ್ರಕ್ಕೂ ನಿಕಟ ಸಂಬಂಧವಿದೆ.

ಹೀಗೆ ತತ್ತ್ವಶಾಸ್ತ್ರವು ವಿಜ್ಞಾನಕ್ಕೆ ತಳಹದಿಯಾದ ಭಾವನೆಗಳನ್ನು ವಿಮರ್ಶೆಗೆ ಒಳಪಡಿಸುವಂತೆಯೇ, ತರ್ಕಕ್ಕೆ ತಳಹದಿಯಾದ ಭಾವನೆಗಳನ್ನೂ ವಿಮರ್ಶಿಸುತ್ತದೆ, ಪರಿಶೀಲಿಸುತ್ತದೆ. ತರ್ಕಶಾಸ್ತ್ರವು ಇತರ ಶಾಸ್ತ್ರಗಳು ಅನುಸರಿಸುವ ವಾದಗಳನ್ನೂ ವಿಧಾನಗಳನ್ನೂ ವಿಮರ್ಶಿಸುತ್ತದೆ. ತತ್ತ್ವಶಾಸ್ತ್ರವು ತರ್ಕಶಾಸ್ತ್ರದ ವಿಧಾನಗಳನ್ನೂ ಆಧಾರ ಸೂತ್ರಗಳನ್ನೂ ವಿಮರ್ಶಿಸುತ್ತದೆ.

ವಿಜ್ಞಾನದಲ್ಲಿ ಪ್ರಾರಂಭವಾದ ವಿಮರ್ಶೆಯ ಬುದ್ಧಿ, ತರ್ಕಶಾಸ್ತ್ರದಿಂದ ಪುಷ್ಟಿಹೊಂದಿ ತತ್ತ್ವಶಾಸ್ತ್ರದಲ್ಲಿ ಪೂರ್ಣಗೊಳ್ಳುತ್ತದೆ.

ಪಾಶ್ಚಾತ್ಯ ತಾರ್ಕಿಕ ಗ್ರಂಥಗಳು ಮುಖ್ಯವಾಗಿ ಸರಿಯಾದ ಯೋಚನೆಯ ನಿಯಮಗಳನ್ನು ಮಾತ್ರ ವಿಮರ್ಶಿಸುತ್ತವೆ. ಅವು ಜ್ಞಾನದ ಸ್ವರೂಪವೇನು ; ಜ್ಞಾತೃವಿಗೂ ಜ್ಞೇಯಕ್ಕೂ ಅಂದರೆ ತಿಳಿಯುವ ಚೈತನ್ಯಕ್ಕೂ ತಿಳಿಯಲ್ಪಟ್ಟ ವಿಷಯಕ್ಕೂ ಇರುವ ಸಂಬಂಧವೇನು ; ಜ್ಞಾನದ ಪ್ರಾಮಾಣ್ಯದ ಸ್ವರೂಪವೇನು ; ಹೀಗೆ ಪ್ರಮಾ, ಪ್ರಮಾತೃ ಪ್ರಮಿತಿ, ಪ್ರಾಮಾಣ್ಯ ಮುಂತಾದುವನ್ನು ಕುರಿತು ವಿಮರ್ಶಿಸುವುದಿಲ್ಲ. ಬ್ರಾಡ್ಲೆ, ಬೊಸಾಂಕೇ ಮುಂತಾದ ಕೆಲವು ಪಾಶ್ಚಾತ್ಯ ತಾತ್ವಿಕರು ಇವುಗಳನ್ನು ತಮ್ಮ ತರ್ಕಗ್ರಂಥಗಳಲ್ಲಿ ವಿಮರ್ಶಿಸುತ್ತಾರಾದರೂ, ಸಾಧಾರಣವಾಗಿ ಈ ವಿಮರ್ಶೆ ಸಾಮಾನ್ಯ ತರ್ಕಶಾಸ್ತ್ರಗಳಲ್ಲಿ ಸೇರಿರುವುದಿಲ್ಲ. ಈ ವಿಮರ್ಶೆಯನ್ನು ತತ್ತ್ವಶಾಸ್ತ್ರ ಭಾಗವಾದ ಎಪಿಸ್ಟಮಾಲಜಿ (Epistemology) ಅಂದರೆ ಜ್ಞಾನಮೀಮಾಂಸೆಯಲ್ಲಿ ಸೇರಿಸುವುದು ಪಾಶ್ಚಾತ್ಯರ ಸಂಪ್ರದಾಯ. ಭಾರತೀಯರು ಈ ಜ್ಞಾನಮೀಮಾಂಸೆಯನ್ನು ತರ್ಕಶಾಸ್ತ್ರದಲ್ಲಿ ಸೇರಿಸಿರುತ್ತಾರೆ.

ಪಾಶ್ಚಾತ್ಯ ಸಂಪ್ರದಾಯವನ್ನನುಸರಿಸಿ ಈ ಗ್ರಂಥದಲ್ಲಿ ಜ್ಞಾನಸ್ವರೂಪ, ಅದರ ಪ್ರಾಮಾಣ್ಯ ಮುಂತಾದ ವಿಚಾರಗಳನ್ನು ಸೇರಿಸಿರುವುದಿಲ್ಲ. ನಿಗಮನ (Deduction) ಅನುಗಮನ (Induction) ಎಂಬ ಎರಡು ತರ್ಕಶಾಸ್ತ್ರ ಭಾಗಗಳನ್ನು ಮಾತ್ರ ಇಲ್ಲಿ ವಿವರಿಸಿದೆ.

## ಅಭ್ಯಾಸಗಳು (೧)

೧. ಶಾಸ್ತ್ರ ಎಂದರೆ ಏನು ? ಶಾಸ್ತ್ರಜ್ಞಾನಕ್ಕೂ ಸಾಮಾನ್ಯವಾಗಿ ನಮ್ಮ ಜೀವನದಲ್ಲಿ ಬಳಕೆಯಲ್ಲಿರುವ ಜ್ಞಾನಕ್ಕೂ ಏನು ವ್ಯತ್ಯಾಸ ?

೨. ವಾಸ್ತವ ವಿಷಯಗಳನ್ನು ತಿಳಿಸುವ ಶಾಸ್ತ್ರಕ್ಕೂ ಪ್ರಮಾಣವನ್ನು ತಿಳಿಸುವ ಶಾಸ್ತ್ರಕ್ಕೂ ಇರುವ ವ್ಯತ್ಯಾಸವೇನು ? ತರ್ಕಶಾಸ್ತ್ರ ಪ್ರಮಾಣಶಾಸ್ತ್ರವೆಂದು ಹೇಳಿದಾಗ ಅದರ ಅರ್ಥವೇನು ?

೩. ಆಲೋಚನೆ ಎಂದರೆ ಏನು ? ಅದರ ವಿವಿಧ ಅರ್ಥಗಳನ್ನು ವಿಮರ್ಶಿಸಿ.

೪. "ತರ್ಕಶಾಸ್ತ್ರ ಶಾಸ್ತ್ರಗಳ ಶಾಸ್ತ್ರ". ವಿಮರ್ಶಿಸಿ.

೫. ತರ್ಕಶಾಸ್ತ್ರಕ್ಕೂ ಮನಶ್ಶಾಸ್ತ್ರಕ್ಕೂ ಇರುವ ಸಂಬಂಧವೇನು ? ಅವು ಯಾವ ಅಂಶಗಳಲ್ಲಿ ಭಿನ್ನವಾಗಿರುತ್ತವೆ ?

೬. ತರ್ಕಶಾಸ್ತ್ರ ಕಲೆಯೂ ಹೌದು ಶಾಸ್ತ್ರವೂ ಹೌದು. ವಿಮರ್ಶಿಸಿ.

೭. ತರ್ಕಶಾಸ್ತ್ರಕ್ಕೂ ತತ್ತ್ವಶಾಸ್ತ್ರಕ್ಕೂ ಇರುವ ಸಂಬಂಧವನ್ನು ತಿಳಿಸಿ.

## ೨. ಆಲೋಚನೆ ಮತ್ತು ಭಾಷೆ

ತರ್ಕಬದ್ಧವಾದ ಆಲೋಚನೆಯ ಸರಳ ರೂಪ ಒಂದು ಪ್ರತಿಜ್ಞೆಯ (Proposition) ರೂಪವಾಗಿರುತ್ತದೆ. ಈ ಮರ ಮಾವಿನ ಮರ. ಹಸುಗಳು ಸಸ್ಯಾಹಾರಿಗಳು. ಮನುಷ್ಯರು ಆಲೋಚಿಸುವ ಪ್ರಾಣಿಗಳು. ಮಾನವರು ಮರ್ತ್ಯರು. ಇವು ಪ್ರತಿಜ್ಞೆಗಳಿಗೆ ಉದಾಹರಣೆಗಳು. ಇವು ವಾಕ್ಯರೂಪ ದಲ್ಲಿವೆ. ಆದರೆ ನಮ್ಮ ಆಲೋಚನೆಗಳೆಲ್ಲ ಅನೇಕ ವೇಳೆ ವಾಕ್ಯರೂಪದಲ್ಲಿರುವು ದಿಲ್ಲ. ಮನೆ ಉರಿಯುವುದನ್ನೋ ಅಥವ ಚೇಳು ಅಥವ ಹಾವು ಹರಿದಾಡು ತ್ತಿರುವುದನ್ನೋ ಕಂಡು, 'ಬೆಂಕಿ!', 'ಚೇಳು!', 'ಹಾವು!' ಎಂದು ಕಿರಚುತ್ತೇವೆ. ಇವು ಬಿಡಿ ಮಾತುಗಳಾದರೂ ಇವುಗಳ ಹಿಂದೆ ನಮ್ಮ ಮನಸ್ಸಿನಲ್ಲಿ ಬೇರೆ ಬೇರೆ ಭಾವಗಳಿವೆ. 'ಬೆಂಕಿ!' ಎಂದು ಕೂಗಿಕೊಂಡಾಗ ಅಲ್ಲಿ ಬೆಂಕಿ ಹತ್ತಿಕೊಂಡಿದೆ ಎಂದೂ, 'ಚೇಳು!' ಎಂದು ಕೂಗಿಕೊಂಡಾಗ ಇಲ್ಲಿ ಚೇಳಿದೆ ಎಂದೂ ನಮ್ಮ ಭಾವನೆ. ಈ ಭಾವನೆಗಳು ಸ್ಪಷ್ಟವಾಗಬೇಕಾದರೆ ಅವು ವಾಕ್ಯರೂಪದಲ್ಲಿ ಹೊರಬೀಳಬೇಕು.

ಹಾಗಾದರೆ ಭಾಷೆ ಇಲ್ಲದೆಯೆ ಆಲೋಚಿಸುವುದಕ್ಕಾಗುವುದಿಲ್ಲವೆ ಎಂದು ಕೇಳುವುದುಂಟು. ಭಾಷೆಯ ಉಪಯೋಗವಿಲ್ಲದೆ ಯೋಚಿಸುವುದು ಸಾಧ್ಯ. ಮೂಗರು ಮಾತನಾಡಲಾರರು. ಆದರೂ ಅವರು ಯೋಚಿಸಬಲ್ಲರು. ಆದರೆ ಮಾತಿನ ಸಹಾಯವಿಲ್ಲದಿರುವುದು ಅವರ ಯೋಚನೆ ಬೆಳೆಯುವುದಕ್ಕೆ ಒಂದು ದೊಡ್ಡ ಅಡ್ಡಿಯಾಗಿದೆ; ಅವರ ಜ್ಞಾನ ತುಂಬ ಮೊಟಕಾಗಿದೆ. ಭಾಷೆಯ ಸಹಾಯವಿಲ್ಲದ ಅವರು ತಮ್ಮ ಮನಸ್ಸಿನಲ್ಲಿರುವ ಭಾವನೆಗಳನ್ನು ತಿಳಿಸಲು ಎಷ್ಟು ಶ್ರಮಪಡುತ್ತಾರೆ!

ಸರಳವಾದ ಒಂದು ಪ್ರತಿಜ್ಞೆಯನ್ನು ತಿಳಿಸಬೇಕಾದರೆ ಭಾಷೆ ಇಷ್ಟು ಅಗತ್ಯವಾದರೆ, ನಮ್ಮ ಆಲೋಚನಾತರಂಗಗಳನ್ನು, ನಮ್ಮ ವಾದವಿವಾದ ಗಳನ್ನು ತಿಳಿಯಪಡಿಸಲು ಭಾಷೆಯ ಅಗತ್ಯ ಇನ್ನೂ ಹೆಚ್ಚು. ಬೆಟ್ಟದಲ್ಲಿ ಹೊಗೆಯನ್ನು ಕಂಡವನು ಅಲ್ಲಿ ಬೆಂಕಿ ಇದೆ ಎಂದು ಹೇಳಬಹುದು. ಬೆಟ್ಟದಲ್ಲಿ ಬೆಂಕಿ ಇದೆ ಎಂಬುದು ಒಂದು ಸರಳ ಪ್ರತಿಜ್ಞೆ. ಆದರೆ ಅದು ಪೂರ್ಣವಾದ ಜ್ಞಾನವಲ್ಲ. ಅದು ಪೂರ್ಣವಾದ ಜ್ಞಾನವಾಗಬೇಕಾದರೆ ಅದಕ್ಕೆ ಕಾರಣ ಹೇಳಬೇಕು. ಕಾರಣ ಹೇಳಿ ಪ್ರತಿಜ್ಞೆಯನ್ನು ಸ್ಥಾಪಿಸುವುದು ತರ್ಕ. ಈ ತರ್ಕ ವನ್ನು ವಿಶದಪಡಿಸಲು ಕೆಲವರು ಹತ್ತು ವಾಕ್ಯಗಳನ್ನು ಬಳಸಬಹುದು. ಭಾರತ

ದಲ್ಲಿ ತರ್ಕಶಾಸ್ತ್ರದ ತರುಣದಲ್ಲಿ ತರ್ಕವನ್ನು ವಿಶದಪಡಿಸಲು ಹತ್ತು ವಾಕ್ಯಗಳನ್ನು ಉಪಯೋಗಿಸುತ್ತಿದ್ದರು. ಕಾಲಕ್ರಮದಲ್ಲಿ ಇದು ಹೆಚ್ಚೆಂದು ಕಂಡುಬಂದು ಒಂದು ತರ್ಕವನ್ನು ವಿಶದಪಡಿಸಲು ಐದು ವಾಕ್ಯಗಳು ಸಾಕೆಂದು ಅಭಿಪ್ರಾಯವೇರ್ಪಟ್ಟಿತು. ಬೆಟ್ಟದಲ್ಲಿ ಬೆಂಕಿ ಇದೆ. ಏಕೆಂದರೆ ಅಲ್ಲಿ ಹೊಗೆ ಇದೆ. ಎಲ್ಲೆಲ್ಲಿ ಹೊಗೆ ಇದೆಯೋ ಅಲ್ಲಲ್ಲಿ ಬೆಂಕಿ ಇದೆ. ಅಡಿಗೆಯ ಮನೆಯಂತೆ ಬೆಟ್ಟದಲ್ಲಿ ಹೊಗೆ ಇದೆ. ಆದ್ದರಿಂದ ಅಲ್ಲಿ ಬೆಂಕಿ ಇದೆ.—ಇದು ಭಾರತೀಯ ತರ್ಕವಾಕ್ಯಕ್ಕೆ ಉದಾಹರಣೆ. ಮೂರು ವಾಕ್ಯಗಳು ಸಾಕೆಂದು ಅರಿಸ್ಟಾಟಲಿನ ಅಭಿಪ್ರಾಯ. ಮನುಷ್ಯರು ಮರ್ತ್ಯರು. ಸಾಕ್ರಟೀಸ್ ಮನುಷ್ಯ. ಆದ್ದರಿಂದ ಸಾಕ್ರಟೀಸ್ ಮರ್ತ್ಯ.—ಇದು ಮೂರು ವಾಕ್ಯಗಳ ತರ್ಕಕ್ಕೆ ಅರಿಸ್ಟಾಟಲ್ ಕೊಟ್ಟ ಉದಾಹರಣೆ. ಅವನ ಅಭಿಪ್ರಾಯಕ್ಕೆ ವಿಶೇಷವಾಗಿ ಮನ್ನಣೆ ಇದೆ. ಕೆಲವು ಭಾರತೀಯ ತಾರ್ಕಿಕರು ಒಂದು ತರ್ಕವನ್ನು ವಿಶದಪಡಿಸಲು ಮೂರೇ ವಾಕ್ಯ ಸಾಕೆಂದು ಹೇಳುತ್ತಾರೆ. ಎಲ್ಲೆಲ್ಲಿ ಹೊಗೆ ಇದೆಯೋ ಅಲ್ಲಲ್ಲಿ ಬೆಂಕಿ ಇರಬೇಕು. ಬೆಟ್ಟದಲ್ಲಿ ಹೊಗೆ ಇದೆ. ಆದ್ದರಿಂದ ಬೆಟ್ಟದಲ್ಲಿ ಬೆಂಕಿ ಇದೆ.—ಇದು ಭಾರತೀಯ ಮೂರು ವಾಕ್ಯಗಳ ತರ್ಕಕ್ಕೆ ಉದಾಹರಣೆ. ಬೌದ್ಧ ತಾರ್ಕಿಕರು ಇನ್ನೂ ಮುಂದೆ ಹೋಗಿ ಈ ತರ್ಕಕ್ಕೆ ಎರಡೇ ವಾಕ್ಯಗಳು ಸಾಕೆಂದು ಅಭಿಪ್ರಾಯಪಟ್ಟರು. ಬೆಟ್ಟದಲ್ಲಿ ಬೆಂಕಿ ಇದೆ. ಏಕೆಂದರೆ ಅಲ್ಲಿ ಹೊಗೆ ಇದೆ.—ಇದು ಬೌದ್ಧರ ಎರಡು ವಾಕ್ಯಗಳ ತರ್ಕಕ್ಕೆ ಉದಾಹರಣೆ. ತರ್ಕಕ್ಕೆ ಎಷ್ಟು ವಾಕ್ಯಗಳು ಅಗತ್ಯ ಎಂಬ ವಾದ ಇಲ್ಲಿ ಅಪ್ರಕೃತ. ಒಂದಕ್ಕಿಂತ ಹೆಚ್ಚು ವಾಕ್ಯ ಆವಶ್ಯಕವೆಂದು ತಿಳಿಯಬೇಕಾದುದು ಮುಖ್ಯ. ಜ್ಞಾನ ಬೆಳೆಯಬೇಕಾದರೆ ಇಂಥ ಅನೇಕ ತರ್ಕಗಳು ಒಂದಕ್ಕೊಂದು ನೆರವಾಗಬೇಕು. ಇದರಿಂದ ಜ್ಞಾನದ ಬೆಳವಣಿಗೆಗೆ ಭಾಷೆ ಎಷ್ಟು ಉಪಯುಕ್ತವಾದ ಕರಣ ಎಂಬುದು ವಿಶದಪಡುತ್ತದೆ.

ಆಲೋಚನೆ ಮತ್ತು ಮಾತು ಪಾರ್ವತೀಪರಮೇಶ್ವರರಂತೆ ನಿಕಟ ಸಂಬಂಧ ಉಳ್ಳವು. ಇವು ಒಂದಕ್ಕೊಂದು ಸೇರಿಕೊಂಡಿರುತ್ತವೆ. ಪ್ರಸಿದ್ಧ ಬೌದ್ಧ ತಾರ್ಕಿಕನಾದ ದಿಙ್ನಾಗ ಹೇಳುವಂತೆ “ವಿಕಲ್ಪಯೋನಯಃ ಶಬ್ದಾಃ ವಿಕಲ್ಪಾಃ ಶಬ್ದಯೋನಯಃ”. ಭಾವಗಳು ಶಬ್ದಗಳಿಗೆ ಮೂಲ. ಶಬ್ದಗಳು ಭಾವಗಳಿಗೆ ಮೂಲ. ನಮ್ಮ ಮನಸ್ಸಿನಲ್ಲಿರುವ ಭಾವನೆಯನ್ನು ನಾವೇ ಸ್ಪಷ್ಟಪಡಿಸಿಕೊಂಡು ಆ ಭಾವನೆಯನ್ನು ಸ್ಥಿರಪಡಿಸಿಕೊಳ್ಳಬೇಕಾದರೆ ನಾವು ಅದಕ್ಕೆ ಒಂದು ಮಾತನ್ನು ಸೃಷ್ಟಿಸಿಕೊಳ್ಳಬೇಕು. ಒಂದೊಂದು ಹೊಸ ಭಾವನೆ ಹುಟ್ಟಿದಾಗಲೂ ಒಂದೊಂದು ಹೊಸ ಮಾತು ಸೃಷ್ಟಿಯಾಗು

ತ್ತದೆ. ಜ್ಞಾನ ಬೆಳೆದಂತೆಲ್ಲ ಮಾತುಗಳ ಸಂಖ್ಯೆಯೂ ಬೆಳೆಯುತ್ತದೆ. ಒಂದು ಕಾಲದಲ್ಲಿ ನಮ್ಮ ಶಬ್ದಕೋಶ ಒಂದೆರಡು ಸಾವಿರ ಪದಗಳಿಂದ ಕೂಡಿತ್ತು. ಈಗ ನಮ್ಮ ಬಳಕೆಗೆ ಅಂಥ ಶಬ್ದಕೋಶ ಸಾಲದು. ನಮ್ಮ ಜ್ಞಾನ ಅಪಾರವಾಗಿ ಬೆಳೆದಿರುವುದರಿಂದ ಕೇವಲ ವಿದ್ಯಾರ್ಥಿಗಳ ಬಳಕೆಗೂ ಕೂಡ ಅನೇಕ ಸಾವಿರ ಮಾತುಗಳಿರುವ ಶಬ್ದಕೋಶ ಬೇಕಾಗಿದೆ. ಒಂದು ಜನಾಂಗ ತನ್ನ ಜ್ಞಾನರಾಶಿಯನ್ನು ಬೆಳಸಿಕೊಂಡು ಬಂದಿರುವುದು ಉಳಿಸಿಕೊಂಡು ಬಂದಿರುವುದು ತನ್ನ ಭಾಷೆಯ ಮೂಲಕ. ಅರ್ಥವನ್ನು ಸ್ಥಿರಪಡಿಸುವುದೊಂದೇ ಅಲ್ಲ ಮಾತಿನ ಉಪಯೋಗ. ನಮ್ಮ ಮನಸ್ಸಿನಲ್ಲಿರುವುದನ್ನು ಇನ್ನೊಬ್ಬರಿಗೆ ತಿಳಿಸಲು ಅದು ಅಗತ್ಯವಾಗಿ ಬೇಕಾದ ಸಾಧನ; ಅದು ನಮ್ಮ ಆಲೋಚನೆಗಳ ವಾಹಕ. ಇದು ಭಾಷೆಯ ಎರಡನೆಯ ಉಪಯೋಗ. ಆಲೋಚಿಸಿದ ವಿಷಯವನ್ನು ಸಂಗ್ರಹವಾಗಿ ತಿಳಿಸುವುದು ಭಾಷೆಯ ಮೂರನೆಯ ಉಪಯೋಗ. ನಾವು ಅನೇಕ ವರ್ಷಗಳ ಕಾಲ ಆಲೋಚಿಸಿ ತಿಳಿದ ವಿಷಯಗಳು, ಭಾವ ಪರಂಪರೆಗಳು ಒಂದೊಂದು ಮಾತಿನಲ್ಲಿ ಅಡಕವಾಗಿವೆ. ನಮ್ಮ ಮನಸ್ಸಿನಲ್ಲಿ ಮೂಡಿ ಹಲವು ಕಾಲ ಬೆಳೆದ ಅರ್ಥವನ್ನು ಒಂದು ಸಣ್ಣ ಮಾತು ಅಡಗಿಸಿಕೊಂಡಿರುವುದರಿಂದ ಮಾತು ಸಂಗ್ರಹಿಸಿದ ಆಲೋಚನೆ ಎಂದು ಹೇಳುವುದುಂಟು. ಹೀಗೆ ಅನೇಕ ಶತಮಾನಗಳ ಕಾಲದಲ್ಲಿ ಬೆಳೆದ ಅರ್ಥವನ್ನು ಮಾತು ಸಂಗ್ರಹಿಸುವುದರಿಂದ ಮಾತಿನಿಂದ ವಿಶೇಷ ರೀತಿಯಲ್ಲಿ ಶ್ರಮ ಉಳಿತಾಯವಾಗುತ್ತದೆ. ಶ್ರಮದ ಉಳಿತಾಯ ಭಾಷೆಯಿಂದ ನಮಗೆ ಆಗುತ್ತಿರುವ ದೊಡ್ಡ ಸೇವೆ.

ಬದಲಾವಣೆ ಭಾಷೆಯ ಒಂದು ಮುಖ್ಯ ಲಕ್ಷಣ. ಅದು ಕಾಲದಿಂದ ಕಾಲಕ್ಕೆ ಬದಲಾಯಿಸುತ್ತಿರುತ್ತದೆ. ಹೆಗೆಲ್ ಎಂಬ ಜರ್ಮನ್ ತಾತ್ವಿಕನು ಹೇಳುವಂತೆ ಅದಕ್ಕೆ ಕೈಕಾಲುಗಳಿವೆ. ಚಲಾವಣೆ ಆದಂತೆಲ್ಲ ಅದರ ಅರ್ಥ ಬದಲಾಯಿಸುವುದುಂಟು. ಒಂದು ಕಾಲದಲ್ಲಿ ಸಾಮಾನ್ಯ ಅರ್ಥಬೋಧಕವಾದ ಮಾತು ಕಾಲಕ್ರಮದಲ್ಲಿ ವಿಶೇಷ ಅರ್ಥಸೂಚಕವಾಗುತ್ತದೆ. ಹಾಗೆಯೇ ಇನ್ನೊಂದು ಮಾತು ವಿಶೇಷ ಅರ್ಥಸೂಚಕವಾಗಿದ್ದುದು ಸಾಮಾನ್ಯ ಅರ್ಥಬೋಧಕವಾಗುತ್ತದೆ. ಒಂದು ಕಾಲದಲ್ಲಿ ಸೀರೆ ಎಂಬ ಪದ ಗಂಡಸರೂ ಹೆಂಗಸರೂ ಇಬ್ಬರೂ ಉಪಯೋಗಿಸುವ ಬಟ್ಟೆ ಎಂಬ ಸಾಮಾನ್ಯ ಅರ್ಥಬೋಧಕವಾಗಿತ್ತು. ಈಗ ಅದಕ್ಕೆ ಹೆಂಗಸರು ಉಡುವ ಬಟ್ಟೆ ಎಂಬ ವಿಶೇಷ ಅರ್ಥ ಬಂದಿದೆ. ಪೊನ್ ಎಂಬ ಪದ ಹಿಂದೆ ಲೋಹ ಎಂಬ ಸಾಮಾನ್ಯ ಅರ್ಥ ಪಡೆದಿತ್ತು. ಕಬ್ಬಿಣವನ್ನು ಕರ್‌ಪೊನ್ ಎಂದು ಕರೆಯುತ್ತಿದ್ದರು. ಈಗ ಅದು

ಚಿನ್ನ ಎಂಬ ವಿಶೇಷ ಅರ್ಥ ಪಡೆದಿದೆ. ನಾತ, ಮಡದಿ ಎಂಬ ಪದಗಳೂ ಒಂದು ಕಾಲದಲ್ಲಿ ಸಾಮಾನ್ಯ ಅರ್ಥಬೋಧಕವಾಗಿದ್ದು ಈಗ ವಿಶೇಷ ಅರ್ಥಬೋಧಕ ವಾದ ಪದಗಳಾಗಿರುವುದಕ್ಕೆ ಉದಾಹರಣೆಗಳು. ಚೆಂಬು ಎಂಬ ಪದಕ್ಕೆ ಹಿಂದೆ ತಾಮ್ರದ ಚೆಂಬು ಎಂಬ ವಿಶೇಷ ಅರ್ಥವಿತ್ತು. ಈಗ ಅದು ಎಲ್ಲ ಲೋಹ ಗಳಿಂದ ಮಾಡಿದ ತಂಬಿಗೆಗಳಿಗೂ ಅನ್ವಯವಾಗುತ್ತದೆ. ಎಣ್ಣೆ ಎಂಬ ಪದಕ್ಕೆ ಮೊದಲಲ್ಲಿ ಎಳ್ಳಿನ ಎಣ್ಣೆ ಎಂಬ ವಿಶೇಷ ಅರ್ಥವಿತ್ತು. ಈಗ ಅದು ಸಾಮಾನ್ಯ ಅರ್ಥಬೋಧಕವಾಗಿದೆ.

ಚಲಾವಣೆಯ ಪ್ರಭಾವದಿಂದ ಒಂದೇ ಪದ ಬೇರೆ ಬೇರೆ ಅರ್ಥಗಳನ್ನು ಪಡೆಯುತ್ತದೆ. ಓಲೆ ಎಂಬ ಪದ ಎರಡು ಅರ್ಥಗಳನ್ನು ಪಡೆದಿದೆ. ಕೆಲವು ಪದಗಳು ಎರಡು ವಿರುದ್ಧ ಅರ್ಥಗಳನ್ನೂ ಪಡೆಯುವುದುಂಟು. ಗೆಂಟು ಎಂಬ ಪದ ಹತ್ತಿರ, ದೂರ ಎಂಬ ಎರಡು ವಿರುದ್ಧ ಅರ್ಥಗಳಲ್ಲಿ ಉಪಯೋಗ ವಾಗಿದೆ.

ಸನ್ನಿವೇಶಾನುಸಾರವಾಗಿ ಕೆಲವು ಪದಗಳಿಗೆ ಸಾಮಾನ್ಯವಾದ ವಾಚ್ಯಾರ್ಥದಿಂದ ಭಿನ್ನವಾದ ಅಥವಾ ಹೆಚ್ಚಿನ ಅರ್ಥ ಬರುತ್ತದೆ. 'ಕೇರಿಯಲ್ಲಿ ಯಾರೂ ಇಲ್ಲ', ಎಂಬ ವಾಕ್ಯದಲ್ಲಿ ಕೇರಿ ಎಂಬುದಕ್ಕೆ ಸಾಮಾನ್ಯವಾದ ವಾಚ್ಯಾರ್ಥವಿದೆ. ಕೇರಿಯೆಲ್ಲ ಕಣ್ಣೀರು ಸುರಿಸಿತು, ಎಂಬ ವಾಕ್ಯದಲ್ಲಿ ಕೇರಿಯೆಲ್ಲ ಎಂದರೆ ಕೇರಿಯಲ್ಲಿರುವ ಜನರೆಲ್ಲ ಎಂದು ಅರ್ಥ. 'ನೀವು ದೊಡ್ಡವರು, ದೂರ ಇರಿ', ಎಂಬ ವಾಕ್ಯದಲ್ಲಿ ದೊಡ್ಡವರು ಎಂಬ ಪದ ವಾಚ್ಯಾರ್ಥಕ್ಕೆ ವಿರುದ್ಧವಾದ ಅರ್ಥವನ್ನು ಸೂಚಿಸುತ್ತದೆ. 'ಇವನು ಬೃಹಸ್ಪತಿ' ಎಂಬ ವಾಕ್ಯದಲ್ಲಿಯೂ ಹೀಗೆಯೆ. ಪದಗಳನ್ನು ಲಕ್ಷ್ಯಾರ್ಥದಲ್ಲಿ ಕಾವ್ಯದಲ್ಲೂ, ರಾಜಕೀಯ ಮುಖಂಡರ, ಮತ ಬೋಧಕರ ಭಾಷಣಗಳಲ್ಲಿಯೂ ವಿಶೇಷವಾಗಿ ಉಪಯೋಗ ಮಾಡುತ್ತಾರೆ. ಆದ್ದರಿಂದ ಲಕ್ಷ್ಯಾರ್ಥವನ್ನು ವಾಗ್ವ್ಯವಹಾರದ ನಿತ್ಯಧರ್ಮ, ಕವಿಗಳ ಕಾಮಧೇನು, ಅಲಂಕಾರಗಳ ಜೀವದ್ರವ್ಯ ಎಂದು ಹೇಳುವುದುಂಟು. ಲಕ್ಷ್ಯಾರ್ಥವಲ್ಲದೆ ಧ್ವನಿತಾರ್ಥವೆಂಬ ಬೇರೆ ಅರ್ಥವಿದೆ ಎಂದು ಕೆಲವರು ವಾದಿಸುತ್ತಾರೆ. ಧ್ವನಿತಾರ್ಥ ಲಕ್ಷ್ಯಾರ್ಥಕ್ಕಿಂತ ಇನ್ನೂ ಆಚೆಯ ಅರ್ಥ ಸೂಚಿಸುತ್ತದೆ. ಕೆಲವು ಸಂದರ್ಭಗಳಲ್ಲಿ ಅಸದೃಶವಾದ ಅರ್ಥವನ್ನು ಪ್ರಕಾಶಿಸುತ್ತದೆ. ಒಂದು ನವೀನ ಪ್ರಪಂಚವನ್ನೇ ತೋರಿಸುತ್ತದೆ ಎಂದು ಇವರ ವಾದ. ಈ ವಿಚಾರ ಇಲ್ಲಿ ಬೆಳಸುವುದು ಅನಾವಶ್ಯಕ, ಅಸಂಗತ.

ಪದಗಳನ್ನು ಲಕ್ಷ್ಯಾರ್ಥದಲ್ಲಿ ಅಥವ ವ್ಯಂಗ್ಯಾರ್ಥದಲ್ಲಿ ಉಪಯೋಗಿಸುವುದು ಕಾವ್ಯದಲ್ಲಿ ಎಷ್ಟೇ ಪರಿಣಾಮಕಾರಿಯಾಗಲಿ, ರಾಜ್ಯಕಾರಣಪಟುಗಳು

ಜನರ ಮನಸ್ಸನ್ನು ಒಲಿಸಿಕೊಳ್ಳಲು ಅದರಿಂದ ಎಷ್ಟೇ ಉಪಯೋಗ ಪಡೆಯಲಿ, ಅದು ವಿಜ್ಞಾನಕ್ಷೇತ್ರದಲ್ಲಿ, ಸತ್ಯಾನ್ವೇಷಣ ಧ್ಯೇಯವಾಗಿವುಳ್ಳ ಶಾಸ್ತ್ರಗಳಲ್ಲಿ ನಿಷಿದ್ಧ. ಸ್ಪಷ್ಟವಾದ ನ್ಯಾಯಬದ್ಧವಾದ ತಿಳಿವನ್ನು ಬೆಳಸಲಪೇಕ್ಷಿಸುವವರು ಪದಗಳನ್ನು ನಿರ್ದಿಷ್ಟವಾದ ಸ್ಪಷ್ಟವಾದ ಅರ್ಥದಲ್ಲಿ ಉಪಯೋಗಿಸಬೇಕು. ಅವರು ಪದಗಳನ್ನು ಬಹಳ ಜಾಗರೂಕತೆಯಿಂದ ಉಪಯೋಗಿಸಬೇಕು. ಅಸ್ಪಷ್ಟತೆಗೆ ಎಳ್ಳಷ್ಟೂ ಅವಕಾಶ ಕೊಡಕೂಡದು. ಈ ಕ್ಷೇತ್ರಗಳಲ್ಲಿ ವ್ಯವಹರಿಸುವವರ ಮುಖ್ಯ ಗುರಿ ಸತ್ಯ; ಇದ್ದದ್ದನ್ನು ಇದ್ದಂತೆ ಹೆಚ್ಚು ಕಡಿಮೆ ಮಾಡದೆ ತಿಳಿಯುವುದು. ಉತ್ಪ್ರೇಕ್ಷೆ ಕಾವ್ಯದಲ್ಲಿ ಅಲಂಕಾರವಾಗಬಹುದು, ಅದು ವಸ್ತುವನ್ನು ಸುಂದರವಾಗಿ ತೋರಿಸಬಹುದು. ಆದರೆ ಶಾಸ್ತ್ರದಲ್ಲಿ ಉತ್ಪ್ರೇಕ್ಷೆ ಅಪಾಯಕರ. ವಿರೋಧಪಕ್ಷದವರ ಅಲ್ಪಾಪರಾಧವನ್ನು ಮಹತ್ತರವಾದುದನ್ನಾಗಿ ಮಾಡಿ, ತಮ್ಮ ಪಕ್ಷದವರು ಮಾಡಿದುದು ದೊಡ್ಡ ಅಪರಾಧವಾದರೂ ಅದು ಸಣ್ಣದೆಂದು ತೋರಿಸುವುದು, ಜನರಲ್ಲಿ ಭಾವೋದ್ರೇಕ ಉಂಟುಮಾಡುವ ಮಾತುಗಳನ್ನು ಆರಿಸಿ ಉಪಯೋಗಿಸುವುದು, ಒಂದೇ ಪದವನ್ನು ಬೇರೆ ಬೇರೆ ಅರ್ಥಗಳಲ್ಲಿ ಉಪಯೋಗಿಸಿ ಜನರ ಕಣ್ಣಿಗೆ ಮಣ್ಣೆರಚುವುದು—ಇವು ರಾಜಕಾರಣಿಗಳ ಜಯಕ್ಕೆ ಅಗತ್ಯವಾದ ಅಸ್ತ್ರಗಳಾಗಬಹುದು. ಆದರೆ ಸತ್ಯವನ್ನೇ ಧ್ಯೇಯವಾಗಿ ಇಟ್ಟುಕೊಂಡಿರುವ ಶಾಸ್ತ್ರಗಳಲ್ಲಿ ಅವು ಸತ್ಯವನ್ನು ಮರೆಮಾಡಿ ಸತ್ಯಾನ್ವೇಷಣೆಗೆ ತಡೆಯಾಗುತ್ತವೆ. ವಿಷಯವನ್ನು ಪಾರದರ್ಶಕವಾಗಿ ಮಾಡಬೇಕಾದರೆ ಪದಗಳನ್ನು ಖಚಿತವಾದ, ಕರಾರುವಾಕಾದ ಅರ್ಥದಲ್ಲಿ ಉಪಯೋಗಿಸಬೇಕು.

ಸರಿಯಾದ ತಿಳಿವನ್ನು ಹುಟ್ಟಿಸಲು ಸರಿಯಾದ ಪದಪ್ರಯೋಗ ಆವಶ್ಯಕ. ಸರಿಯಾದ ಭಾಷೆಯ ಪ್ರಯೋಗವನ್ನು ತಿಳಿಸುವ ಶಾಸ್ತ್ರ ವ್ಯಾಕರಣ. ತರ್ಕವು ಜ್ಞಾನಕ್ಕೆ ಸಂಬಂಧಪಟ್ಟ ಪ್ರಮಾಣಶಾಸ್ತ್ರವಾದರೆ, ವ್ಯಾಕರಣವು ಭಾಷೆಗೆ ಸಂಬಂಧಪಟ್ಟ ಪ್ರಮಾಣಶಾಸ್ತ್ರ. ವಿಷಯವನ್ನು ತರ್ಕನಿಯಮಗಳಿಗನುಸಾರವಾಗಿ ಆಲೋಚಿಸುವುದೂ, ಆಲೋಚಿಸಿ ನಿರ್ಧರಿಸಿದ ಅರ್ಥವನ್ನು ಸ್ಪಷ್ಟವಾದ ಮತ್ತು ವ್ಯಾಕರಣಬದ್ಧವಾದ ಭಾಷೆಯ ಮೂಲಕ ಹೊರಗೆಡಹುವುದೂ ಎಲ್ಲ ಶಾಸ್ತ್ರಗಳ ಏಳಿಗೆಗೂ ಅಗತ್ಯ. ಆದುದರಿಂದ ಇತರ ಶಾಸ್ತ್ರಗಳ ಅಧ್ಯಯನಕ್ಕೆ ಪೂರ್ವಭಾವಿಯಾಗಿ ತರ್ಕ ವ್ಯಾಕರಣಗಳ ಅಧ್ಯಯನವನ್ನು ಭಾರತೀಯ ವಿದ್ಯಾಭ್ಯಾಸಕ್ರಮದಲ್ಲಿ ಕಡ್ಡಾಯವಾಗಿ ಸೇರಿಸಿದ್ದಾರೆ. "ಕಾಣಾದಂ ಪಾಣಿನೀಯಂ ಚ ಸರ್ವಶಾಸ್ತ್ರೋಪಕಾರಕಂ" ಎಂಬುದು ಭಾರತೀಯ ವಿದ್ಯಾತತ್ತ್ವದ ಮುಖ್ಯಸೂತ್ರ.

ವಾಕ್ಕಿಗೂ ಅರ್ಥಕ್ಕೂ ಇರುವಂತೆ ವ್ಯಾಕರಣಕ್ಕೂ ತರ್ಕಶಾಸ್ತ್ರಕ್ಕೂ ನಿಕಟಸಂಬಂಧವಿದ್ದರೂ, ಅವೆರಡೂ ಪ್ರಮಾಣಶಾಸ್ತ್ರಗಳಾದರೂ ಅವು ವಿಚಾರಮಾಡುವ ಪ್ರಮಾಣ ಬೇರೆ. ವ್ಯಾಕರಣದ ಪ್ರಮಾಣ ಮಾತಿಗೆ ಸಂಬಂಧಪಟ್ಟದ್ದು. ತರ್ಕದ ಪ್ರಮಾಣ ಅರ್ಥಕ್ಕೆ ಸಂಬಂಧಪಟ್ಟದ್ದು. ವಾಕ್ ಮತ್ತು ಅರ್ಥ ಇವೆರಡೂ ನಿಕಟಸಂಬಂಧ ಉಳ್ಳವು. ಅಸ್ಪಷ್ಟವಾದ ತಿಳಿವು ಇರುವವನ ಭಾಷೆ ತೊಡಕಾಗಿರುತ್ತದೆ. ಹಾಗೆಯೇ ಅಸಾಧುವಾದ ಪದಪ್ರಯೋಗದಿಂದ, ತೊಡಕಾದ ವಾಕ್ಯರಚನೆಯಿಂದ ತಿಳಿವಿನ ತಪ್ಪುಗಳು (Fallacies) ಉದ್ಭವಿಸುತ್ತವೆ.

ಹೀಗೆ ಸರಿಯಾದ ಆಲೋಚನೆಗೆ ವ್ಯಾಕರಣಬದ್ಧವಾದ ಭಾಷಾಜ್ಞಾನ ಆವಶ್ಯಕವಾದರೂ ವ್ಯಾಕರಣರೂಪಗಳೇ ಬೇರೆ ತರ್ಕಶಾಸ್ತ್ರರೂಪಗಳೇ ಬೇರೆ ಎಂಬುದನ್ನು ಮರೆಯಬಾರದು. ಸರಿಯಾದ ವ್ಯಾಕರಣರೂಪಗಳನ್ನು ಪರಿಶೀಲಿಸುವುದರಿಂದ ಸರಿಯಾದ ತರ್ಕರೂಪಗಳು ಯಾವುವು ಎಂಬುದನ್ನು ತಿಳಿಯಲಾಗುವುದಿಲ್ಲ. ಈ ಅಂಶವನ್ನು ಕೆಲವು ಪಾಶ್ಚಾತ್ಯ ತಾರ್ಕಿಕರು ಅಲಕ್ಷ್ಯಮಾಡಿದುದರಿಂದ ಅವರ ತಾರ್ಕಿಕರೂಪಗಳಿಗೆ ಮತ್ತು ವಿಂಗಡಣೆಗಳಿಗೆ ವ್ಯಾಕರಣರೂಪಗಳು ಮತ್ತು ವಿಂಗಡನೆಗಳು ತಳಹದಿಯಾಗಿವೆ.

## ಅಭ್ಯಾಸಗಳು (೨)

೧. ಆಲೋಚನೆಗೂ ಭಾಷೆಗೂ ಇರುವ ಸಂಬಂಧವನ್ನು ತಿಳಿಸಿ.

೨. ಪದಗಳ ಅರ್ಥ ಕಾಲದಿಂದ ಕಾಲಕ್ಕೆ ಹೇಗೆ ಬದಲಾಯಿಸುತ್ತದೆ?

೩. ಭಾಷೆ ಯಾವ ವಿಧದಲ್ಲಿ ಆಲೋಚನೆಗೆ ಸಾಧನವಾಗಬಹುದು ಅಥವ ಬಾಧಕವಾಗಬಹುದು?

೪. ತರ್ಕಶಾಸ್ತ್ರಕ್ಕೂ ಅಲಂಕಾರಶಾಸ್ತ್ರಕ್ಕೂ, ತರ್ಕಶಾಸ್ತ್ರಕ್ಕೂ ವ್ಯಾಕರಣಕ್ಕೂ ಇರುವ ಸಂಬಂಧವನ್ನು ಚರ್ಚಿಸಿ.

೫. "ಜ್ಞಾನಾಧಾರವಾದ ಹೇತುವನ್ನು ಅನ್ವೇಷಣಮಾಡುವ ಆನ್ವೀಕ್ಷಿಕೀ ಲೋಕಕ್ಕೆ ಉಪಕಾರಿ." ಇದನ್ನು ಸಮರ್ಥಿಸಿ.

## ೩. ತಾರ್ಕಿಕ ಪದಗಳು (Logical Terms)

ತರ್ಕಬದ್ಧವಾದ ತಿಳಿವು ಪ್ರತಿಜ್ಞಾರೂಪವಾದದ್ದು. "ರಾಮನು ಮನುಷ್ಯ." "ಕೊಡಗಿನಲ್ಲಿ ಮಳೆ ಆಗಿದೆ." "ಭೌತವಸ್ತುಗಳಿಗೆ ಗಾತ್ರವಿದೆ." ಇವು ನಮ್ಮ ಮನಸ್ಸಿನಲ್ಲಿ ಹುಟ್ಟಿದ ಪ್ರತಿಜ್ಞೆಗಳು. ಪ್ರತಿಜ್ಞೆ ಎಂದರೆ ಒಂದು ವಸ್ತು ಯಾವ ರೀತಿಯದು, ಅದು ಹೇಗೆ ಇದೆ ಎಂಬುದನ್ನು ನಿರ್ಧರಿಸುವುದು. ಮನಸ್ಸಿನಲ್ಲಿ ಮೂಡಿದ ಪ್ರತಿಜ್ಞೆಯನ್ನು ಸ್ಪಷ್ಟವಾದ ಭಾಷೆಯಲ್ಲಿ ವಿವರಿಸಿದಾಗ ಅದು ಪ್ರತಿಜ್ಞಾವಾಕ್ಯವಾಗುತ್ತದೆ. ಆಂಗ್ಲಭಾಷೆಯಲ್ಲಿ ಪ್ರತಿಜ್ಞೆಗೆ ಜಜ್‌ಮೆಂಟ್ (Judgement) ಎಂದೂ ಪ್ರತಿಜ್ಞಾವಾಕ್ಯಕ್ಕೆ ಪ್ರಾಪೋಸಿಷನ್ (Proposition) ಎಂದೂ ಹೆಸರು ಕೊಟ್ಟಿರುತ್ತಾರೆ.

### ೧. ಪ್ರತಿಜ್ಞಾವಾಕ್ಯದ ಭಾಗಗಳು

ಕ್ರಮಬದ್ಧವಾದ ಪ್ರತಿಜ್ಞಾವಾಕ್ಯ ಮೂರು ಭಾಗಗಳಿಂದ ಕೂಡಿದೆ ಎಂದು ಪಾಶ್ಚಾತ್ಯ ತಾರ್ಕಿಕರ ಮತ. ನಾವು ಏನನ್ನು ಕುರಿತು ಹೇಳುತ್ತೇವೆಯೋ ಅದು ಒಂದು ಭಾಗ. ಅದಕ್ಕೆ ವಿಷಯಿ, ಸಬ್ಜೆಕ್ಟ್ (Subject) ಎಂದು ಹೆಸರು. ಭಾರತೀಯ ತಾರ್ಕಿಕರು ವಿಷಯಿತ್ವವನ್ನು "ಪಕ್ಷತಾ" ಎಂದು ಪಾರಿಭಾಷಿಕವಾಗಿ ಕರೆದಿರುತ್ತಾರೆ. ಒಂದು ವಿಷಯವನ್ನು ಕುರಿತು ಅದು ಏನು, ಹೇಗೆ ಎಂದು ಯಾವುದನ್ನು ತಿಳಿಸುತ್ತೇವೆಯೋ ಅದು ವಿಶೇಷಣ, ಪ್ರೆಡಿಕೇಟ್ (Predicate). ಇದು ಪ್ರತಿಜ್ಞಾವಾಕ್ಯದ ಎರಡನೆಯ ಭಾಗ. ವಿಷಯಿಯನ್ನೂ ವಿಶೇಷಣವನ್ನೂ ಸೇರಿಸುವ ಕೊಂಡಿ ಅದರ ಮೂರನೆಯ ಭಾಗ. ಇದಕ್ಕೆ ಇಂಗ್ಲಿಷ್ ಭಾಷೆಯಲ್ಲಿ ಕಾಪ್ಯುಲಾ (Copula) ಎಂದು ಹೆಸರು. ಕಾಪ್ಯುಲಾ ಎಂದರೆ ಸೇರಿಸುವ ಕೊಂಡಿ ಎಂದು ಪದಶಃ ಅರ್ಥ. "ರಾಮನು ಮನುಷ್ಯನು ಆಗಿರುತ್ತಾನೆ." ಎಂಬ ಪ್ರತಿಜ್ಞಾವಾಕ್ಯದಲ್ಲಿ, ರಾಮನು ವಿಷಯಿ, ಮನುಷ್ಯತ್ವ ವಿಶೇಷಣ. ಆಗಿದ್ದಾನೆ ಎಂಬ ವಿಧಿರೂಪ (Affirmation) ರಾಮನನ್ನೂ ಮನುಷ್ಯತ್ವವನ್ನೂ ಸೇರಿಸುವ ಕೊಂಡಿ. ಕಾಪ್ಯುಲಾ ಇದೆ, ಇರುತ್ತದೆ, ಆಗಿದೆ, ಮುಂತಾದ ಕ್ರಿಯಾಪದ ರೂಪದಲ್ಲಿರುತ್ತದೆ. ಪ್ರತಿಜ್ಞಾವಾಕ್ಯ ತಿಳಿಸುವ ಕ್ರಿಯೆ ಹಿಂದೆ ನಡೆದದ್ದಾಗಬಹುದು, ಅಥವ ಮುಂದೆ ನಡೆಯತಕ್ಕದ್ದಾಗಬಹುದು, ಅಥವಾ ಈಗ ನಡೆಯುತ್ತಿರುವುದಾಗಬಹುದು. "ಬುದ್ಧನು ಕ್ರಿ.ಪೂ. ಐದನೆಯ ಶತಮಾನದಲ್ಲಿದ್ದನು" ಎಂಬ ಪ್ರತಿಜ್ಞಾವಾಕ್ಯದಲ್ಲಿ ತಿಳಿಸುವುದು

ಹಿಂದೆ ಇದ್ದ ಸಂಗತಿ. "ನಾಳೆ ಮಳೆ ಬರುತ್ತದೆ" ಎಂಬ ಪ್ರತಿಜ್ಞಾವಾಕ್ಯದಲ್ಲಿ ತಿಳಿಸುವುದು ಮುಂದೆ ನಡೆಯುವ ಸಂಗತಿ. "ಮಳೆ ಬೀಳುತ್ತಿದೆ" ಎಂಬ ಪ್ರತಿಜ್ಞಾವಾಕ್ಯದಲ್ಲಿ ತಿಳಿಸುವುದು ಈಗ ನಡೆಯುತ್ತಿರುವ ಸಂಗತಿ. ಹೀಗೆ ಪ್ರತಿಜ್ಞಾವಾಕ್ಯದಲ್ಲಿ ಸೂಚಿಸಿರುವ ಕಾಲ ಭೂತ, ಭವಿಷ್ಯತ್ ಅಥವಾ ವರ್ತಮಾನ ಕಾಲವಾದರೂ ಪ್ರತಿಜ್ಞಾರೂಪ ಮಾತ್ರ ಸದಾ ವರ್ತಮಾನ ಕಾಲವನ್ನೇ ಸೂಚಿಸಬೇಕೆಂದು ಪಾಶ್ಚಾತ್ಯ ತಾರ್ಕಿಕರು ವಿಧಾಯಕ ಮಾಡಿರುತ್ತಾರೆ. Buddha was living in the 5th century B.C. ಎಂಬುದರ ತಾರ್ಕಿಕ ರೂಪ Buddha *is* a man who lived in the 5th century B.C. "ಬುದ್ಧನು ಐದನೆಯ ಶತಮಾನದಲ್ಲಿದ್ದ ಮನುಷ್ಯನು ಆಗಿದ್ದಾನೆ" ಎಂದು ಇರಬೇಕು. ಈ ಭಾಷಾರೂಪ ನಮಗೆ ಕೃತಕವಾಗಿ ಅಥವ ಅವಲಕ್ಷಣವಾಗಿ ಕಾಣಬಹುದು. ಆದರೆ ಪಾಶ್ಚಾತ್ಯ ತಾರ್ಕಿಕರ ದೃಷ್ಟಿಯಿಂದ ಅದು ಅಗತ್ಯ.* ಅದು ಪ್ರತಿಜ್ಞಾಕ್ರಿಯೆ ಪೂರ್ಣವಾಗಿದೆ ಎಂಬುದನ್ನು ಸೂಚಿಸುವ ವಿಧಿರೂಪ.

ಪ್ರತಿಜ್ಞಾವಾಕ್ಯದ ಭಾಗಗಳಾದ ವಿಷಯಿ ಅಥವ ವಿಶೇಷಣಗಳಿಗೆ ಪ್ರತಿಜ್ಞಾಪದಗಳು, ಟರ್ಮ್ಸ್ (Terms) ಎಂದು ಪಾರಿಭಾಷಿಕವಾದ ಹೆಸರು. ವಿಷಯಿ ವಿಶೇಷಣ ಇವು ವ್ಯಾಕರಣ ಪದಗಳು. ಆದರೆ ಎಲ್ಲ ವ್ಯಾಕರಣ ಪದಗಳೂ ಪ್ರತಿಜ್ಞಾ ಪದಗಳಾಗಲಾರವು. ಸಾಧಾರಣವಾಗಿ ಕ್ರಿಯಾ ವಿಶೇಷಣಗಳು, ಅವ್ಯಯಗಳು ಪ್ರತಿಜ್ಞಾ ಪದಗಳಾಗಲಾರವು; ಏಕೆಂದರೆ ಅವು ವಿಷಯಿಯಾಗಿ ಅಥವ ವಿಶೇಷಣವಾಗಿ ಆಗಲಾರವು. ಆದರೆ ಆ ಪದಗಳನ್ನು ವ್ಯಾಕರಣರೂಪಗಳು ಎಂದು ನಾವು ಭಾವಿಸಿ ಒಂದು ಪ್ರತಿಜ್ಞೆ ಮಾಡಿದಾಗ ಅವು ಪ್ರತಿಜ್ಞಾ ಪದಗಳಾಗಬಹುದು. "Slowly is an adverb." "ನಿಧಾನವಾಗಿ ಎಂಬುದು ಕ್ರಿಯಾವಿಶೇಷಣ" ಎಂಬ ಪ್ರತಿಜ್ಞಾವಾಕ್ಯದಲ್ಲಿ, ನಿಧಾನವಾಗಿ ಎಂಬ ಪದ ವಿಷಯಿ. ಅಂದರೆ ಒಟ್ಟಿನಲ್ಲಿ ಒಂದು ಪದ ಪ್ರತಿಜ್ಞೆಯ ವಿಷಯಿ ಅಥವಾ ವಿಶೇಷಣವಾಗಿ ಉಪಯೋಗವಾದಾಗ ಅದು ಪ್ರತಿಜ್ಞಾ

---

* ಭಾರತೀಯ ತಾರ್ಕಿಕರು ಕಾಪ್ಯುಲಾವನ್ನು ಪ್ರತಿಜ್ಞಾವಾಕ್ಯದ ಒಂದು ಭಾಗವಾಗಿ ಎಣಿಸುವುದಿಲ್ಲ. ವಿಷಯಿ, ವಿಶೇಷಣ ಇವುಗಳನ್ನು ಸೇರಿಸುವ ಕೊಂಡಿಯಾದ ಕಾಪ್ಯುಲಾ— ಈ ಭೇದಗಳನ್ನು ಭಾರತೀಯ ತಾರ್ಕಿಕರು ಮಾಡಿರುವುದಿಲ್ಲ. ಇದು ಭಾರತೀಯ ತರ್ಕದ ಒಂದು ಗುಣ ಎಂದು ಕ್ರೋಚೆ ಎಂಬ ಇಟಲಿಯ ತಾರ್ಕಿಕನು ಹೇಳಿರುತ್ತಾನೆ.

"It (Indian Logic) does not make the verbal distinction of subject copula and predicate. All these are extraneous to logic whose sole object is the constant knowledge considered in itself." *Logic*, p. 385.

ಪದವಾಗುತ್ತದೆ ಎಂದು ಹೇಳಬಹುದು. ಒಂದು ಪದ ಪ್ರತಿಜ್ಞಾವಾಕ್ಯದಲ್ಲಿ ಉಪಯೋಗವಾದ ಹೊರತು ಅದಕ್ಕೆ ತಾರ್ಕಿಕ ಯೋಗ್ಯತೆ (Logical status) ಇರುವುದಿಲ್ಲ.

## ೨. ವಿವಿಧ ಪ್ರತಿಜ್ಞಾಪದಗಳು

**(ಅ) ವಿಶಿಷ್ಟಪದ, ಸಾಮಾನ್ಯಪದ, ಸಾಮೂಹಿಕಪದ**—ಪ್ರತಿಜ್ಞಾ ಪದಗಳನ್ನು ಹಲವು ಬಗೆಯಾಗಿ ವಿಂಗಡಿಸುವುದು ವಾಡಿಕೆಯಾಗಿದೆ. ವೈಶಿಷ್ಟ್ಯವನ್ನು ಸೂಚಿಸುವ ವಿಶಿಷ್ಟಪದ (Singular Name), ಸಾಮಾನ್ಯ ವಸ್ತುವನ್ನು ಸೂಚಿಸುವ ಸಾಮಾನ್ಯಪದ (General Name), ವಸ್ತುಗಳನ್ನು ಸಾಮೂಹಿಕವಾಗಿ ಸೂಚಿಸುವ ಸಾಮೂಹಿಕಪದ (Collective Name) ಎಂಬುದಾಗಿ ಅವುಗಳನ್ನು ವಿಂಗಡಿಸುವುದು ಒಂದು ಬಗೆ. ವಿಶಿಷ್ಟಪದ ವೈಶಿಷ್ಟ್ಯವುಳ್ಳ ಒಂದೇ ವ್ಯಕ್ತಿಯನ್ನು ನಿರ್ದೇಶಿಸುತ್ತದೆ. ರಾಮ, ಕೃಷ್ಣ, ಬೆಂಗಳೂರು, ಮೈಸೂರು, ಇವು ವಿಶಿಷ್ಟ ಪದಗಳಿಗೆ ಉದಾಹರಣೆಗಳು. ಭಾರತದ ಅಧ್ಯಕ್ಷ, ಮೈಸೂರು ರಾಜ್ಯಪಾಲರು ಮುಂತಾದ ಅಧಿಕಾರದ ಅಂಕಿತಗಳೂ (Designations) ವಿಶಿಷ್ಟಪದಗಳು. ಇವು ಬರಿಯ ಅಂಕಿತ ನಾಮಗಳಲ್ಲ. ಇವು ಒಂದೇ ವ್ಯಕ್ತಿಯನ್ನು ನಿರ್ದೇಶಿಸುತ್ತವೆಯಲ್ಲದೆ ಒಂದು ವಿಶಿಷ್ಟವಾದ ಗುಣವನ್ನೂ ಸೂಚಿಸುವುದರಿಂದ ಇವುಗಳನ್ನು ಸಿಗ್ನಿಫಿಕೆಂಟ್ ಸಿಂಗ್ಯುಲರ್ ನೇಮ್ಸ್ (Significant Singular Names), ವಿಶೇಷ ಅರ್ಥ ಸೂಚಕ ಪದಗಳು ಎಂದು ಕರೆದಿರುತ್ತಾರೆ. ಐಸನ್ ಹೊವರ್ ಅಂಕಿತನಾಮ, ಅದು ಒಬ್ಬ ವ್ಯಕ್ತಿಯನ್ನು ಮಾತ್ರ ನಿರ್ದೇಶಿಸುತ್ತದೆ. ಅಮೆರಿಕಾದ ಸಂಯುಕ್ತ ಸಂಸ್ಥಾನಗಳ ಅಧ್ಯಕ್ಷ ಎಂಬ ವಿಶೇಷ ಅರ್ಥಸೂಚಕ ಪದವಾದರೋ ಒಂದು ನಿರ್ದಿಷ್ಟವಾದ ಅಧಿಕಾರ ಪಡೆದಿರುವ ವ್ಯಕ್ತಿಯನ್ನು ಸೂಚಿಸುತ್ತದೆ. ಅಂಕಿತ ನಾಮಕ್ಕೆ ಪ್ರತಿಯಾದುದು ಸಾಮಾನ್ಯ ಸೂಚಕನಾಮ. ಮನುಷ್ಯ ಎಂಬುದು ಒಂದು ವ್ಯಕ್ತಿಯನ್ನು ನಿರ್ದೇಶಿಸುವುದಿಲ್ಲ; ಅದು ಮಾನುಷತ್ವವಿರುವ ಎಲ್ಲ ಜನರನ್ನೂ ಸೂಚಿಸುತ್ತದೆ. ಗಿಡ, ಲೋಹ, ಪಕ್ಷಿ, ಕುರ್ಚಿ ಮುಂತಾದುವು ಸಾಮಾನ್ಯ ನಾಮಗಳಿಗೆ ಉದಾಹರಣೆಗಳು. ಗಿಡ ಎಂಬ ಸಾಮಾನ್ಯ ನಾಮ ಎಲ್ಲಕ್ಕೂ ಅಂದರೆ ಒಂದೊಂದಕ್ಕೂ ಬಿಡಿಬಿಡಿಯಾಗಿ (Distributively) ಅನ್ವಯಿಸುತ್ತದೆ. ಹಾಗೆ ಎಲ್ಲಕ್ಕೂ ಬಿಡಿಬಿಡಿಯಾಗಿ ಅನ್ವಯವಾಗದೆ ಎಲ್ಲಕ್ಕೂ ಸಾಮೂಹಿಕವಾಗಿ ಅಂದರೆ ಒಟ್ಟಾಗಿ (Collectively) ಅನ್ವಯವಾಗುವ ಪದ ಸಾಮೂಹಿಕ ನಾಮ (Collective Name). ಹಿಂದು, ಸೈನ್ಯ ಮುಂತಾದುವು

ಸಾಮೂಹಿಕ ನಾಮಗಳು. 'ಎಲ್ಲ' ಎಂಬ ಪದ ಎರಡು ಅರ್ಥಗಳಲ್ಲಿ ಉಪಯೋಗವಾಗುತ್ತದೆ. ಎಲ್ಲ ಎಂಬುದು ಒಂದು ಜಾತಿಯ ಪ್ರತಿಯೊಂದು ವಸ್ತುವಿಗೂ ಅನ್ವಯವಾದಾಗ ಅದು ಸಾಮಾನ್ಯ ಸೂಚಕವಾಗುವುದು; ಒಂದು ಗುಂಪಿನ ಎಲ್ಲ ವಸ್ತುಗಳಿಗೂ ಒಟ್ಟಾಗಿ ಅನ್ವಯವಾದಾಗ ಅದು ಸಮೂಹಸೂಚಕವಾಗುವುದು. ಎಲ್ಲ ಮನುಷ್ಯರೂ ಮರ್ತ್ಯರು ಎಂಬ ಪ್ರತಿಜ್ಞೆಯಲ್ಲಿ 'ಎಲ್ಲ' ಎಂಬ ಪದ ಪ್ರತಿಯೊಬ್ಬ ಮನುಷ್ಯನಿಗೂ ಅನ್ವಯವಾಗುತ್ತದೆ. ತ್ರಿಕೋನದ ಎಲ್ಲ ಕೋನಗಳೂ ಸೇರಿ ೧೮೦ ಡಿಗ್ರಿಗಳಾಗುತ್ತವೆ ಎಂಬ ಪ್ರತಿಜ್ಞೆಯಲ್ಲಿ 'ಎಲ್ಲ' ಎಂಬುದಕ್ಕೆ ಮೂರು ಕೋನಗಳೂ ಸೇರಿ ಸಾಮೂಹಿಕವಾಗಿ ಎಂದು ಅರ್ಥ.

**(ಆ) ದ್ರವ್ಯ ನಿರ್ದೇಶಕನಾಮ, ಭಾವನಾಮ**—ಪದಗಳನ್ನು ದ್ರವ್ಯ ನಿರ್ದೇಶಕ ನಾಮ (Concrete Name) ಭಾವನಾಮ (Abstract Name), ಎಂಬುದಾಗಿ ಇನ್ನೊಂದು ವಿಧವಾಗಿ ವಿಭಾಗಮಾಡಬಹುದು. ಒಂದು ಪದ ಗುಣವುಳ್ಳ ವಸ್ತುವನ್ನು ಸೂಚಿಸಬಹುದು, ಅಥವ ವಸ್ತುವನ್ನು ಸೂಚಿಸದೆ ಬರಿಯ ಗುಣವನ್ನು ಮಾತ್ರ ಸೂಚಿಸಬಹುದು. ಒಂದು ಅಥವ ಹಲವು ಗುಣಗಳುಳ್ಳ ವಸ್ತುವನ್ನು ಸೂಚಿಸುವ ಪದಕ್ಕೆ ದ್ರವ್ಯ ನಿರ್ದೇಶಕ ಪದ (Concrete Name) ಎಂದು ಹೆಸರು. ಕುದುರೆ ವೇಗವಾಗಿ ಓಡುವ ಒಂದು ಪ್ರಾಣಿಯನ್ನು ನಿರ್ದೇಶಿಸುತ್ತದೆ. ಆದರೆ ವೇಗ ಎಂಬ ಪದ ಯಾವ ದ್ರವ್ಯ ವಸ್ತೂ ನಿರ್ದೇಶಿಸುವುದಿಲ್ಲ, ಅದು ವೇಗತ್ವವನ್ನು ಮಾತ್ರ ಸೂಚಿಸುತ್ತದೆ. ಅದನ್ನು ಭಾವನಾಮ (Abstract Name) ಎಂದು ಕರೆಯಬಹುದು. ದ್ರವ್ಯ ಸೂಚಕಪದ ನಿರ್ದೇಶಿಸುವ ವಸ್ತುವನ್ನು ನಾವು ಇಂದ್ರಿಯಗಳಿಂದ ತಿಳಿಯ ಬಹುದು ಆದರೆ ಭಾವನಾಮ ಸೂಚಿಸುವ ಗುಣ ಇಂದ್ರಿಯಗೋಚರವಲ್ಲ. ಅದು ಬುದ್ಧಿಗೆ ಮಾತ್ರ ಗೋಚರವಾಗುವ ವಿಷಯ. ಕಲ್ಲನ್ನು ನಾವು ನೋಡಬಹುದು, ಕಾಠಿನ್ಯವನ್ನು ನಾವು ನೋಡುವುದಕ್ಕಾಗುವುದಿಲ್ಲ, ಅದು ಬುದ್ಧಿಯಿಂದ ಮಾತ್ರ ತಿಳಿಯಬೇಕು.

**(ಇ) ಅಸ್ತ್ಯರ್ಥಕಪದ, ನೇತ್ಯರ್ಥಕಪದ, ಲೋಪಸೂಚಕಪದ**—ಅಸ್ತ್ಯರ್ಥಕಪದ (Positive Name), ನೇತ್ಯರ್ಥಕಪದ (Negative Name) ಲೋಪಸೂಚಕಪದ (Privative Name)—ಇವು ಇನ್ನೊಂದು ಬಗೆಯ ವಿಂಗಡನೆಗೆ ಸೇರಿದ ಪದಗಳು. ಒಂದು ಗುಣ ಇರುವುದನ್ನು ಸೂಚಿಸುವ ಪದಕ್ಕೆ ಅಸ್ತ್ಯರ್ಥಕಪದ ಎಂದು ಹೆಸರು. 'ಬೆಳಕು' ಎಂಬ ಪದ ಅಸ್ತ್ಯರ್ಥಕಪದ.

ಕತ್ತಲೆ ನೇತ್ಯರ್ಥಕಪದ. ಅದು ಬೆಳಕಿನ ಅಭಾವವನ್ನು ಸೂಚಿಸುತ್ತದೆ. ಸಾಧಾರಣವಾಗಿ ಒಂದು ಗುಣವನ್ನು ಪಡೆದಿರುವ ವಸ್ತುವಿನಲ್ಲಿ ಆ ಗುಣವಿಲ್ಲದಿದ್ದಾಗ ಅಂಥ ಗುಣಾಭಾವವನ್ನು ಸೂಚಿಸುವ ಪದಕ್ಕೆ ಲೋಪಸೂಚಕ ಪದ. ಅಂಧತೆ ಒಂದು ಊನ, ಲೋಪ. ಆದ್ದರಿಂದ ಆ ಪದ ಲೋಪ ಸೂಚಕ ಪದ.

ಅಸ್ತ್ಯರ್ಥಕ ಮತ್ತು ನೇತ್ಯರ್ಥಕ ಪದಗಳು ಒಂದಕ್ಕೊಂದು ವಿರುದ್ಧವಾದ ಪದಗಳು. ಆದರೆ ವಿರೋಧ ಒಂದೇ ಬಗೆಯಾಗಿರಬೇಕಾಗಿಲ್ಲ. ಬಿಳಿಯದು, ಬಿಳಿಯದಲ್ಲದ್ದು—ಈ ಎರಡು ಪದಗಳು ವಿರುದ್ಧವಾದುವು. ಬಿಳಿಯದು ಕರಿಯದು ಎಂಬ ಪದಗಳೂ ವಿರುದ್ಧ ಪದಗಳು. ಆದರೆ ಇವೆರಡಕ್ಕಿರುವ ವಿರೋಧದ ಬಗೆ ಬೇರೆ. ಬಿಳುಪಲ್ಲದ್ದೆಲ್ಲ ಕಪ್ಪಾಗಿರಬೇಕಾಗಿಲ್ಲ. ಬಿಳುಪಲ್ಲದ್ದು ಬೂದುಬಣ್ಣವಾಗಿರಬಹುದು. ಆದರೆ ಬಿಳುಪಾದದ್ದು ಬಿಳುಪಲ್ಲದ್ದು—ಇವು ಅತ್ಯಂತ ವಿರುದ್ಧವಾದುವು. ಇವುಗಳ ಮಧ್ಯೆ ಬೇರೊಂದು ಇರುವುದಿಲ್ಲ. ಬಿಳುಪಲ್ಲದ್ದರಲ್ಲಿ ಬಿಳುಪನ್ನು ಬಿಟ್ಟು ಬೇರೆ ಎಲ್ಲವೂ ಸೇರಿದೆ, ಆದರೆ ಕಪ್ಪು ಎಂಬ ಪದದಲ್ಲಿ ಬಿಳುಪಲ್ಲದ್ದೆಲ್ಲ ಸೇರಿಲ್ಲ. ಕಪ್ಪು ಎಂಬ ಪದದ ನಿರ್ದೇಶನ ಕಿರಿದಾದುದು. ಬಿಳುಪಲ್ಲದ್ದು ಎಂಬ ಪದದ ನಿರ್ದೇಶನ ಕಪ್ಪು ಎಂಬ ಪದದ ನಿರ್ದೇಶನಕ್ಕಿಂತ ವಿಸ್ತಾರವಾದದ್ದು. ಇವುಗಳಿಗಿರುವ ವಿರೋಧವನ್ನು ಚಿತ್ರರೂಪವಾಗಿ ಈ ರೀತಿ ತೋರಿಸಬಹುದು. ಈ ಚಿತ್ರದಲ್ಲಿ ಕಾಣುವಂತೆ ಬಿಳುಪಲ್ಲದ್ದು ದೊಡ್ಡ ಚಕ್ರ, ಕಪ್ಪು ಆ ಚಕ್ರದಲ್ಲಡಗಿರುವ ಸಣ್ಣ ಚಕ್ರ. ಬಿಳುಪು ಬಿಳುಪಲ್ಲದ್ದು ಎಂಬ



ವಿರುದ್ಧ ಪದಗಳನ್ನು ಕಾಂಟ್ರಡಿಕ್ಟರೀಸ್ (Contradictories) ಎಂದೂ, ಕಪ್ಪು ಬಿಳುಪು ಎಂಬ ಪದಗಳನ್ನು ಕಾಂಟ್ರರೀಸ್ (Contraries) ಎಂದೂ ಪಾಶ್ಚಾತ್ಯ ತಾತ್ವಿಕರು ಕರೆದಿರುತ್ತಾರೆ. ಕೆಲವು ಪದಗಳಿಗೆ 'ಅ' ಅಥವ 'ನಿರ್' ಪ್ರತ್ಯಯಗಳನ್ನು ಸೇರಿಸಿದಾಗ ಅವು ಅತ್ಯಂತ ವಿಶಾಲ ವಿರೋಧಿಗಳಾಗುತ್ತವೆ, ಕಾಂಟ್ರಡಿಕ್ಟರಿಗಳಾಗುತ್ತವೆ. ವಿಧೇಯ ಎಂಬ ಪದಕ್ಕೆ 'ಅ' ಪ್ರತ್ಯಯ ಸೇರಿಸಿದಾಗ ಅದರ ಕಾಂಟ್ರಡಿಕ್ಟರಿಯಾದ ಅವಿಧೇಯ ಎಂಬ ಪದ ಹುಟ್ಟುತ್ತದೆ. ಆಯಾಸ ಎಂಬ ಪದಕ್ಕೆ 'ನಿರ್' ಪ್ರತ್ಯಯವನ್ನು ಸೇರಿಸಿದಾಗ ನಿರಾಯಾಸ ಎಂಬ ಅದರ ಕಾಂಟ್ರಡಿಕ್ಟರಿ ರೂಪ ಹುಟ್ಟುತ್ತದೆ. ಕಾಂಟ್ರಡಿಕ್ಟರಿ ಪದಗಳು ಒಂದು ವಿಷಯಕ್ಕೆ ಸಂಬಂಧಪಟ್ಟ ಸರ್ವಸ್ವವನ್ನೂ ತಮ್ಮಲ್ಲಿ ಅಡಗಿಸಿಕೊಳ್ಳುತ್ತವೆ. ಬಿಳುಪು, ಬಿಳುಪಲ್ಲದ್ದು ಎಂಬ ಕಾಂಟ್ರಡಿಕ್ಟರಿ ಪದಗಳು ಬಣ್ಣಕ್ಕೆ ಸಂಬಂಧಪಟ್ಟ ಎಲ್ಲವನ್ನೂ ಪೂರ್ಣವಾಗಿ ಅಡಗಿಸಿಕೊಳ್ಳುತ್ತವೆ.

**(ಈ) ಸಾಪೇಕ್ಷಪದ (Relative Term) ನಿರಪೇಕ್ಷಪದ (Absolute Term)**—ಕೆಲವು ಪ್ರತಿಜ್ಞಾಪದಗಳು ಬೇರೊಂದು ಪದವನ್ನು ಅಪೇಕ್ಷಿಸದೆ ಪೂರ್ಣವಾದ ಅರ್ಥಕೊಡುತ್ತವೆ. ಇತರ ಪದಗಳು ಬೇರೊಂದು ಪದದ ಸಹಾಯವನ್ನು ಪಡೆಯದೆ ಅರ್ಥವನ್ನು ವ್ಯಕ್ತಪಡಿಸಲಾರವು. ತಂದೆ ಎಂಬ ಪದ ಮಗ ಎಂಬ ಪದಕ್ಕೆ ಸಾಪೇಕ್ಷವಾಗಿದೆ. ಮಗನಿಲ್ಲದವನು ತಂದೆಯಾಗಲಾರ, ತಂದೆ ಇಲ್ಲದೆ ಮಗನಿಲ್ಲ. ಹಾಗೆಯೇ ಅಣ್ಣತಮ್ಮ ಅಕ್ಕತಂಗಿ ಸಾಪೇಕ್ಷಪದಗಳು. ಕಲ್ಲು, ಗಿಡ, ಮನುಷ್ಯ ಮುಂತಾದ ಪದಗಳು ನಿರಪೇಕ್ಷವಾದ ಪದಗಳು. ಇವುಗಳನ್ನು ಅರ್ಥಮಾಡಿಕೊಳ್ಳಲು ನಾವು ಬೇರೊಂದು ಪದದ ಕಡೆ ನೋಡಬೇಕಾಗಿಲ್ಲ. ಆಂಗ್ಲಭಾಷೆಯಲ್ಲಿ ಸಾಪೇಕ್ಷಪದಗಳಿಗೆ ರೆಲೆಟಿವ್ ಟರ್ಮ್ಸ್ ಎಂದೂ ನಿರಪೇಕ್ಷಪದಗಳಿಗೆ ಆ್ಯಬ್ಸಲ್ಯೂಟ್ ಟರ್ಮ್ಸ್ ಎಂದೂ ಹೆಸರು.

**(ಉ) ಕಾನೊಟೇಟಿವ್ ಮತ್ತು ನಾನ್-ಕಾನೊಟೇಟಿವ್ ಪದಗಳು (Connotative and Non-connotative Terms)**—ಒಂದು ಪದ ಎರಡು ಕೆಲಸಗಳನ್ನು ಮಾಡಬಹುದು. ಅದು ಒಂದು ವಿಷಯವನ್ನು ನಿರ್ದೇಶಿಸಬಹುದು. ಅದರ ಜೊತೆಗೆ ಅದರ ಮುಖ್ಯ ಗುಣವನ್ನು ಸೂಚಿಸಬಹುದು. ಪದದ ವಿಷಯನಿರ್ದೇಶನ ವ್ಯಾಪಾರಕ್ಕೆ ಡಿನೊಟೇಷನ್ (Denotation) ಎಂದು ಹೆಸರು. ವಿಷಯವನ್ನು ನಿರ್ದೇಶಿಸುವುದರ ಜೊತೆಗೆ ವಸ್ತುವಿನ ಮುಖ್ಯ ಗುಣವನ್ನು ಸೂಚಿಸುವುದಕ್ಕೆ ಕಾನೊಟೇಷನ್ (Connotation) ಎಂದು ಹೆಸರು.

ಯಾವ ಗುಣವಿಶೇಷ (Definition) ಪಡೆದಿರುವುದರಿಂದ ಒಂದು ವಸ್ತುವಿಗೆ ಒಂದು ಹೆಸರನ್ನು ಕೊಟ್ಟಿರುತ್ತೇವೆಯೋ ಆ ಗುಣವಿಶೇಷ ಆ ಪದದ ಲಕ್ಷಣ. ಮನುಷ್ಯನಿಗೆ ಬುದ್ಧಿಶಕ್ತಿ ಇರುವುದರಿಂದ ಆ ಹೆಸರು ಬಂದಿದೆ. ಮನುಷ್ಯ ಎಂದರೆ ಬುದ್ಧಿಯುಳ್ಳ ಪ್ರಾಣಿ. ಬುದ್ಧಿ ಪಡೆದಿರುವವನು ಎಂಬುದು ಮನುಷ್ಯ ಪದದ ಲಕ್ಷಣಾರ್ಥಃ. ಎಲ್ಲ ಪದಗಳೂ ಲಕ್ಷಣಾರ್ಥಸೂಚಕವಲ್ಲ. ಅಂಕಿತನಾಮ ಗಳಿಗೆ ಲಕ್ಷಣಾರ್ಥವಿಲ್ಲ. ಸುಂದರಮ್ಮ ಎಂಬ ಅಂಕಿತನಾಮ ಒಂದು ವ್ಯಕ್ತಿ ಯನ್ನು ಮಾತ್ರ ನಿರ್ದೇಶಿಸುತ್ತದೆ, ಅದು ಯಾವುದೊಂದು ಲಕ್ಷಣಾರ್ಥವನ್ನೂ ಸೂಚಿಸುವುದಿಲ್ಲ. ಸುಂದರಮ್ಮ ಎಂಬ ಹೆಸರಿನ ವ್ಯಕ್ತಿ ಸುಂದರವಾದವಳು ಎಂದು ನಾವು ಬಗೆಯುವುದಿಲ್ಲ. ಏಕೆಂದರೆ ಆಕೆಯ ಲಕ್ಷಣ ನೋಡಿ ಆಕೆಗೆ ಆ ಹೆಸರು ಇಡಲಿಲ್ಲ. ಸುಂದರಮ್ಮ ಎಂಬ ಹೆಸರಿನವರು ಕುರೂಪಿಗಳಾಗಿರಬಹುದು. ಅಂಕಿತನಾಮಗಳು ಏರ್ಪಟ್ಟಿರುವುದು ಕೇವಲ ನಿರ್ದೇಶನಕ್ಕಾಗಿಯೇ ಹೊರತು ಲಕ್ಷಣಾರ್ಥಸೂಚನೆಗಾಗಿ ಅಲ್ಲ. ಸಮಾಜದಲ್ಲಿ ಒಬ್ಬ ವ್ಯಕ್ತಿ ಪ್ರಸಿದ್ಧನಾಗಿ ಜನರಿಗೆ ಅವನ ಹೆಸರು ಒಂದು ವಿಶಿಷ್ಟವಾದ ಗುಣವನ್ನು ಸೂಚಿಸಬಹುದು. ಹಿಂದೆ ಗೋಪಾಲಯ್ಯ ಎಂಬುವನು ಜನರಿಂದ ಹಣ ಪಡೆದು ಅವರಿಗೆ ಮೋಸ ಮಾಡಿ ಹೆಸರುವಾಸಿಯಾಗಬಹುದು. ಆಗ ಗೋಪಾಲರಾಯ್ಯ ಎಂಬ ಹೆಸರು ಕೇಳಿದಾಗ ಜನರ ಮನಸ್ಸಿನಲ್ಲಿ ದಗಾಕೋರ ಎಂಬ ಸೂಚನೆ ಬರುತ್ತಿತ್ತು. ಆದರೆ ಈಗ ಆ ಹೆಸರು ಆ ಅರ್ಥವನ್ನು ಸೂಚಿಸುವುದಿಲ್ಲ. ಒಮ್ಮೊಮ್ಮೆ ಒಂದೊಂದು ಅಂಕಿತನಾಮ ಯಾವುದೋ ಗುಣಸೂಚಕವಾಗಬಹುದಾದರೂ ಆ ಗುಣ ಸೂಚನೆ ಆಗಂತುಕವಾದುದು, ವೈಯಕ್ತಿಕವಾದುದು. ಅದು ಒಂದೊಂದು ಕಾಲದಲ್ಲಿ ಒಬ್ಬೊಬ್ಬರಿಗೆ ಒಂದೊಂದು ಅರ್ಥ ಸೂಚಿಸಬಹುದು. ಎಲ್ಲರಿಗೂ, ಎಲ್ಲ ಕಾಲದಲ್ಲೂ ಒಂದೇ ಅರ್ಥ ಸೂಚಿಸುವುದಿಲ್ಲ; ಅಂದರೆ ಅದಕ್ಕೆ ಲಕ್ಷಣಾರ್ಥವಿಲ್ಲ. ಆದರೆ ಮನುಷ್ಯ ಎಂಬ ಸಾಮಾನ್ಯ ನಾಮಕ್ಕೆ ಲಕ್ಷಣಾರ್ಥ ವಿದೆ. ಮನುಷ್ಯ ಎಂದರೆ ಬುದ್ಧಿಯುಳ್ಳ ಪ್ರಾಣಿ ಎಂಬ ಅರ್ಥ ಎಲ್ಲರಿಗೂ, ಎಲ್ಲ ಕಾಲದಲ್ಲೂ ಬೋಧೆಯಾಗುತ್ತದೆ. ಅಂಕಿತನಾಮಗಳು ವ್ಯಕ್ತಿಯನ್ನು ಮಾತ್ರ ನಿರ್ದೇಶಿಸುವ ಪದಗಳಾದರೆ, ಭಾವನಾಮಗಳು ಬರಿಯ ಗುಣವನ್ನು ಮಾತ್ರ ಸೂಚಿಸುವ ಪದಗಳು. ಜಡತ್ವ ಎಂಬುದು ಗುಣವನ್ನು ಸೂಚಿಸುತ್ತದೆಯೇ ಹೊರತು ಅದಕ್ಕೆ ಯಾವ ಒಂದು ವಸ್ತುವನ್ನೂ ನಿರ್ದೇಶಿಸುವ ಶಕ್ತಿ ಇಲ್ಲ. ನಿರ್ದೇಶನ ಮತ್ತು ಲಕ್ಷಣಾರ್ಥ ಸೂಚನೆ ಎರಡನ್ನೂ ಹೊಂದಿದ ಪದಗಳನ್ನು ಜೆ. ಎಸ್. ಮಿಲ್ ಎಂಬ ಆಂಗ್ಲ ತಾರ್ಕಿಕನು ಕಾನೋಟೇಟಿವ್ ಟರ್ಮ್ಸ್ (Connotative Terms) ಎಂದೂ ವಸ್ತುವನ್ನು ಮಾತ್ರ ನಿರ್ದೇಶಿಸುವ,

ಗುಣವನ್ನು ಮಾತ್ರ ಸೂಚಿಸುವ ಪದಗಳನ್ನು ನಾನ್-ಕಾನೋಟೇಟಿವ್ ಟರ್ಮ್ಸ್ (Non-connotative Terms) ಎಂದೂ ಕರೆದಿರುತ್ತಾನೆ.

ಈ ತಾರ್ಕಿಕನು ಪದದ ನಿರ್ದೇಶನ ಶಕ್ತಿಗೂ ಲಕ್ಷಣ ಸೂಚಕ ಶಕ್ತಿಗೂ ಒಂದು ವಿಧವಾದ ವಿಪರ್ಯಯ ಸಂಬಂಧವಿದೆ ಎಂದು ಒಂದು ತರ್ಕಸೂತ್ರ ವನ್ನು ಮಂಡಿಸಿರುತ್ತಾನೆ. ಒಂದು ಪದದ ನಿರ್ದೇಶನ ಶಕ್ತಿ ಒಂದು ಪ್ರಮಾಣ ದಲ್ಲಿ ಕಡಮೆಯಾದಾಗ ಅದರ ಲಕ್ಷಣಾರ್ಥಸೂಚಕ ಶಕ್ತಿ ಅದೇ ಪ್ರಮಾಣದಲ್ಲಿ ಹೆಚ್ಚುತ್ತದೆ. ಅಥವಾ ಅದರ ಲಕ್ಷಣಾರ್ಥಸೂಚಕ ಶಕ್ತಿ ಒಂದು ಪ್ರಮಾಣ ದಲ್ಲಿ ಹೆಚ್ಚಿದಾಗ ಅದರ ನಿರ್ದೇಶನ ಶಕ್ತಿ ಅದೇ ಪ್ರಮಾಣದಲ್ಲಿ ಕಡಮೆ ಯಾಗುತ್ತದೆ. ಇದು ಮಿಲ್ ಮಂಡಿಸಿರುವ ಸೂತ್ರ. ಉದಾಹರಣೆಗೆ ಪ್ರಾಣಿ ಎಂಬ ಒಂದು ಪದವನ್ನು ತೆಗೆದುಕೊಳ್ಳೋಣ. ಪ್ರಾಣಿ ಎಂಬ ಪದದ ನಿರ್ದೇಶನ ವಿಸ್ತಾರವಾದುದು; ಆದರೆ ಅದರ ಅರ್ಥಸೂಚನೆ ಕಿರಿದಾದುದು; ಜೀವ ವುಳ್ಳ ವಸ್ತು ಎಂಬ ಅರ್ಥವನ್ನು ಮಾತ್ರ ಸೂಚಿಸುತ್ತದೆ. ಪ್ರಾಣಿ ಎಂಬ ಪದಕ್ಕೆ ಬುದ್ಧಿಯುಳ್ಳ ಎಂಬ ವಿಶೇಷಣವನ್ನು ಸೇರಿಸಿದಾಗ ಅದರ ಅರ್ಥ ಸೂಚನೆ ಹಿಗ್ಗುತ್ತದೆ. ಆದರೆ ಅದರ ನಿರ್ದೇಶನ ಶಕ್ತಿ ಕುಗ್ಗುತ್ತದೆ. ಪ್ರಾಣಿ ಎಂಬ ಪದ ನಿರ್ದೇಶಿಸಿದಷ್ಟು ವಸ್ತುಗಳನ್ನು ಬುದ್ಧಿಯುಳ್ಳ ಪ್ರಾಣಿ ಎಂಬುದು ನಿರ್ದೇಶಿಸುವುದಿಲ್ಲ. ಪ್ರಾಣಿಗಳ ಸಂಖ್ಯಾಪ್ರಮಾಣ ಬಹು ದೊಡ್ಡದು. ಆದರೆ ಬುದ್ಧಿಯುಳ್ಳ ಪ್ರಾಣಿಗಳ ಸಂಖ್ಯೆ ಪ್ರಾಣಿಗಳ ಸಂಖ್ಯೆಗಿಂತ ತುಂಬ ಕಡಿಮೆ. ತಾರ್ಕಿಕ (ತರ್ಕಶಾಸ್ತ್ರದಲ್ಲಿ ಅಭಿರುಚಿ ಇರುವ ಮನುಷ್ಯ) ಎಂಬ ಪದಕ್ಕೆ ವಿಶೇಷವಾದ ಅರ್ಥ ಸೂಚಕ ಶಕ್ತಿ ಇದೆ. ಆದರೆ ಅದು ನಿರ್ದೇಶಿಸುವ ಜನರ ಸಂಖ್ಯೆ ತುಂಬ ಚಿಕ್ಕದು. ಮನುಷ್ಯ ಎಂಬ ಪದದ ಅರ್ಥಸೂಚಕ ಶಕ್ತಿ ತಾರ್ಕಿಕ ಎಂಬ ಪದದ ಅರ್ಥಸೂಚಕ ಶಕ್ತಿಗಿಂತ ಕಡಮೆಯಾದುದು. ಆದರೆ ಅದರ ನಿರ್ದೇಶನ ಶಕ್ತಿ ತಾರ್ಕಿಕ ಎಂಬ ಪದದ ನಿರ್ದೇಶನ ಶಕ್ತಿಗಿಂತ ಹಿರಿದಾದುದು.

ಅರ್ಥಸೂಚನೆ ಹೆಚ್ಚಿದಂತೆಲ್ಲ ನಿರ್ದೇಶನ ಶಕ್ತಿ ಕುಗ್ಗುವುದು, ನಿರ್ದೇಶನ ಶಕ್ತಿ ಹೆಚ್ಚಿದಂತೆಲ್ಲ ಅರ್ಥಸೂಚಕ ಶಕ್ತಿ ಕುಗ್ಗುವುದು ಎಂಬ ಸೂತ್ರ ಸ್ವಲ್ಪ ಮಟ್ಟಿಗೆ ವಾಸ್ತವವಾದದ್ದು. ಆದರೆ ಕೆಲವು ಸಂದರ್ಭಗಳಲ್ಲಿ ನಿರ್ದೇಶನ ಶಕ್ತಿ ಮತ್ತು ಅರ್ಥಸೂಚಕ ಶಕ್ತಿ ಒಂದು ನಿರ್ದಿಷ್ಟ ಪ್ರಮಾಣದಲ್ಲಿ ಹೆಚ್ಚು ಕಡಮೆಯಾಗುವುದಿಲ್ಲ. ಕೆಲವು ಸಂದರ್ಭಗಳಲ್ಲಿ ಪದದ ಅರ್ಥ ಅಲ್ಪಪ್ರಮಾಣ ದಲ್ಲಿ ಹೆಚ್ಚಬಹುದು ಆದರೆ ನಿರ್ದೇಶನ ತುಂಬ ಕುಗ್ಗಬಹುದು. ಕೆಲವು ಪದಗಳ ನಿರ್ದೇಶನ ಹೆಚ್ಚಿದರೂ ಅವುಗಳ ಅರ್ಥಸೂಚನೆ ಕುಗ್ಗದೆ ಇರಬಹುದು.

ಈ ನೂರು ವರ್ಷಗಳಲ್ಲಿ ಪ್ರಪಂಚದ ಜನಸಂಖ್ಯೆ ದ್ವಿಗುಣವಾಗಿದೆ. ಆದರೆ ಮನುಷ್ಯ ಎಂಬ ಪದದ ಅರ್ಥ ಕಡಮೆಯಾಗಿಲ್ಲ. ಅದರ ಬದಲು ಮಾನವ ಶಾಸ್ತ್ರದಲ್ಲುಂಟಾಗಿರುವ ಬೆಳವಣಿಗೆಯ ಪ್ರಭಾವದಿಂದ ಅದರ ಅರ್ಥ ಹೆಚ್ಚಿದೆ. ಅಲ್ಲದೆ ಅದರ ಅರ್ಥಸೂಚಕತೆಯನ್ನು ಅಳೆಯುವುದು ಸಾಧ್ಯವೆ? ಅದರ ಪ್ರಮಾಣ ಹೆಚ್ಚು ಕಡಮೆಯಾಯಿತೆಂದು ನಿರ್ಧರಿಸುವುದು ಹೇಗೆ? ಪದಗಳ ನಿರ್ದೇಶನ ಶಕ್ತಿಗೂ ಅವುಗಳ ಅರ್ಥಸೂಚಕ ಶಕ್ತಿಗೂ ಗಣಿತ ರೀತಿಯಲ್ಲಿ ವಿಪರ್ಯಯ ಸಂಬಂಧವೇರ್ಪಡಿಸುವುದಕ್ಕಾಗುವುದಿಲ್ಲ.

ಪದಗಳನ್ನು ಪ್ರತಿಜ್ಞಾವಾಕ್ಯದಲ್ಲಿ ಉಪಯೋಗಿಸದಿದ್ದಾಗ ಕೆಲವು ಪದ ಗಳಿಗೆ ಅರ್ಥಸೂಚಕ ಶಕ್ತಿ ಇಲ್ಲವೆಂದು ಹೇಳಬಹುದೇ ಹೊರತು ಅವು ಪ್ರತಿಜ್ಞಾ ವಾಕ್ಯದಲ್ಲಿ ವಿಷಯಿ ವಿಶೇಷಣಗಳಾಗಿ ಉಪಯೋಗವಾದಾಗ ಅವಕ್ಕೆ ಅರ್ಥಸೂಚಕ ಶಕ್ತಿ ಇಲ್ಲವೆಂದು ಹೇಳಲಾಗುವುದಿಲ್ಲ. ಪದಗಳನ್ನು ಪ್ರತಿಜ್ಞಾ ವಾಕ್ಯದಲ್ಲಿ ಉಪಯೋಗಿಸಿದಾಗ ಅವು ನಿರ್ದೇಶನ ಮತ್ತು ಅರ್ಥಸೂಚನೆ ಎರಡನ್ನೂ ಪಡೆದಿರುತ್ತವೆ. ಗುಣವಿಲ್ಲದ ವಸ್ತು, ವಸ್ತುವಿಗೆ ಸೇರದ ಗುಣ ಇವು ಯೋಚಿಸುವುದಕ್ಕಾಗದ ವಿಷಯಗಳು ; ಅವು ಯೋಚನೆಗೆ ಬಾಹಿರವಾದುವು. ನಾವು ಯೋಚಿಸಿದಾಗಲೆಲ್ಲ ಒಂದು ಗುಣ ಒಂದು ವಿಷಯಿಯನ್ನು ನಿರ್ದೇಶಿಸುತ್ತದೆ, ಒಂದು ವಿಷಯಿ ಒಂದು ಗುಣವನ್ನು ತಿಳಿಸುತ್ತದೆ. ಪ್ರತಿಜ್ಞಾರೂಪವಾದ ನಮ್ಮ ಪ್ರತಿಯೊಂದು ಯೋಚನೆಯೂ ವಿಷಯಿ ವಿಶೇಷಣ ಸಂಬಂಧ ರೂಪವುಳ್ಳದ್ದು.

**(ಊ) ಪಂಚವಿಧ ಕಲ್ಪನೆಗಳು**—ಪ್ರತಿಜ್ಞಾವಾಕ್ಯವು ವಿಷಯಿ ವಿಶೇಷಣ ಸಂಬಂಧವುಳ್ಳದ್ದು. ಒಂದು ವಿಷಯ ಏನು, ಹೇಗೆ, ಯಾವ ಬಗೆಯದು ಎಂಬ ಪ್ರಶ್ನೆಯಿಂದ ನಮ್ಮ ಯೋಚನೆಗಳು ಪ್ರಾರಂಭವಾಗುತ್ತವೆ. ನಮ್ಮ ಮನಸ್ಸಿನ ಮುಂದೆ ಯಾವುದಾದರೂ ಒಂದು ವಿಷಯ ನಿಂತಾಗ ನಾವು ಅದೇನು, ಅದು ಎಂಥಾದ್ದು ಎಂದು ಕೇಳುವುದು ಸ್ವಾಭಾವಿಕ. ಒಂದು ವಿಷಯ ಎಂಥಾದ್ದು ಎಂದು ತಿಳಿಯಲು ಪ್ರಯತ್ನಿಸಿದಾಗ ನಾವು ವಿಷಯಿಯ ಸ್ವಭಾವ ವನ್ನು ತಿಳಿಸುವ ವಿಶೇಷಣವನ್ನು ಹುಡುಕುತ್ತೇವೆ. ಒಂದು ವಿಷಯ ಒಂದು ಮಗುವಿಗೆ ಗೋಚರವಾದಾಗ ಅದು "ಇದು ಏನು" ಎಂದು ಕೇಳುತ್ತದೆ. ಅದಕ್ಕೆ ನಾವು "ಇದು ಮರ" ಎಂದು ಉತ್ತರ ಕೊಡಬಹುದು. ಅಲ್ಲಿಗೇ ಮಗುವಿನ ಕುತೂಹಲ ನಿಲ್ಲುವುದಿಲ್ಲ. ಇದು ಎಂಥ ಮರ ಎಂದು ಕೇಳುತ್ತದೆ. ಮಗುವು ಅದಕ್ಕೆ ಅನ್ವಯವಾಗಬಹುದಾದ ಇತರ ವಿಶೇಷಣಗಳನ್ನು

ತಿಳಿಯಬಯಸುತ್ತದೆ. ನಾವು ಮಗುವಿನ ಪ್ರಶ್ನೆಗೆ 'ಇದು ಮಾವಿನ ಮರ' ಎಂದು ಉತ್ತರ ಕೊಟ್ಟಾಗ ಆ ವಸ್ತುವಿನ ವಿಚಾರವಾಗಿ ಅದರ ತಿಳಿವಳಿಕೆ ಹೆಚ್ಚುತ್ತದೆ. ಒಂದು ವಿಷಯದ ವಿಚಾರವಾಗಿ ಹೆಚ್ಚು ಹೆಚ್ಚು ವಿಶೇಷಣ ಗಳನ್ನು ತಿಳಿದಂತೆಲ್ಲ ನಮ್ಮ ಜ್ಞಾನ ಬೆಳೆಯುತ್ತದೆ.

ಹೀಗೆ ನಾವು ತಿಳಿಯಬಯಸುವ ವಿಶೇಷಣಗಳು ಎಷ್ಟು ಬಗೆಯವಾಗಿರ ಬಹುದು ಎಂದು ವಿಚಾರಮಾಡಿ ಪಾಶ್ಚಾತ್ಯ ತಾತ್ವಿಕರು ಅವು ಐದು ವಿಧವಾಗಿರ ಬಹುದೆಂದು ನಿರ್ಧರಿಸಿರುತ್ತಾರೆ. ಇವಕ್ಕೆ ಪಂಚವಿಧ ವಿಶೇಷಣ ಕಲ್ಪನೆಗಳು, ಪ್ರೆಡಿಕಬಲ್ಸ್ (Predicables) ಎಂದು ಹೆಸರು. ಜಾತಿ (Genus), ಉಪಜಾತಿ (Species), ವೈಲಕ್ಷಣ್ಯ (Differentia), ವಿಧೇಯ ಗುಣ (Proprium), ಆಗಂತುಕ ಗುಣ (Accidens)—ಇವು ಪಂಚವಿಧ ವಿಶೇಷಣ ಕಲ್ಪನೆಗಳು.

ಅನೇಕ ಉಪಜಾತಿಗಳನ್ನು ಒಳಗೊಂಡ ವರ್ಗಕ್ಕೆ ಜಾತಿ ಎಂದು ಹೆಸರು. ಪ್ರಾಣಿ ಎಂಬ ವರ್ಗವು ಕಶೇರುಗಳು, ಅಕಶೇರುಗಳು ಎಂಬ ಉಪಜಾತಿ ಗಳನ್ನು ಒಳಗೊಂಡಿರುತ್ತದೆ. ವಿಶ್ವದಲ್ಲಿರುವ ಎಲ್ಲ ವರ್ಗದ ವಸ್ತುಗಳನ್ನೂ ಒಳಗೊಂಡ ಜಾತಿ ಪ್ರಧಾನ ಜಾತಿ, ಎಲ್ಲಕ್ಕಿಂತಲೂ ವಿಶಾಲವಾದ ಜಾತಿ. ಇದನ್ನು ಸಮಮ್ ಜೀನಸ್ (Summum Genus) ಎಂದು ಕರೆದಿರುತ್ತಾರೆ. ಇದು ಅತ್ಯಂತ ವಿಸ್ತಾರವಾದ ವ್ಯಾಪ್ತಿಯುಳ್ಳದ್ದು. ಇದನ್ನು ಇದಕ್ಕಿಂತ ಕಡಮೆ ವಿಸ್ತಾರವುಳ್ಳ ಜಾತಿಗಳಾಗಿ ವಿಭಾಗಿಸಬಹುದು. ಇವುಗಳನ್ನು ಇನ್ನೂ ಕಡಮೆ ವಿಸ್ತಾರವುಳ್ಳ ಜಾತಿಗಳನ್ನಾಗಿ ವಿಭಾಗಿಸಬಹುದು. ಹೀಗೆ ವಿಭಜನೆ ಮಾಡುತ್ತ, ಕೊನೆಯಲ್ಲಿ ನಾವು ವೈಯಕ್ತಿಕ ವಸ್ತುಗಳನ್ನು ಮುಟ್ಟಿದಾಗ ವಿಭಜನೆ ಎಲ್ಲೆಯನ್ನು ಮುಟ್ಟುತ್ತೇವೆ. ಈ ವೈಯಕ್ತಿಕ ವಸ್ತುಗಳನ್ನು ವಿಭಜಿಸುವುದಕ್ಕಾಗುವುದಿಲ್ಲ. ಹೀಗೆ ನಾವು ವಿಭಜನೆಯ ಕೊನೆಯ ಹಂತದಲ್ಲಿ ಸಂಧಿಸುವ ವೈಯಕ್ತಿಕ ವಸ್ತುವಿಗೆ ಅಂತಿಮ ವಿಶೇಷ, ಇನ್‌ಫಿಮಾ ಸ್ಪೀಷೀಸ್ (Infima species) ಎಂದು ಹೆಸರು. ಪ್ರಧಾನ ಜಾತಿಗೂ ಅಂತಿಮ ವಿಶೇಷಕ್ಕೂ ಮಧ್ಯೆ ಅನೇಕ ಜಾತಿ ಉಪಜಾತಿಗಳಿವೆ. ಇವನ್ನು ವಿಭಜನೆಯ ಮೆಟ್ಟಲುಗಳಂತೆ ಈ ರೀತಿ ಚಿತ್ರಿಸಿಕೊಳ್ಳಬಹುದು.




ವಸ್ತು ಎಂಬುದು ಎಲ್ಲಕ್ಕಿಂತ ವಿಸ್ತಾರವಾದ ಜಾತಿ, ಪ್ರಧಾನ ಜಾತಿ (Summum genus). ಸಾಕ್ರಟೀಸ್, ಬುದ್ಧ ಮುಂತಾದ ವ್ಯಕ್ತಿಗಳು ಅಂತಿಮ ವಿಶೇಷಗಳು (Infima species).

ಒಂದು ಉಪಜಾತಿಯನ್ನು ಮತ್ತೊಂದು ಉಪಜಾತಿಯಿಂದ ಪ್ರತ್ಯೇಕಿಸುವ ವಿಶೇಷಣ ಆ ಜಾತಿಯ ವೈಲಕ್ಷಣ್ಯ. ಇದಕ್ಕೆ ಡಿಫರೆನ್ಷಿಯ (Differentia) ಎಂದು ಹೆಸರು. ಮಾನವನನ್ನು ಇತರ ಪ್ರಾಣಿಗಳಿಂದ ಪ್ರತ್ಯೇಕಿಸುವ ವಿಶೇಷ ಗುಣ ಅವನ ಬುದ್ಧಿಶಕ್ತಿ. ಬುದ್ಧಿಶಕ್ತಿ ಮಾನವನ ವೈಲಕ್ಷಣ್ಯ, ಡಿಫರೆನ್ಷಿಯ. ವೈಲಕ್ಷಣ್ಯಕ್ಕೆ ಅಧೀನವಾದ ಅಥವಾ ಅದರಿಂದ ಹುಟ್ಟಿದ ಗುಣ ವಿಧೇಯ ಗುಣ. ಇದಕ್ಕೆ ಆಂಗ್ಲ ಭಾಷೆಯಲ್ಲಿ ಪ್ರೋಪ್ರಿಯಂ (Proprium) ಎಂದು ಹೆಸರು. ಮಾನವನು ಮಾತನಾಡುವ ಪ್ರಾಣಿ ಎಂದು ಹೇಳಿದಾಗ, ಮಾತನಾಡುವ ಗುಣ ವಿಧೇಯ ಗುಣ. ಆ ಗುಣ ಮಾನವನ ವೈಲಕ್ಷಣ್ಯವಾದ ಬುದ್ಧಿಶಕ್ತಿಯಿಂದ ಹುಟ್ಟಿದುದು, ಅದಕ್ಕೆ ಅಧೀನವಾದುದು (Derived attribute). ಮನುಷ್ಯನಿಗೆ ಬುದ್ಧಿಶಕ್ತಿ ಇಲ್ಲದಿದ್ದರೆ ಅವನು ಮಾತನಾಡುವ ಶಕ್ತಿಯನ್ನು ಪಡೆಯುವುದಕ್ಕಾಗುತ್ತಿರಲಿಲ್ಲ. ಮೂರು ನೇರವಾದ ಭುಜಗಳುಳ್ಳ ಗುಣ ತ್ರಿಭುಜದ ವೈಲಕ್ಷಣ್ಯ (ಡಿಫರೆನ್ಷಿಯ). ಮೂರು ಕೋನಗಳುಳ್ಳ ಅದರ ಗುಣ, ಈ ವೈಶಿಷ್ಟ್ಯಕ್ಕೆ ಅಧೀನವಾದುದು. ಅದು ಮೂರು ಭುಜಗಳುಳ್ಳದ್ದರಿಂದ ಮೂರು ಕೋನಗಳನ್ನು ಪಡೆದಿದೆ.

ಬುದ್ಧಿಶಕ್ತಿ, ಮಾತನಾಡುವ ಶಕ್ತಿ—ಇವು ಮನುಷ್ಯ ಸ್ವಭಾವಕ್ಕೆ ಅವಶ್ಯವಾದ ಗುಣಗಳು. ಇವಿಲ್ಲದಿದ್ದರೆ ಮನುಷ್ಯನು ಮನುಷ್ಯನಾಗಲಾರ. ಆದರೆ

ನಾವು ರಾಮ ಕುಳ್ಳ, ಉಬ್ಬುಹಲ್ಲ, ಸಣಕಲ, ನಿಲುವಂಗಿ ತೊಡುವವನು, ಕಚ್ಚೆ ಪಂಚೆ ಉಡುವವನು ಎಂದು ಹೇಳಿದಾಗ, ಇವನ ವಿಚಾರವಾಗಿ ನಾವು ತಿಳಿಸಿದ ವಿಶೇಷಣಗಳು ಮನುಷ್ಯನಿಗೆ ಅಗತ್ಯವಾಗಿ ಇರಬೇಕಾದ ಗುಣಗಳಲ್ಲ. ಇವು ಆಗಂತುಕವಾದುವು. ಮನುಷ್ಯ ಮನುಷ್ಯನಾಗಬೇಕಾದರೆ ಕುಳ್ಳಾಗಿರಬೇಕಾಗಿಲ್ಲ, ಅವನು ಉಬ್ಬುಹಲ್ಲನೂ, ನಿಲುವಂಗಿ ತೊಡುವವನೂ, ಕಚ್ಚೆ ಪಂಚೆ ಉಡುವವನೂ ಆಗಬೇಕಾಗಿಲ್ಲ. ಈ ಆಗಂತುಕ ಗುಣಗಳಿಗೆ ಆ್ಯಕ್ಸಿಡೆನ್ಸ್ (Accidens) ಎಂದು ಹೆಸರು. ಈ ಆಗಂತುಕ ಗುಣಗಳು ಎರಡು ವಿಧವಾಗಿವೆ. ಇವುಗಳಲ್ಲಿ ಕೆಲವನ್ನು ವಸ್ತುವಿನಿಂದ ಪ್ರತ್ಯೇಕಿಸಬಹುದು (Separable), ಇನ್ನು ಕೆಲವನ್ನು ವಸ್ತುವಿನಿಂದ ಪ್ರತ್ಯೇಕಿಸುವುದಕ್ಕಾಗುವುದಿಲ್ಲ (Inseparable). ಕುಳ್ಳತನ ಮನುಷ್ಯನ ಆಗಂತುಕವಾದ ಗುಣವಾದರೂ ಅದನ್ನು ಒಬ್ಬನಿಂದ ಪ್ರತ್ಯೇಕಿಸಲಾಗುವುದಿಲ್ಲ. ಆದರೆ ನಿಲುವಂಗಿ ತೊಡುವ ಗುಣವನ್ನು ಒಬ್ಬನಿಂದ ಪ್ರತ್ಯೇಕಿಸಬಹುದು. ಒಬ್ಬನು ನಿಲುವಂಗಿ ತೊಡುವುದನ್ನು ಬಿಟ್ಟು ಬರಿಯ ಜುಬ್ಬವನ್ನು ಮಾತ್ರ ಧರಿಸಬಹುದು; ಕಚ್ಚೆ ಪಂಚೆಯನ್ನುಡುವುದನ್ನು ಬಿಟ್ಟು ಷರಾಯಿ ಹಾಕಿಕೊಳ್ಳಬಹುದು. ಕುಬ್ಜತ್ವ ಪ್ರತ್ಯೇಕಿಸಲಾಗದ ಆಗಂತುಕ ಗುಣ (Inseparable Accidens), ನಿಲುವಂಗಿ ತೊಡುವ ಗುಣ ಪ್ರತ್ಯೇಕಿಸಲಾಗುವ ಆಗಂತುಕ ಗುಣ (Separable Accidens). ಅಂತೂ ಎರಡೂ ಆಗಂತುಕ ಗುಣಗಳು ಎಂಬುದನ್ನು ಮರೆಯಲಾಗದು.

## ಅಭ್ಯಾಸಗಳು (೩)

೧. ವ್ಯಾಕರಣ ಪದಗಳಿಗೂ ತಾರ್ಕಿಕ ಪದಗಳಿಗೂ ಇರುವ ವ್ಯತ್ಯಾಸವೇನು?

೨. ಸಾಮಾನ್ಯ ಪದ, ವಿಶಿಷ್ಟ ಪದ, ಸಾಮೂಹಿಕ ಪದ—ಇವುಗಳ ಲಕ್ಷಣಗಳೇನು? ಇವುಗಳನ್ನು ತಾರ್ಕಿಕ ಪ್ರತಿಜ್ಞೆಗಳಲ್ಲಿ ಉಪಯೋಗಿಸಿ.

೩. ವಸ್ತುಸೂಚಕ ಪದ, ಗುಣಸೂಚಕ ಪದ—ಇವುಗಳ ಉಪಯೋಗವೇನು? ಉದಾಹರಣೆಗಳನ್ನು ಕೊಟ್ಟು ವಿಷಯವನ್ನು ಸ್ಪಷ್ಟಪಡಿಸಿ.

೪. ನೇತ್ಯರ್ಥಕ ಪದಗಳ ಸ್ವರೂಪವೇನು? ಅವು ಎಷ್ಟು ವಿಧವಾಗಿವೆ? ಉದಾಹರಣೆಗಳ ಮೂಲಕ ಸ್ಪಷ್ಟಪಡಿಸಿ.

೫. 'ಡಿನೊಟೇಷನ್' ಮತ್ತು 'ಕಾನೋಟೇಷನ್' ಎಂಬ ಪದಗಳಿಗೆ ಸಮಾನವಾದ ಕನ್ನಡ ಪದಗಳು ಯಾವುವು? 'ಕಾನೋಟೇಷನ್' ಇಲ್ಲದ ಕೆಲವು ಪದಗಳನ್ನು ತಿಳಿಸಿ.

೬. "ನಿರ್ದೇಶನಕ್ಕೂ ಅರ್ಥಸೂಚನೆಗೂ ವಿಪರ್ಯಯ ಸಂಬಂಧವಿದೆ." ಈ ವಾಕ್ಯದ ಅರ್ಥವನ್ನು ಸ್ಪಷ್ಟಪಡಿಸಿ ಅದು ಎಷ್ಟುಮಟ್ಟಿಗೆ ನಿಜ?

೭. "ಅಂಕಿತನಾಮಗಳು ಅರ್ಥಸೂಚನೆ ಪಡೆದಿರುವುದಿಲ್ಲ"—ವಿಮರ್ಶಿಸಿ.

೮. ಬೇರೆ ಬೇರೆ ರೀತಿಯ ಸಂಬಂಧಗಳನ್ನು ಉದಾಹರಣೆಗಳ ಮೂಲಕ ವಿವರಿಸಿ.

೯. ಪಂಚವಿಧ ವಿಶೇಷಣ ಕಲ್ಪನೆಗಳೆಂದರೇನು? ಉದಾಹರಿಸಿ.

೧೦. ಪ್ರಧಾನಜಾತಿ, ಉಪಜಾತಿ, ಅಂತಿಮ ವಿಶೇಷ—ಇವುಗಳಿಗೆ ಇರುವ ಸಂಬಂಧವನ್ನು ತಿಳಿಸಿ.

೧೧. ಕೆಳಗೆ ಕೊಟ್ಟಿರುವ ಪ್ರತಿಜ್ಞೆಗಳ ವಿಶೇಷಣವು ಪಂಚ ವಿಶೇಷಣ ಕಲ್ಪನೆಗಳಲ್ಲಿ ಯಾವ ಬಗೆಯದು?

(೧) ಕುದುರೆ ಒಂದು ಸಾಕುಪ್ರಾಣಿ.
(೨) ಕುದುರೆ ನಾಲ್ಕು ಕಾಲಿನ ಪ್ರಾಣಿ.
(೩) ಕುದುರೆ ಕಪ್ಪಾಗಿದೆ.
(೪) ತರ್ಕಶಾಸ್ತ್ರದ ಅಭ್ಯಾಸವು ಮನಸ್ಸನ್ನು ಪಳಗಿಸುತ್ತದೆ.
(೫) ತರ್ಕಶಾಸ್ತ್ರ ಆಲೋಚನೆಯ ಶಾಸ್ತ್ರ.

೧೨. (೧) ತ್ರಿಕೋನ (೨) ಹಸು (೩) ದ್ವೀಪ—ಇವುಗಳ ವರ್ಗ, ವೈಶಿಷ್ಟ್ಯ ಮತ್ತು ಒಂದು ಆಗಂತುಕ ಗುಣವನ್ನು ತಿಳಿಸಿ.

# ೪. ಲಕ್ಷಣ ನಿರೂಪಣೆ

## (Definition)

ಹಿಂದಿನ ಅಧ್ಯಾಯದಲ್ಲಿ ಒಂದು ವಿಷಯವಸ್ತು ಕುರಿತು ಯಾವ ಯಾವ ವಿಶೇಷಣಗಳನ್ನು ಯೋಚಿಸಬಹುದು ಎಂಬುದನ್ನು ತಿಳಿದೆವಷ್ಟೆ. ಸಾಮಾನ್ಯವಾಗಿ ನಾವು ವಸ್ತುಗಳನ್ನು ವಿವರಿಸುವಾಗ ಯಾವ ವಿಶೇಷಣಗಳು ವಸ್ತುವಿನ ಸೈಜವಾದ ಗುಣವನ್ನು ವ್ಯಕ್ತಪಡಿಸುತ್ತವೆ, ಯಾವುವು ಅವುಗಳ ಸೈಜವಾದ ಗುಣವನ್ನು ವ್ಯಕ್ತಪಡಿಸುವುದಿಲ್ಲ ಎಂಬುದನ್ನು ಗಮನಿಸುವುದಿಲ್ಲ. ಹಾಗೆಯೇ ನಾವು ಪದಗಳನ್ನು ಉಪಯೋಗಿಸುವಾಗಲೂ ಕೂಡ ಅವುಗಳ ನಿರ್ದಿಷ್ಟವಾದ ಅರ್ಥವನ್ನು ತಿಳಿಯದೆ, ಅಂದರೆ ಗೊತ್ತುಗುರಿ ಇಲ್ಲದೆ ಅಡ್ಡಾದಿಡ್ಡಿಯಾಗಿ ಉಪಯೋಗಿಸುತ್ತೇವೆ. ಪದಗಳನ್ನು ನಿರ್ದಿಷ್ಟವಾದ ಅರ್ಥದಲ್ಲಿ ಉಪಯೋಗಮಾಡದಿರುವುದರಿಂದ ನಮ್ಮ ಆಲೋಚನೆಗಳು ಅಸ್ಪಷ್ಟವಾಗುತ್ತವೆ. ಅವುಗಳಲ್ಲಿ ಅವ್ಯವಸ್ಥೆ ಉಂಟಾಗುತ್ತದೆ; ಅನೇಕ ತಪ್ಪುಗಳೂ ಹುಟ್ಟುವುದಕ್ಕೆ ಅವಕಾಶವಾಗುತ್ತದೆ. ಅನೇಕವೇಳೆ ಇಬ್ಬರು ವಾದಮಾಡುವಾಗ ಅವರು ಪದಗಳನ್ನು ಬೇರೆ ಬೇರೆ ಅರ್ಥದಲ್ಲಿ ಉಪಯೋಗಿಸುವುದರಿಂದ ಅಂಥ ಪದಪ್ರಯೋಗ ಅವರಿಬ್ಬರಲ್ಲಿ ಮನಃಕ್ಲೇಶ ಹುಟ್ಟಿಸಲು ಕಾರಣವಾಗುತ್ತದೆ. ಆದ್ದರಿಂದಲೇ ವ್ಯವಸ್ಥಿತವಾದ ಯೋಚನೆಗೆ ಬೆಲೆ ಕೊಡುವ ಶಾಸ್ತ್ರಜ್ಞರು ತಾವು ವಿಚಾರ ಮಾಡುವ ಶಾಸ್ತ್ರಕ್ಕೆ ಸಂಬಂಧಪಟ್ಟ ವಿಷಯಗಳ ಲಕ್ಷಣವನ್ನು (Definition) ನಿರ್ಧರಿಸುತ್ತಾರೆ. ಶಾಸ್ತ್ರೀಯವಾದ ಜ್ಞಾನವು ಲಕ್ಷಣ ನಿರೂಪಣೆಯಿಂದ ಪ್ರಾರಂಭವಾಗುತ್ತದೆ. ಆ ಲಕ್ಷಣನಿರೂಪಣೆ ಯಶಸ್ವಿಯಾಗಿ ನಡೆದಾಗ ಆ ಶಾಸ್ತ್ರ ತನ್ನ ಗುರಿಯನ್ನು ಮುಟ್ಟುತ್ತದೆ. ಲಕ್ಷಣನಿರೂಪಣೆ ಜ್ಞಾನದ ಆದಿ ಮತ್ತು ಅಂತ್ಯ (Definition is the beginning and end of knowledge).

ಒಂದು ಪದದ ತಾರ್ಕಿಕವಾದ ಅರ್ಥವನ್ನು ಎರಡು ಬಗೆಯಾಗಿ ವ್ಯಕ್ತಗೊಳಿಸಬಹುದು. ಅದರ ನಿರ್ದೇಶನ ವ್ಯಾಪ್ತಿಯನ್ನು ನಿರ್ಧರಿಸಿ ತಿಳಿಸುವುದು ಒಂದು. ಅದು ನಿರ್ದೇಶಿಸುವ ವಸ್ತುವಿನ ಮುಖ್ಯಗುಣವನ್ನು ತಿಳಿಸುವುದು ಎರಡನೆಯದು. ಅದರ ನಿರ್ದೇಶನವ್ಯಾಪ್ತಿಯನ್ನು ತಿಳಿಸುವ ವಿಧಾನಕ್ಕೆ ವಿಭಜನೆ (Division) ಎಂದು ಹೆಸರು. ಮುಖ್ಯಗುಣವನ್ನು ತಿಳಿಸುವ ವಿಧಾನಕ್ಕೆ

ಲಕ್ಷಣನಿರೂಪಣೆ (Definition) ಎಂದು ಹೆಸರು. ವಿಭಜನೆ ಮತ್ತು ಲಕ್ಷಣ ನಿರೂಪಣೆ ಇವೆರಡೂ ಒಂದಕ್ಕೊಂದು ಸೇರಿಕೊಂಡಿವೆ. ನಾವು ವಿಭಜನೆ ಮಾಡಿದಾಗ, ಅಂದರೆ ನಿರ್ದೇಶನವ್ಯಾಪ್ತಿಯನ್ನು ತಿಳಿದಾಗ, ಮುಖ್ಯಗುಣ ವನ್ನೂ ತಿಳಿಯುತ್ತೇವೆ. ಹಾಗೆಯೇ ಮುಖ್ಯಗುಣವನ್ನು ತಿಳಿದಾಗ ನಿರ್ದೇಶನ ವ್ಯಾಪ್ತಿಯನ್ನೂ ತಿಳಿಯುತ್ತೇವೆ. "In dividing we define and in defining we divide." ನಾವು ಮನುಷ್ಯ ಎಂಬ ಪದದ ನಿರ್ದೇಶನ ವ್ಯಾಪ್ತಿಯನ್ನು ಗ್ರಹಿಸಬೇಕಾದರೆ ಮನುಷ್ಯನನ್ನು ಇತರ ಪ್ರಾಣಿಗಳಿಂದ ಬೇರ್ಪಡಿಸಬೇಕು. ಹೀಗೆ ಬೇರ್ಪಡಿಸಬೇಕಾದರೆ ಮನುಷ್ಯನ ಮುಖ್ಯ ಲಕ್ಷಣವೇನು ಎಂಬುದನ್ನು ತಿಳಿಯಬೇಕು. ಮನುಷ್ಯನ ಮುಖ್ಯಗುಣ ಅವನ ಬುದ್ಧಿಶಕ್ತಿ. ಆ ಮುಖ್ಯಗುಣದ ಸಹಾಯದಿಂದ ನಾವು ಮನುಷ್ಯನನ್ನು ಇತರ ಪ್ರಾಣಿಗಳಿಂದ ಬೇರ್ಪಡಿಸಲು ಸಾಧ್ಯವಾಗುತ್ತದೆ. ಮುಖ್ಯಗುಣ ವನ್ನು ಅಂದರೆ ಲಕ್ಷಣವನ್ನು ತಿಳಿದ ವಿನಾ ಅದರ ನಿರ್ದೇಶನ ವ್ಯಾಪ್ತಿಯನ್ನು ಗ್ರಹಿಸಲಾಗುವುದಿಲ್ಲ. ಹಾಗೆಯೇ ಒಂದು ಪದದ ಲಕ್ಷಣಾರ್ಥವನ್ನು ತಿಳಿಯ ಬೇಕಾದರೆ ಅದರ ನಿರ್ದೇಶನ ವ್ಯಾಪ್ತಿ ತಿಳಿದಿರಬೇಕು; ಮನುಷ್ಯನು ಇತರ ಪ್ರಾಣಿಗಳಿಗಿಂತ ಬೇರೆ. ಅವನು ಪ್ರಾಣಿಗಳಲ್ಲಿ ಒಂದು ಉಪವರ್ಗಕ್ಕೆ ಸೇರಿ ದವನು ಎಂದು ತಿಳಿದಿರಬೇಕು. ಹೀಗೆ ವಿಭಜನೆ, ಲಕ್ಷಣನಿರೂಪಣೆಗಳಿಗೆ ನಿಕಟಸಂಬಂಧವಿದ್ದರೂ ಇವೆರಡೂ ಬೇರೆ ಎಂಬುದನ್ನೂ ಮರೆಯಲಾಗದು. ಒಂದು ಪದದ ಅರ್ಥವನ್ನು ಗ್ರಹಿಸಲು ಇವೆರಡೂ ಅಗತ್ಯ. ನಿರ್ದೇಶನದೃಷ್ಟಿ ಮುಖ್ಯವಾದಾಗ ನಾವು ವಿಭಜನೆಯ ವಿಧಾನವನ್ನು ಅನುಸರಿಸುತ್ತೇವೆ. ಮುಖ್ಯಗುಣವನ್ನು ತಿಳಿಯಬೇಕಾದಾಗ ನಾವು ಲಕ್ಷಣವಿಧಾನವನ್ನು ಅನುಸರಿಸುತ್ತೇವೆ.

## ಲಕ್ಷಣನಿರೂಪಣೆಯ ನಿಯಮಗಳು

ಲಕ್ಷಣನಿರೂಪಣೆ ಸರಿಯಾಗಬೇಕಾದರೆ ಅದು ಕೆಲವು ನಿಯಮಗಳಿಗೆ ಅನುಸಾರವಾಗಿರಬೇಕು. ಭಾರತೀಯ ತಾರ್ಕಿಕರೂ ಪಾಶ್ಚಾತ್ಯ ತಾರ್ಕಿಕರೂ ಲಕ್ಷಣನಿರೂಪಣೆಗೆ ಕೆಲವು ನಿಯಮಗಳನ್ನು ವಿಧಿಸಿರುತ್ತಾರೆ.

೧. ಲಕ್ಷಣನಿರೂಪಣೆ ಒಂದು ಪದದ ಪೂರ್ಣ ಅರ್ಥವನ್ನು ವಿಶದಪಡಿಸ ಬೇಕು. ಲಕ್ಷಣನಿರೂಪಣೆಯ ವ್ಯಾಪ್ತಿ ಹೆಚ್ಚಾಗಿಯೂ ಇರಕೂಡದು, ಕಡಮೆ ಯಾಗಿಯೂ ಇರಕೂಡದು. ಉದಾಹರಣೆಗಾಗಿ ಮನುಷ್ಯ ಎಂಬ ಪದದ ಲಕ್ಷಣನಿರೂಪಣೆಯನ್ನು ತೆಗೆದುಕೊಳ್ಳೋಣ. "ಮನುಷ್ಯನು ಒಂದು

ಪ್ರಾಣಿ" ಎಂದು ಮನುಷ್ಯಪದಕ್ಕೆ ಲಕ್ಷಣ ಹೇಳಿದರೆ ಪ್ರಾಣಿ ಮತ್ತು ಮನುಷ್ಯ ಇವೆರಡರ ನಿರ್ದೇಶನವ್ಯಾಪನೆ ಸಮನಾಗಿರುವುದಿಲ್ಲ. ಪ್ರಾಣಿ ಎಂಬ ಪದ ಮನುಷ್ಯನಲ್ಲದೆ ನಾಯಿ, ಕೋಳಿ, ಜಿರಲೆ, ಸೊಳ್ಳೆ ಮುಂತಾದ ಜೀವಿಗಳನ್ನು ನಿರ್ದೇಶಿಸುತ್ತದೆ. ಆದ್ದರಿಂದ ಪ್ರಾಣಿಶಬ್ದದ ನಿರ್ದೇಶನವ್ಯಾಪ್ತಿ ಅತಿ ವಿಶಾಲ ವಾದುದು. ಮನುಷ್ಯನು ಒಂದು ಪ್ರಾಣಿ ಎಂದು ಹೇಳಿದಾಗ ಆ ಲಕ್ಷಣ ನಿರೂಪಣೆಯಲ್ಲಿ ಅತಿವ್ಯಾಪ್ತಿದೋಷ ಉಂಟಾಗುತ್ತದೆ. "ಮನುಷ್ಯನು ಪದ್ಯ ಬರೆಯುವ ಪ್ರಾಣಿ" ಎಂದು ಮನುಷ್ಯಪದಕ್ಕೆ ಲಕ್ಷಣ ಹೇಳಿದಾಗಲೂ ಮನುಷ್ಯ ಮತ್ತು ಪದ್ಯ ಬರೆಯುವ ಪ್ರಾಣಿ, ಇವೆರಡರ ನಿರ್ದೇಶನವ್ಯಾಪ್ತಿ ಸಮ ನಾಗಿರುವುದಿಲ್ಲ. ಮನುಷ್ಯಶಬ್ದದ ನಿರ್ದೇಶನವ್ಯಾಪ್ತಿಗಿಂತ, ಪದ್ಯ ಬರೆಯುವ ಪ್ರಾಣಿಯ ನಿರ್ದೇಶನವ್ಯಾಪ್ತಿ ತುಂಬ ಕಡಮೆಯಾದುದು. ಮನುಷ್ಯರೆಲ್ಲ ಪದ್ಯ ಬರೆಯುವುದಿಲ್ಲ. ಅವರಲ್ಲಿ ಕೆಲವರು ಮಾತ್ರ ಪದ್ಯ ಬರೆಯುತ್ತಾರೆ. ಈ ಲಕ್ಷಣ ನಿರೂಪಣೆಯಲ್ಲಿ ಅವ್ಯಾಪ್ತಿದೋಷ ಕಾಣುತ್ತದೆ. ಮನುಷ್ಯ ಬುದ್ಧಿಯುಳ್ಳ ಪ್ರಾಣಿ ಎಂದು ಹೇಳಿದಾಗ ಬುದ್ಧಿಯುಳ್ಳ ಪ್ರಾಣಿ ಎಂಬುದು ಎಲ್ಲ ಮನುಷ್ಯ ರಿಗೂ ಪೂರ್ಣವಾಗಿ ಅನ್ವಯವಾಗುತ್ತದೆ. ಮನುಷ್ಯರೆಲ್ಲ ಬುದ್ಧಿಯುಳ್ಳ ಪ್ರಾಣಿಗಳು, ಆದ್ದರಿಂದ ಈ ಲಕ್ಷಣನಿರೂಪಣೆ ನಿಯಮಬದ್ಧವಾದದ್ದು, ಸರಿಯಾದದ್ದು.

೨. ಒಂದು ಪದದ ಲಕ್ಷಣನಿರೂಪಣೆ ಆ ಪದ ನಿರ್ದೇಶಿಸುವ ವಿಷಯದ ಮುಖ್ಯಗುಣವನ್ನು ತಿಳಿಸಬೇಕು. "ಮನುಷ್ಯ ಬುದ್ಧಿಯುಳ್ಳ ಪ್ರಾಣಿ" ಎಂಬ ಲಕ್ಷಣನಿರೂಪಣೆಯು ಮನುಷ್ಯನ ಮುಖ್ಯಗುಣವಾದ ಬುದ್ಧಿಶಕ್ತಿಯನ್ನು ತಿಳಿಸುತ್ತದೆ. ಬುದ್ಧಿಶಕ್ತಿ ಮನುಷ್ಯನ ವೈಶಿಷ್ಟ್ಯ; ಇತರ ಪ್ರಾಣಿಗಳಿಂದ ಮನುಷ್ಯನನ್ನು ಪ್ರತ್ಯೇಕಿಸುವ ಗುಣ. ಮೇಲೆ ಹೇಳಿದ ಲಕ್ಷಣವು ಪ್ರಾಣಿ ಎಂಬ ಜಾತಿ (Genus)ಗೆ ಸೇರಿದವನೆಂಬುದನ್ನು ತಿಳಿಸುವುದಲ್ಲದೆ, ಆ ಜಾತಿಗೆ ಸೇರಿದ ಇತರ ಪ್ರಾಣಿಗಳಿಂದ ಅವನನ್ನು ಬೇರ್ಪಡಿಸುವ ವೈಲಕ್ಷಣ್ಯವನ್ನೂ ತಿಳಿಸುತ್ತದೆ. ಸರಿಯಾದ ಲಕ್ಷಣನಿರೂಪಣೆ ಜಾತಿಯನ್ನೂ ಲಕ್ಷಣ್ಯವನ್ನೂ ಎರಡನ್ನೂ ತಿಳಿಸಬೇಕು. ಮನುಷ್ಯ ಬುದ್ಧಿಯುಳ್ಳ ಪ್ರಾಣಿ ಎಂದು ಲಕ್ಷಣ ತಿಳಿಸುವುದರ ಬದಲು, ಮನುಷ್ಯ ಶಾಲು ಹೊದೆದುಕೊಳ್ಳುವ ಪ್ರಾಣಿ ಎಂದು ಲಕ್ಷಣ ಹೇಳಿದರೆ ಆ ಲಕ್ಷಣನಿರೂಪಣೆ ದೋಷಯುತವಾಗುತ್ತದೆ. ಶಾಲು ಹೊದೆದುಕೊಳ್ಳುವುದು ಮನುಷ್ಯನಲ್ಲಿರಬೇಕಾದ ಆವಶ್ಯಕವಾದ ಗುಣವಲ್ಲ. ಶಾಲು ಹೊದೆದುಕೊಳ್ಳದಿರುವ ಮನುಷ್ಯರು ಅನೇಕರಿದ್ದಾರೆ. ಅವರು ಶಾಲು ಹೊದೆದುಕೊಳ್ಳದ್ದರಿಂದ ಅವರ ಮಾನುಷತ್ವ ಹೋಗಿಬಿಡುವುದಿಲ್ಲ. ಏನನ್ನೂ

ಹೊದೆಯದೆ ಮನುಷ್ಯನು ಬಾಳಬಹುದು. ಬಟ್ಟೆ ಹೊದೆಯುವುದು ಮನುಷ್ಯನ ಆಗಂತುಕಗುಣ, ಅವಶ್ಯ ಗುಣವಲ್ಲ. ಆದುದರಿಂದ ಈ ಲಕ್ಷಣನಿರೂಪಣೆ ದೋಷಯುಕ್ತವಾದುದು.

ಲಕ್ಷಣ ಹೇಳುವಾಗ ಒಂದು ಪದ ನಿರ್ದೇಶಿಸುವ ವಸ್ತುವಿನ ಮೇಲಿನ ಜಾತಿಯನ್ನೂ, ಮತ್ತು ಅದರ ಮುಖ್ಯಗುಣವನ್ನೂ ತಿಳಿಸಬೇಕು. ಆದರೆ ಎಲ್ಲಕ್ಕಿಂತಲೂ ಮೇಲಿನ ಜಾತಿ (Summum genus) ಯನ್ನು ತಿಳಿಸುವ ಪದಕ್ಕೆ ಲಕ್ಷಣ ಹೇಳಲಾಗುವುದಿಲ್ಲ. ಏಕೆಂದರೆ ಅದಕ್ಕಿಂತ ಮೇಲಿನ ಜಾತಿ ಇಲ್ಲ. ಅಂತಿಮವಿಶೇಷ (Infima species) ಗಳಿಗೂ ಲಕ್ಷಣ ಹೇಳಲಾಗುವುದಿಲ್ಲ. ಏಕೆಂದರೆ ಅವುಗಳ ಮುಖ್ಯಗುಣವೇನು ಎಂಬುದನ್ನು ತಿಳಿಸಲಾಗುವುದಿಲ್ಲ. ಸ್ವಲಕ್ಷಣಶಬ್ದ (Sui generis terms) ಗಳಿಗೂ ಲಕ್ಷಣನಿರೂಪಣೆ ಸಾಧ್ಯವಿಲ್ಲ. ಕಾಲ, ಆಕಾಶ, ಸಿಹಿ, ಕಹಿ ಮುಂತಾದ ಪದಗಳು ಸ್ವಲಕ್ಷಣ ಪದಗಳು.

೩. ಒಂದು ಪದದ ಲಕ್ಷಣನಿರೂಪಣೆಯಲ್ಲಿ ಆ ಪದವನ್ನೇ ಆಗಲಿ ಅಥವಾ ಅದರ ಪರ್ಯಾಯಪದ (Synonym) ವನ್ನಾಗಲಿ ಉಪಯೋಗಿಸಕೂಡದು. ನ್ಯಾಯ ಅಂದರೆ ನ್ಯಾಯವಾಗಿ ನಡೆದುಕೊಳ್ಳುವುದು, "ಜೀರ್ಣಶಕ್ತಿ ಎಂದರೆ ಜೀರಕಶಕ್ತಿ," "ಕುರುಡ ಎಂದರೆ ಅಂಧ" ಈ ಲಕ್ಷಣವಾಕ್ಯಗಳು ಮೇಲಿನ ನಿಯಮಕ್ಕೆ ವಿರುದ್ಧವಾಗಿವೆ. ಯಾವ ಶಬ್ದದ ಲಕ್ಷಣವನ್ನು ತಿಳಿಸಲು ಹೊರಟಿವೆಯೋ ಅದೇ ಶಬ್ದದ ವಿಶೇಷಣರೂಪ ಅಥವಾ ಪರ್ಯಾಯರೂಪವನ್ನು ಈ ಲಕ್ಷಣನಿರೂಪಣೆಗಳು ಬಳಸಿವೆ. ಇಂಥಾ ಲಕ್ಷಣನಿರೂಪಣೆಯನ್ನು ಪಾಶ್ಚಾತ್ಯ ತಾರ್ಕಿಕರು ಸರ್ಕ್ಯುಲಸ್ ಡೆಫಿನಿಯಿಂಡೊ (Circulus definiendo) ಎಂದು ಕರೆದಿದ್ದಾರೆ.

೪. ಒಂದು ಪದದ ಲಕ್ಷಣವನ್ನು ತಿಳಿಸುವಾಗ ಲಕ್ಷಣನಿರೂಪಣೆಯಲ್ಲಿ ಆ ಪದಕ್ಕಿಂತಲೂ ಕಷ್ಟವಾದ ಪದವನ್ನಾಗಲಿ, ಅಸ್ಪಷ್ಟವಾದ ಪದವನ್ನಾಗಲಿ ಅಥವಾ ರೂಪಕಾಲಂಕಾರವನ್ನಾಗಲಿ ಉಪಯೋಗಿಸಕೂಡದು. ವಿಷಯವನ್ನು ಸ್ಪಷ್ಟಪಡಿಸುವುದು, ಸುಲಭವಾಗಿ ಅರ್ಥವನ್ನು ಗ್ರಹಿಸುವಂತೆ ಮಾಡುವುದು ಲಕ್ಷಣನಿರೂಪಣೆಯ ಉದ್ದೇಶ. ಕಷ್ಟವಾದ ಅಥವಾ ಅಸ್ಪಷ್ಟವಾದ ಪದಗಳನ್ನು ಉಪಯೋಗಿಸಿದಾಗ ಈ ಉದ್ದೇಶಕ್ಕೆ ಭಂಗಬರುತ್ತದೆ. "ಕಾಗೆ ಒಂದು ವಿಧವಾದ ಪಕ್ಷಿ", "ಕಮಲ ಒಂದು ವಿಧವಾದ ಹೂ" ಎಂದು ಕಾಗೆ ಮತ್ತು ಕಮಲದ ಲಕ್ಷಣ ಹೇಳಿದಾಗ ಅಸ್ಪಷ್ಟತೆಯ ದೋಷ ಕಾಣಬರುತ್ತದೆ ಈ ಲಕ್ಷಣದ ಸಹಾಯದಿಂದ ನಾವು ಕಾಗೆಯನ್ನಾಗಲಿ, ಕಮಲವನ್ನಾಗಲಿ ಗುರುತಿಸಲಾಗು

ವುದಿಲ್ಲ. "ಒಂಟೆ ಮರಳುಕಾಡಿನ ಹಡಗು" ಎಂದು ಒಂಟೆಯ ಲಕ್ಷಣ ಹೇಳಿದಾಗ ಆ ಲಕ್ಷಣ ನಮಗೆ ಒಂಟೆಯ ಸ್ವಭಾವವನ್ನು ತಿಳಿಸುವುದಿಲ್ಲ. ನೀರಿನ ಮೇಲೆ ಸಂಚಾರಮಾಡಲು ಹಡಗು ಉಪಯೋಗಕರವಾಗಿರುವಂತೆ ಒಂಟೆ ಮರಳು ಕಾಡಿನಲ್ಲಿ ಪ್ರಯಾಣಮಾಡಲು ಉಪಯೋಗಕಾರಿ ಎಂಬುದನ್ನು ಆಲಂಕಾರಿಕ ರೀತಿಯಲ್ಲಿ ಈ ಲಕ್ಷಣ ತಿಳಿಸುತ್ತದೆ. "ಒಂಟೆ ಮರಳುಕಾಡಿನ ಹಡಗು" ಎಂಬುದು ರಮಣೀಯಾರ್ಥವನ್ನು ಕೊಡುತ್ತದೆ. ಅದು ಸೊಗಸಾಗಿ ಕಾಣುತ್ತದೆ, ಅದನ್ನು ಕೇಳಿ ನಮಗೆ ಸಂತೋಷವಾಗುತ್ತದೆ. ಆದರೆ ಅದು ಒಂಟೆಯ ಮುಖ್ಯಗುಣವನ್ನು ತಿಳಿಸುವುದಿಲ್ಲ. ಕಾವ್ಯದೃಷ್ಟಿಯಿಂದ ಅದು ಶ್ಲಾಘ್ಯ, ಆದರೆ ವಿಜ್ಞಾನ ದೃಷ್ಟಿಯಿಂದ ಅದು ತ್ಯಾಜ್ಯ; ನಿಷ್ಪ್ರಯೋಜನವಾದದ್ದು. ಕಾವ್ಯದಲ್ಲಿ ರೂಪಕಗಳಿಗೆ ಬೆಲೆ ಇದೆ, ಶಾಸ್ತ್ರದಲ್ಲಿ ರೂಪಕಗಳ ಉಪಯೋಗದಿಂದ ಅನುಕೂಲಕ್ಕಿಂತ ಪ್ರತಿಕೂಲವೇ ಹೆಚ್ಚು.

೫. ಲಕ್ಷಣನಿರೂಪಣೆ ಭಾವಸೂಚಕವಾಗಿ (Positive) ಇರಬೇಕು; ಅಭಾವ ಸೂಚಕವಾಗಿರಕೂಡದು. ಭೌತವಸ್ತು ಅಚೇತನವಾದ ವಸ್ತು ಎಂದು ಭೌತವಸ್ತುವಿನ ಲಕ್ಷಣ ಹೇಳಿದಾಗ ಭೌತವಸ್ತು ಯಾವುದಲ್ಲ ಎಂದು ತಿಳಿಸುತ್ತದೆಯೇ ಹೊರತು ಅದು ಯಾವುದಾಗಿದೆ ಎಂಬುದನ್ನು ತಿಳಿಸುವುದಿಲ್ಲ. ಗುಣಾಭಾವವೇ ಒಂದು ವಿಷಯದ ಮುಖ್ಯಲಕ್ಷಣವಾಗುವ ಸಂದರ್ಭಗಳಲ್ಲಿ ಈ ನಿಯಮವನ್ನು ಅನುಸರಿಸಬೇಕಾಗಿಲ್ಲ. ಬ್ರಹ್ಮಚಾರಿ, ವಿಧವೆ ಮುಂತಾದ ಪದಗಳ ಲಕ್ಷಣ ಹೇಳುವಾಗ ಒಂದು ಗುಣಾಭಾವವೇ ಅವುಗಳ ಸ್ವರೂಪವನ್ನು ವ್ಯಕ್ತಪಡಿಸುವುದರಿಂದ ಅಂಥ ಪದಗಳ ಲಕ್ಷಣವನ್ನು ತಿಳಿಸುವಾಗ ಲಕ್ಷಣನಿರೂಪಣೆ ಅಭಾವರೂಪ (Negative) ವಾಗಿರಬಹುದು. ಮದುವೆಯಾಗದವನು ಬ್ರಹ್ಮಚಾರಿ: ಗಂಡನನ್ನು ಕಳೆದುಕೊಂಡವಳು ವಿಧವೆ.

ಸಾಂಪ್ರದಾಯಿಕವಾಗಿ ಲಕ್ಷಣನಿರೂಪಣೆ ಮೇಲೆ ಹೇಳಿದ ನಿಯಮಗಳಿಗನುಸಾರವಾಗಿ ಇರುತ್ತದೆ. ಈ ವಿಧವಾದ ಲಕ್ಷಣನಿರೂಪಣೆಯಲ್ಲದೆ ಅದರಷ್ಟೇ ಉಪಯೋಗಕರವಾದ ಇನ್ನಿತರ ಲಕ್ಷಣನಿರೂಪಣೆಗಳೂ ಕೆಲವು ವೈಜ್ಞಾನಿಕ ಶಾಸ್ತ್ರಗಳಲ್ಲಿ ತುಂಬ ಬಳಕೆಯಲ್ಲಿವೆ. ಬೇರೆ ಬೇರೆ ಉದ್ದೇಶಗಳನ್ನು ಸಾಧಿಸಲು ಬೇರ ಬೇರೆ ಲಕ್ಷಣನಿರೂಪಣೆಗಳು ಆವಶ್ಯಕ. ಒಂದು ವಸ್ತುವಿನ ಒಂದು ಭಾಗವನ್ನು ಬರಿಯ ಭಾಗವಾಗಿ ವಿವರಿಸದೆ ಪೂರ್ಣವಾದ ಆ ವಸ್ತುವಿನ ರಚನೆಯಲ್ಲಿ ಆ ಭಾಗದ ಪಾತ್ರವನ್ನೂ, ಇತರ ಭಾಗಗಳೊಡನೆ ಅದಕ್ಕಿರುವ ಸಂಬಂಧವನ್ನೂ ವಿವರಿಸುವುದು ಹೆಚ್ಚು ಪರಿಣಾಮಕಾರಿ, ಉಪಯೋಗಕರ. ಶ್ವಾಸಕೋಶ ಗಾಳಿಯನ್ನು ದೇಹದಿಂದ ಎಳೆದುಕೊಂಡು ಅದನ್ನು ಪುನಃ ಹೊರಕ್ಕೆ ಹಾಕುವ

ಒಂದು ಅಂಗ ಎಂದು ತಿಳಿಯುವುದಕ್ಕಿಂತ ಅದು ಶರೀರದಲ್ಲಿ ಇತರ ಅಂಗಗಳೊಡನೆ ಸಹಕರಿಸಿ ಶರೀರದ ಒಟ್ಟು ವ್ಯವಸ್ಥೆಯಲ್ಲಿ ಯಾವ ಪಾತ್ರವನ್ನು ವಹಿಸಿದೆ ಎಂಬುದನ್ನು ತಿಳಿಯುವುದು ಹೆಚ್ಚು ಉಪಯೋಗಕರ. ಅದು ಹೃದಯಕ್ಕೆ ಆಮ್ಲಜನಕವನ್ನು ಒದಗಿಸಿ ಹೃದಯದ ರಕ್ತದಲ್ಲಿರುವ ಕಶ್ಮಲಗಳನ್ನು ಸುಟ್ಟು ತನ್ಮೂಲಕ ಹುಟ್ಟಿದ ವಿಷವಸ್ತುಗಳನ್ನು ಹೊರಹಾಕಿ ದೇಹದ ಸಮಸ್ಥಿತಿಯನ್ನು ಕಾಪಾಡುತ್ತದೆ ಎಂದು ತಿಳಿಸುವುದು ಶರೀರವಿಜ್ಞಾನದೃಷ್ಟಿಯಿಂದ ಹೆಚ್ಚು ಫಲಕಾರಿ. ಇಂಥ ಲಕ್ಷಣನಿರೂಪಣೆಯನ್ನು ವ್ಯವಸ್ಥಿತವಾದ ಲಕ್ಷಣನಿರೂಪಣೆ, ಸಿಸ್ಟಮ್ಯಾಟಿಕ್ ಡೆಫಿನಿಷನ್ (Systematic Definition) ಎಂದು ಕರೆಯುತ್ತಾರೆ. ನೀರು ಆಕಾಶದಲ್ಲಿರುವ ಮೋಡದಿಂದ ಬೀಳುವ ದ್ರವ ಎಂದು ಲಕ್ಷಣ ಹೇಳುವುದಕ್ಕಿಂತ ಅದು ಒಂದು ಭಾಗ ಆಮ್ಲಜನಕ ಮತ್ತು ಎರಡು ಭಾಗ ಜಲಜನಕ—ಇವುಗಳ ಮಿಳನದಿಂದ ಉತ್ಪತ್ತಿಯಾದ ದ್ರವ ಎಂದು ನೀರಿನ ಲಕ್ಷಣ ತಿಳಿಸುವುದು ರಸಾಯನಶಾಸ್ತ್ರದೃಷ್ಟಿಯಿಂದ ಹೆಚ್ಚು ಫಲಕಾರಿ. ವಸ್ತುವಿನ ಉತ್ಪತ್ತಿ ಅಥವಾ ಸಂಯೋಜನೆಯನ್ನು ತಿಳಿಸುವುದಕ್ಕೆ ಉತ್ಪತ್ತಿ ಲಕ್ಷಣನಿರೂಪಣೆ, ಜೆನಿಟಿಕ್ ಡೆಫಿನಿಷನ್ (Genetic Definition) ಎಂದು ಹೆಸರು. ವಿವರಣಾತ್ಮಕ ಲಕ್ಷಣನಿರೂಪಣೆ, ಡಿಸ್ಕ್ರಿಪ್ಟಿವ್ ಡೆಫಿನಿಷನ್ (Descriptive Definition) ಇನ್ನೊಂದು ವಿಧವಾದ ಲಕ್ಷಣನಿರೂಪಣೆ. ವಸ್ತುವನ್ನು ಖಚಿತವಾಗಿ ಕರಾರುವಾಕಾಗಿ ವರ್ಣಿಸುವುದು ಬಹುಮುಖ್ಯವಾದ ವೈಜ್ಞಾನಿಕ ಅರ್ಥನಿರೂಪಣೆಯ ವಿಧಾನ. ಅದು ಜ್ಞಾನದ ಏಣಿಯ ಮೊದಲನೆಯ ಹಂತ. ವಸ್ತುವನ್ನು ವೈಜ್ಞಾನಿಕವಾಗಿ ವಿವರಿಸುವುದರಲ್ಲಿ ಡಾರ್ವಿನ್ ಅತ್ಯಂತ ಪ್ರಸಿದ್ಧಿ ಪಡೆದಿದ್ದಾನೆ. ವಿಷಯಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿ ಅವುಗಳನ್ನು ಕರಾರುವಾಕಾಗಿ ವರ್ಣಿಸಿ ತನ್ನ ಡಯರಿಯಲ್ಲಿ ಬರೆದಿಡುವುದು ಅವನ ಅಭ್ಯಾಸವಾಗಿತ್ತು. ಹೀಗೆ ಅನೇಕ ಕಾಲ ಬರೆದಿಟ್ಟ ವಿವರಣೆಗಳು ಕಾಲಕ್ರಮದಲ್ಲಿ ಪರಿಣಾಮವಾದವನ್ನು ಸ್ಥಾಪಿಸಲು ನೆರವಾದುವು.

ಒಂದು ವಸ್ತು ಯಾವ ಗುಂಪಿಗೆ ಅಥವಾ ವಂಶಕ್ಕೆ ಸೇರಿದುದು ಎಂದು ವಿವರಿಸುವುದು ಇನ್ನೊಂದು ಬಗೆಯ ಲಕ್ಷಣನಿರೂಪಣೆ. ಬ್ರೋಮೀನ್ ಕ್ಲೋರೀನ್‌ವಂಶಕ್ಕೆ ಸೇರಿದ್ದು, ಆರ್ಗಾನ್ ಸಾರಜನಕವಂಶಕ್ಕೆ ಸೇರಿದ್ದು ಎಂದು ರಾಸಾಯನಿಕ ವಸ್ತುಗಳನ್ನು ವಿವರಿಸುವುದಕ್ಕೆ ಡೆಫಿನಿಷನ್ ಬೈ ಟೈಪ್ (Definition by type) ಎಂದು ಹೆಸರು.

ಈ ಮೇಲೆ ಹೇಳಿದ ಲಕ್ಷಣವಿವರಣೆಯಿಂದ ಒಂದು ಮುಖ್ಯ ಅಂಶ

ವ್ಯಕ್ತಪಡುತ್ತದೆ. ಲಕ್ಷಣನಿರೂಪಣೆ ಉಪಯೋಗಕರವಾಗಬೇಕಾದರೆ ಅದು ಸಂದರ್ಭಾನುಸಾರ ಬೇರೆ ಬೇರೆ ವಿಧವಾಗಿರಬೇಕು. ಒಂದೊಂದು ಜ್ಞಾನ ಕ್ಷೇತ್ರದಲ್ಲಿ ಒಂದೊಂದು ಬಗೆಯ ಲಕ್ಷಣನಿರೂಪಣೆ ಹೆಚ್ಚು ಪರಿಣಾಮಕಾರಿ. ಇದನ್ನು ಮರೆತು ಎಲ್ಲ ವಿಧವಾದ ಜ್ಞಾನಕ್ಕೂ ಒಂದೇ ವಿಧವಾದ ಲಕ್ಷಣ ಹೇಳಬೇಕು ಎಂದು ಹಟ ಹಿಡಿದರೆ ಜ್ಞಾನಕ್ಕೆ ತಡೆಯುಂಟಾಗುವುದಲ್ಲದೆ ಜ್ಞಾನಾರ್ಥಿಗಳಲ್ಲಿ ಅನುಪಯುಕ್ತವಾದ ಕ್ಲೇಶಗಳು ಕಲಹಗಳು ಹುಟ್ಟುತ್ತವೆ. ವಿಜ್ಞಾನ ಶಾಂತಿಯುತವಾಗಿ ಬೆಳೆಯಬೇಕಾದರೆ, ಲಕ್ಷಣನಿರೂಪಣೆ ಏಕಾಂತಿಕ ವಾಗಿರದೆ ಅನೇಕಾಂತವಾಗಿರಬೇಕು. ಇದನ್ನು ಮಿಕ್ಕೆಲ್ಲ ತಾರ್ಕಿಕರಿಗಿಂತಲೂ ಜೈನತಾರ್ಕಿಕರು ಚೆನ್ನಾಗಿ ಗ್ರಹಿಸಿ ವಿಸ್ತಾರವಾಗಿ ವಿವರಿಸಿರುತ್ತಾರೆ. ಅನೇಕಾಂತವಾದ ಅವರ ನ್ಯಾಯದ ಮೂಲಭೂತ ಭಾವನೆ.

## ಅಭ್ಯಾಸಗಳು (೪)

೧. (ಅ) ಲಕ್ಷಣ ನಿರೂಪಣೆಯ ನಿಯಮಗಳನ್ನು ತಿಳಿಸಿ.
   (ಆ) ಎಲ್ಲ ಪದಗಳಿಗೂ ಲಕ್ಷಣ ಹೇಳಲು ಸಾಧ್ಯವೆ?

೨. ಈ ಲಕ್ಷಣನಿರೂಪಣೆಗಳನ್ನು ಪರೀಕ್ಷಿಸಿ:
   (೧) ತರ್ಕಶಾಸ್ತ್ರ ಆಲೋಚನೆಯ ಶಾಸ್ತ್ರ.
   (೨) ಮನುಷ್ಯನು ಮಾತನಾಡುವ ಪ್ರಾಣಿ.
   (೩) ಆಂಗ್ಲೇಯರು ಒಳ್ಳೆಯ ಆಟಗಾರರು.
   (೪) ಹುಲಿ ದುಷ್ಟ ಜಂತು.
   (೫) ಶರೀರ ಆತ್ಮದ ಕವಚ.
   (೬) ನೀತಿವಂತನು ಕದಿಯದವನು, ಕೊಲೆಮಾಡದವನು.

## ೫. ವಿಭಜನೆ

## (Division)

ಪದವು ನಿರ್ದೇಶಿಸುವ ವಸ್ತುವಿನ ವಿಸ್ತಾರವನ್ನು ವ್ಯಾಪಕತೆಯನ್ನು ಹರವನ್ನು ತಿಳಿಸುವುದು ವಿಭಜನೆಯ ಕೆಲಸ ಎಂದು ಆಗಲೇ ತಿಳಿದಿರುವೆವಷ್ಟೆ. ಈಗ ವಿಭಜನೆಯ ಮುಖ್ಯ ಸ್ವರೂಪವನ್ನೂ ಅದರ ನಿಯಮಗಳನ್ನೂ ಪರಿಶೀಲಿಸಬಹುದು. ಪದದ ಹರವನ್ನು ನಿರ್ದಿಷ್ಟವಾಗಿ ಮತ್ತು ಕ್ರಮಬದ್ಧವಾಗಿ ತಿಳಿಸುವುದು ತಾರ್ಕಿಕವಿಭಜನೆಯ ಉದ್ದೇಶ. ವಿಷಯವನ್ನು ಎರಡು ರೀತಿಯಲ್ಲಿ ವಿಭಜನೆ ಮಾಡಬಹುದು. ವಿಷಯವನ್ನು ಎರಡು ವಿರುದ್ಧಭಾಗಗಳಾಗಿ ಕತ್ತರಿಸುವುದು (Dichotomy) ಒಂದು ವಿಧವಾದ ವಿಭಜನೆ. ಇದನ್ನು ಡಿವಿಷನ್ ಬೈ ಡೈಕಾಟಮಿ (Division by Dichotomy) ಎಂದು ಪಾಶ್ಚಾತ್ಯ ತಾರ್ಕಿಕರು ಕರೆಯುತ್ತಾರೆ. ಇರವನ್ನು, ಭೌತವಾದದ್ದು ಅಭೌತವಾದದ್ದು ಎಂದು ಎರಡು ವಿರುದ್ಧಭಾಗಗಳಾಗಿ ವಿಭಾಗಿಸಿದಾಗ ಇವೆರಡು ಭಾಗಗಳು ಇರುವುದನ್ನೆಲ್ಲ ನಿಶ್ಶೇಷವಾಗಿ ಒಳಗೊಂಡಿರುತ್ತವೆ. ಇರುವುದೆಲ್ಲ ಭೌತವಾಗಿರಬೇಕು ಅಥವಾ ಅಭೌತವಾಗಿರಬೇಕು ; ಇವೆರಡರ ಮಧ್ಯೆ ಬೇರೆ ಯಾವುದಕ್ಕೂ ಅವಕಾಶವಿರುವುದಿಲ್ಲ. ಇವು ಒಂದನ್ನೊಂದು ಹೊರದೂಡುತ್ತವೆ. ತ್ರಿಭುಜಗಳನ್ನು ಸಮಭುಜಗಳುಳ್ಳವು ಅಸಮಭುಜಗಳುಳ್ಳವು ಎಂದು ವಿಭಾಗಿಸಿದಾಗ ಸಮಭುಜಗಳುಳ್ಳ ತ್ರಿಭುಜಗಳು ಅವುಗಳಿಂದ ಬೇರೆಯಾದ ಎಲ್ಲ ತ್ರಿಭುಜಗಳನ್ನೂ ಬಹಿಷ್ಕರಿಸುತ್ತವೆ. ಸಮಭುಜಗಳುಳ್ಳ ಮತ್ತು ಅಸಮಭುಜಗಳುಳ್ಳ ಈ ಎರಡು ತ್ರಿಭುಜಗಳ ವಿಂಗಡಣೆಯಲ್ಲಿ ಲೋಕದಲ್ಲಿ ಇರಬಹುದಾದ ಎಲ್ಲ ತ್ರಿಭುಜಗಳೂ ಸೇರಿರುತ್ತವೆ. ಈ ವಿಭಜನೆ ತ್ರಿಭುಜಗಳನ್ನೆಲ್ಲ ನಿಶ್ಶೇಷವಾಗಿ (Exhaustively) ಒಳಗೊಂಡಿರುತ್ತಾದರೂ ಅದು ನಿರ್ದಿಷ್ಟವಾದ ತಿಳಿವನ್ನು ಕೊಡುವುದಿಲ್ಲ. ತ್ರಿಭುಜಗಳ ಎರಡು ವಿಭಾಗಗಳಲ್ಲಿ ಅಸಮಭುಜವುಳ್ಳದ್ದು ಎಂಬ ಭಾಗ ಅನಿರ್ದಿಷ್ಟವಾದದ್ದು, ಅಸ್ಪಷ್ಟವಾದದ್ದು. ಅಸಮಭುಜಗಳುಳ್ಳ ತ್ರಿಭುಜಗಳು ಯಾವವು ಎಂಬುದನ್ನು ಅದು ತಿಳಿಸುವುದಿಲ್ಲ. ಎರಡು ಭಾಗಗಳಾಗಿ ಛೇದಿಸುವ ಈ ಬಗೆಯ ವಿಭಜನೆ ಕೇವಲ ಕೃತಕವಾದದ್ದು, ಶಾಬ್ದಿಕವಾದದ್ದು (Verbal). ಇದರಲ್ಲಿ ಒಂದು ಭಾಗ ಮಾತ್ರ ನಿರ್ದಿಷ್ಟವಾಗಿರುತ್ತದೆ. ಅದಕ್ಕೆ ವಿರುದ್ಧವಾದ ಇನ್ನೊಂದು ಭಾಗ ಅನಿರ್ದಿಷ್ಟವಾಗಿ ಉಳಿಯುತ್ತದೆ.

ಈ ಅನಿರ್ದಿಷ್ಟವಾದ ಭಾಗವನ್ನು ನಿರ್ದಿಷ್ಟವಾಗಿ ಮಾಡುವುದು ವೈಜ್ಞಾನಿಕ ವಿಭಜನೆಯ ಅಂದರೆ ತಾರ್ಕಿಕವಿಭಜನೆಯ ಉದ್ದೇಶ. ತ್ರಿಭುಜಗಳನ್ನು ಎಲ್ಲ ಭುಜಗಳೂ ಸಮವಾದ ಭುಜಗಳುಳ್ಳವು, ಎರಡು ಸಮಾನವಾದ ಭುಜಗಳುಳ್ಳವು, ಮೂರೂ ಅಸಮಾನವಾದ ಭುಜಗಳುಳ್ಳವು ಎಂದು ವಿಭಾಗ ಮಾಡಿದಾಗ ತ್ರಿಭುಜಗಳ ವಿಷಯವಾಗಿ ನಮ್ಮ ತಿಳಿವು ನಿರ್ದಿಷ್ಟವಾಗುತ್ತದೆ. ಈ ವಿಭಜನೆಯ ಮೂರು ವಿಭಾಗಗಳು ಆಯಾ ತ್ರಿಭುಜಗಳ ಸ್ವಭಾವವನ್ನು ಸ್ಪಷ್ಟಪಡಿಸುತ್ತವೆ. ಭುಜಗಳ ಅಳತೆಯನ್ನು ಮೂಲತತ್ತ್ವವಾಗಿ (Principle) ಇಟ್ಟುಕೊಂಡು ಅದು ವಿಂಗಡಣೆಯನ್ನು ಮಾಡುತ್ತದೆ. ಇದಕ್ಕೆ ಶಾಸ್ತ್ರೀಯವಾದ ವಿಭಜನೆ (Scientific Division) ಎಂದು ಹೆಸರು. ವೈಜ್ಞಾನಿಕವಾದ ವಿಂಗಡಣೆ ವಿಷಯಗಳನ್ನು ಒಂದು ಮೂಲತತ್ತ್ವದ ಆಧಾರದ ಮೇಲೆ ಗುಂಪುಗಳಾಗಿ ವಿಭಾಗ ಮಾಡುತ್ತದೆ. ಹೀಗೆ ಒಂದು ಮೂಲತತ್ತ್ವದ ಆಧಾರದ ಮೇಲೆ ವರ್ಗೀಕರಣ ಮಾಡಲು ಅನುಕೂಲವಾಗುವಂತೆ ತಾರ್ಕಿಕರು ಕೆಲವು ನಿಯಮಗಳನ್ನು ನಿರ್ಧರಿಸಿರುತ್ತಾರೆ.

(೧) ವಿಭಾಗಮಾಡಿದ ವಿಷಯವೆಲ್ಲಕ್ಕೂ ಸಾಮಾನ್ಯವಾದ ಒಂದು ಮೂಲತತ್ತ್ವ (Fundamental Principle) ವನ್ನು ಆಧಾರವಾಗಿ ಇಟ್ಟುಕೊಂಡು ಒಂದು ವಿಭಾಗಕ್ಕೂ ಮತ್ತೊಂದು ವಿಭಾಗಕ್ಕೂ ಇರುವ ವ್ಯತ್ಯಾಸವನ್ನು ಗಮನಿಸಿ ವಿಷಯಗಳನ್ನು ವಿಂಗಡಿಸಬೇಕು. ಇದು ವಿಭಜನೆಯ ಮೂಲಸೂತ್ರ. ರಾಷ್ಟ್ರಗಳನ್ನು ವಿಭಾಗಮಾಡಬೇಕಾದರೆ ರಾಷ್ಟ್ರಕ್ಕೆ ಮುಖ್ಯವಾದ ಪ್ರಭುತ್ವದ ಕೇಂದ್ರವನ್ನು ಮೂಲ ಆಧಾರವಾಗಿ ಇಟ್ಟುಕೊಂಡು ವಿಭಜನೆಯನ್ನು ಕೈಕೊಳ್ಳಬೇಕು. ಪ್ರಭುತ್ವ ದೇಶದ ಒಬ್ಬ ವ್ಯಕ್ತಿಯಲ್ಲಿ ನೆಲಸಿರಬಹುದು. ಅಥವಾ ಕೆಲವರಲ್ಲಿ ಮಾತ್ರ ನೆಲಸಿರಬಹುದು, ಅಥವಾ ಪ್ರಜೆಗಳೆಲ್ಲರಲ್ಲೂ ನೆಲಸಿರಬಹುದು. ಪ್ರಭುತ್ವಕೇಂದ್ರವನ್ನೂ ವಿಭಜನೆಯ ಮುಖ್ಯತತ್ತ್ವವನ್ನಾಗಿ ಮಾಡಿಕೊಂಡು ರಾಷ್ಟ್ರಗಳನ್ನೂ ಮೂರಾಗಿ ವಿಭಾಗಮಾಡಬಹುದು. ಪ್ರಭುತ್ವ ಒಬ್ಬನಲ್ಲಿ ಕೇಂದ್ರಿತವಾಗಿರುವ ರಾಷ್ಟ್ರ ಅಂದರೆ ರಾಜನ ಆಳಿಕೆಗೆ ಒಳಪಟ್ಟ ರಾಷ್ಟ್ರ (Monarchical State), ಕೆಲವು ಶ್ರೀಮಂತರ ಆಳಿಕೆಗೆ ಒಳಪಟ್ಟ ರಾಷ್ಟ್ರ (Aristocracy), ಪ್ರಜಾಪ್ರಭುತ್ವವುಳ್ಳ ರಾಷ್ಟ್ರ (Democracy).

(೨) ವಿಂಗಡನೆಯನ್ನು ಒಂದು ಪ್ರಧಾನತತ್ತ್ವದ ಆಧಾರದ ಮೇಲೆ ಪ್ರಾರಂಭಿಸಿ, ವಿಭಜನೆಯ ಉದ್ದಕ್ಕೂ ಅದನ್ನೇ ಅನುಸರಿಸಿ ವಿಭಜನೆಯನ್ನು ಮುಂದುವರಿಸಬೇಕು. ಒಂದು ಮೂಲತತ್ತ್ವದಿಂದ ಪ್ರಾರಂಭಿಸಿ ವಿಭಜನೆಯ

ಮಧ್ಯದಲ್ಲಿ ಅದನ್ನು ಬದಲಾಯಿಸಿ ಬೇರೆ ತತ್ತ್ವವನ್ನು ಅನುಸರಿಸಿ ವಿಭಜನೆ ಯನ್ನು ಮಾಡಕೂಡದು. ಒಂದು ವಿಭಜನೆಯಲ್ಲಿ ಎರಡು ತತ್ತ್ವಗಳನ್ನು ಬೆರಸಿದರೆ ಅವ್ಯವಸ್ಥೆಯುಂಟಾಗುತ್ತದೆ. ಮನುಷ್ಯರನ್ನು ಕಕೇಷಿಯನ್ ಜನ, ನೀಗ್ರೋಗಳು, ಮಂಗೋಲಿಯರು, ಐರೋಪ್ಯರು, ಭಾರತೀಯರು, ಪಾದ್ರಿಗಳು, ವ್ಯಾಪಾರಿಗಳು, ಕವಿಗಳು ಎಂದು ವಿಭಾಗಮಾಡಿದಾಗ ಆ ವಿಭಜನೆಯನ್ನು ಒಂದಕ್ಕಿಂತ ಹೆಚ್ಚಾದ ಮೂಲತತ್ತ್ವಗಳ ಆಧಾರದ ಮೇಲೆ ಮಾಡಿದೆ. ಕಕೇಷಿಯನ್ ಜನ, ನೀಗ್ರೋಗಳು, ಮಂಗೋಲಿಯರು ಎಂಬ ಭೇದಗಳು ಬುಡಕಟ್ಟಿನ ಭೇದಗಳು. ಈ ಭೇದಗಳು ಬುಡಕಟ್ಟಿನ ತತ್ತ್ವಕ್ಕನುಸಾರವಾಗಿ ಹುಟ್ಟಿದುವು. ಅಮೆರಿಕಾದವರು, ಐರೋಪ್ಯರು, ಭಾರತೀಯರು ಎಂಬ ವಿಭಾಗಗಳಿಗೆ ನಿವಾಸಸ್ಥಾನ ಆಧಾರ. ಪಾದ್ರಿಗಳು, ವ್ಯಾಪಾರಿಗಳು, ಕವಿಗಳು ಎಂಬ ವಿಭಾಗಗಳಿಗೆ ವೃತ್ತಿತತ್ತ್ವ ಆಧಾರ. ಹೀಗೆ ಒಂದು ವಿಭಜನೆಯಲ್ಲಿ ಎರಡು ಮೂರು ತತ್ತ್ವಗಳನ್ನು ಬೆರಸಿದಾಗ ಅವ್ಯವಸ್ಥೆಯುಂಟಾಗುತ್ತದೆ.

(೩) ವಿಭಜನೆಯ ಭಾಗಗಳು ಒಂದನ್ನೊಂದು ಪ್ರತ್ಯೇಕಿಸಬೇಕು, ಅವು ಪರಸ್ಪರ ಭಿನ್ನವಾಗಿರಬೇಕು. ಮತ್ತು ವಿಭಾಗಗಳನ್ನೆಲ್ಲ ಸೇರಿಸಿದಾಗ ವಿಭಾಜ್ಯ ವಿಷಯವು ನಿಶ್ಶೇಷವಾಗಿ ಅಂದರೆ ಪೂರ್ಣವಾಗಿ ವಿಭಜನೆಯಾಗಿರಬೇಕು ಎಂಬುದು ವಿಭಜನೆಯ ಮೂರನೆಯ ನಿಯಮ "The parts of a division must be mutually exclusive and collectively exhaustive". ಒಂದಕ್ಕಿಂತ ಹೆಚ್ಚು ಮೂಲತತ್ತ್ವಗಳನ್ನು ಅನುಸರಿಸಿದಾಗ ವಿಭಜನೆಯ ಈ ಗುರಿಗೆ ಭಂಗಬರುತ್ತದೆ. ಮೇಲಿನ ವಿಭಜನೆಯ ವಿಭಾಗಗಳಾದ ಅಮೆರಿಕನ್ನರು, ನೀಗ್ರೋಗಳು, ಭಾರತೀಯರು, ಮಂಗೋಲ್ ಬುಡಕಟ್ಟಿನವರು ಪರಸ್ಪರ ಭಿನ್ನವಾದ ಭಾಗಗಳಲ್ಲ. ಅಮೆರಿಕದವರಲ್ಲಿ ನೀಗ್ರೋಗಳೂ ಸೇರಿರುತ್ತಾರೆ. ಭಾರತೀಯರಲ್ಲಿ ಮಂಗೋಲಿಯ ಬುಡಕಟ್ಟಿನವರಿರುತ್ತಾರೆ. ಅಮೆರಿಕದವರಲ್ಲಿ ಭಾರತೀಯರಲ್ಲಿ ಪಾದ್ರಿಗಳು, ವ್ಯಾಪಾರಿಗಳು, ಕವಿಗಳು ಸೇರಿರುತ್ತಾರೆ. ಭಾರತೀಯ ಎಂಬ ವಿಭಾಗ ಕವಿಗಳು ಎಂಬ ವಿಭಾಗವನ್ನು ಬಹಿಷ್ಕರಿಸುವುದಿಲ್ಲ. ಇಲ್ಲಿ ಒಂದು ವಿಭಜನೆ ಇನ್ನೊಂದಕ್ಕೆ ಅಡ್ಡವಾಗಿ ಬರುತ್ತದೆ. ಇಂಥ ದೋಷವುಳ್ಳ ಅಡ್ಡವಿಭಜನೆಗೆ ಕ್ರಾಸ್ ಡಿವಿಷನ್ (Cross division) ಎಂದು ಹೆಸರು. ಮೇಲಿನ ವಿಭಜನೆಯಲ್ಲಿ ವಿಭಾಜ್ಯ ವಿಷಯ ಪೂರ್ಣವಾಗಿ ವಿಭಾಗವಾಗಿಲ್ಲ. ಬುಡಕಟ್ಟಿನ ತತ್ತ್ವದೃಷ್ಟಿಯಿಂದ ನೋಡಿದರೆ ಈ ವಿಭಜನೆಯಲ್ಲಿ ಆಸ್ಟ್ರೇಲಿಯಾ ಬುಡಕಟ್ಟು ಎಂಬ ಒಂದು ವಿಭಾಗ ಬಿಟ್ಟುಹೋಗಿದೆ. ನಿವಾಸಸ್ಥಾನ ತತ್ತ್ವದೃಷ್ಟಿಯಿಂದ ನೋಡಿದಾಗಲೂ ಈ ಅಪೂರ್ಣತೆಯು

ದೋಷ ಕಾಣಬರುತ್ತದೆ. ಅಮೆರಿಕಾದವರು, ಐರೋಪ್ಯರು, ಭಾರತೀಯರು ಇವರಲ್ಲದೆ ಆಫ್ರಿಕಾದಲ್ಲಿ, ಏಷ್ಯಾಖಂಡದ ಇತರ ಭಾಗಗಳಲ್ಲಿ ಬೇರೆ ಬೇರೆ ದೇಶದ ಜನರಿರುತ್ತಾರೆ.

ತಾರ್ಕಿಕ ವಿಭಜನೆಯನ್ನು ಹೋಲುವ ಆದರೆ ತಾರ್ಕಿಕವಾದ ವಿಭಜನೆಗಳೆಂದು ಗಣಿಸಲಾಗದ ಎರಡು ವಿಧವಾದ ವಿಭಜನೆಗಳಿವೆ. ಇವು ಭೌತ ವಿಭಜನೆ (Physical Division), ಗುಣಾತ್ಮಕವಿಭಜನೆ (Metaphysical Division). ತಾರ್ಕಿಕವಿಭಜನೆಯಂತೆ ವಸ್ತುಗಳನ್ನು ಉಪವರ್ಗಗಳಾಗಿ ವಿಭಾಗಮಾಡದೆ ಅವುಗಳನ್ನು ಭಾಗಗಳಾಗಿ ಒಡೆಯುವುದು ಭೌತವಿಭಜನೆ. ಕುರ್ಚಿಯನ್ನು ಕಾಲು, ಪೀಠ, ಬೆನ್ನು ಎಂದು ಭಾಗಮಾಡುವುದೂ, ಗಿಡವನ್ನು ಬೇರು, ಬುಡ, ಕೊಂಬೆ, ಎಲೆಗಳು, ಹೂವು, ಕಾಯಿ ಎಂದು ಭಾಗಮಾಡುವುದೂ ಭೌತವಿಭಜನೆಗೆ ಉದಾಹರಣೆಗಳು. ಒಂದು ವಸ್ತುವನ್ನು ಅದರ ಭೌತಭಾಗಗಳಾಗಿ ವಿಭಾಗಿಸದೆ ಅದರ ಗುಣಗಳನ್ನು ವಿಭಾಗಮಾಡಿ ತಿಳಿಸುವುದು ಗುಣಾತ್ಮಕವಿಭಜನೆ (Metaphysical Division). ಕಿತ್ತಲೆಯ ಹಣ್ಣಿನ ವರ್ತುಲಾಕಾರ, ಸ್ವಾದ, ಹಳದಿಯ ಬಣ್ಣ, ಮೃದುತ್ವ ಮುಂತಾದ ಗುಣಗಳನ್ನು ವಿಂಗಡಿಸಿ ಹೇಳುವುದೂ ವಜ್ರದ ಕಾಠಿಣ್ಯ, ಹೊಳಪು ಮುಂತಾದ ಗುಣಗಳನ್ನು ವಿಂಗಡಿಸಿ ಹೇಳುವುದೂ ಗುಣಾತ್ಮಕವಿಭಜನೆಗೆ ಉದಾಹರಣೆಗಳು.

## ವರ್ಗೀಕರಣ

ಇದುವರೆಗೆ ವಿಭಜನೆ ಪೂರ್ಣದಿಂದ ಭಾಗಗಳ ಕಡೆಗೆ, ಹೆಚ್ಚು ನಿರ್ದೇಶನವ್ಯಾಪ್ತಿಯುಳ್ಳದ್ದರಿಂದ ಕಡಮೆ ನಿರ್ದೇಶನವ್ಯಾಪ್ತಿಯುಳ್ಳ ಅಂಶಗಳ ಕಡೆಗೆ ಅಂದರೆ ಮೇಲಿನಿಂದ ಕೆಳಕ್ಕೆ ಇಳಿದಂತೆ ತಿಳಿದಂತಾಯಿತು. ಆದರೆ ಇದಕ್ಕೆ ಪ್ರತಿಯಾದ, ಅಂದರೆ ಕೆಳಗಿನಿಂದ ಮೇಲಕ್ಕೆ, ಕಡಮೆ ನಿರ್ದೇಶವ್ಯಾಪ್ತಿಯುಳ್ಳ ಪದಗಳನ್ನು ಹೆಚ್ಚು ಹೆಚ್ಚು ನಿರ್ದೇಶವ್ಯಾಪ್ತಿಯುಳ್ಳ ಗುಂಪುಗಳಾಗಿ ವಿಂಗಡಿಸುವ ಕ್ರಮವಿದೆ. ಇದಕ್ಕೆ ವರ್ಗೀಕರಣ (Classification) ಎಂದು ಹೆಸರು. ವಿಜ್ಞಾನಶಾಸ್ತ್ರಗಳಲ್ಲಿ ಈ ವಿಧವಾದ ವಿಂಗಡನೆಯ ಬಳಕೆ ಹೆಚ್ಚು. ಪೃಥಕ್ಕಾದ ವಿಷಯಗಳನ್ನು ಪರಿಶೀಲಿಸಿ, ಅವುಗಳಲ್ಲಿ ಕಂಡುಬರುವ ಸಾಮ್ಯಗಳನ್ನು ಲಕ್ಷಿಸಿ, ಸಾಮ್ಯಗಳ ಆಧಾರದ ಮೇಲೆ ಅವುಗಳನ್ನು ಗುಂಪುಕೂಡಿಸುವುದು ವರ್ಗೀಕರಣಕ್ರಮ.

ವಿಭಜನೆ ಮತ್ತು ವರ್ಗೀಕರಣ—ಇವೆರಡೂ ಒಂದಕ್ಕೊಂದು ಸಾಪೇಕ್ಷವಾದುವು, ಒಂದನ್ನೊಂದು ಒಳಗೊಂಡಿವೆ. ವರ್ಗೀಕರಣ ವಿಭಜನೆಯನ್ನು

ಒಳಗೊಂಡಿದೆ, ವಿಭಜನೆ ವರ್ಗೀಕರಣವನ್ನು ಒಳಗೊಂಡಿದೆ. ಉಪವರ್ಗಗಳ ಅರಿವಿಲ್ಲದೆ ಹೆಚ್ಚು ನಿರ್ದೇಶಕ ವ್ಯಾಪನೆಯುಳ್ಳದ್ದನ್ನು ಸಣ್ಣ ಸಣ್ಣ ಗುಂಪುಗಳಾಗಿ ವಿಭಾಗಿಸುವುದಕ್ಕಾಗುವುದಿಲ್ಲ. ವಿಶಾಲವರ್ಗದ ಅರಿವಿಲ್ಲದೆ ಸಣ್ಣ ಗುಂಪುಗಳನ್ನು ದೊಡ್ಡ ಗುಂಪುಗಳಲ್ಲಿ ಸೇರಿಸಲಾಗುವುದಿಲ್ಲ. ವಿಭಜನ ವಿಧಾನದಲ್ಲಿ ವಿಶಾಲವಾದ ವರ್ಗ ನಮ್ಮ ಮನಸ್ಸಿನ ಮುನ್ನೆಲೆಯಲ್ಲಿರುತ್ತದೆ, ಸಣ್ಣ ವರ್ಗಗಳೂ, ಪೃಥಕ್ಕಾದ ವಿಷಯಗಳೂ ಹಿನ್ನೆಲೆಯಲ್ಲಿರುತ್ತವೆ. ವರ್ಗೀಕರಣ ವಿಧಾನದಲ್ಲಿ ಪೃಥಕ್ಕಾದ ಅಂಶಗಳು ಮತ್ತು ಸಣ್ಣ ಸಣ್ಣ ವರ್ಗಗಳು ನಮ್ಮ ಮನಸ್ಸಿನ ಮುನ್ನೆಲೆಯಲ್ಲಿರುತ್ತವೆ, ವಿಸ್ತಾರವಾದ ವರ್ಗಗಳು ಹಿನ್ನೆಲೆಯಲ್ಲಿ ಅಡಗಿರುತ್ತವೆ. ನಮ್ಮ ತಿಳಿವಿನ ಗಮನ ಏಕದೇಶೀಯವಲ್ಲ, ನೇರವಾದ ಗೆರೆ ಎಳೆದಂತೆ ಏಕಾಭಿಮುಖವಾಗಿರುವುದಿಲ್ಲ. ಅದು ಹಿಂದಕ್ಕೂ ಮುಂದಕ್ಕೂ, ಮೇಲಿನಿಂದ ಕೆಳಕ್ಕೂ, ಕೆಳಗಿನಿಂದ ಮೇಲಕ್ಕೂ ಹರಿಯುತ್ತದೆ. ಹೆಚ್ಚು ವ್ಯಾಪ್ತಿಯುಳ್ಳದ್ದರಿಂದ ಕಡಮೆ ವ್ಯಾಪ್ತಿಯುಳ್ಳ ಅಂಶದ ಕಡೆ ಅಂದರೆ ಮೇಲಿನಿಂದ ಕೆಳಕ್ಕೆ ನಮ್ಮ ಗಮನ ಇಳಿದಾಗ ಅದನ್ನು ನಿಗಮನ (Deduction) ಎಂದು ಕರೆಯಬಹುದು. ಕಡಮೆ ವ್ಯಾಪ್ತಿಯುಳ್ಳ ಅಂಶಗಳಿಂದ ಹೆಚ್ಚು ವ್ಯಾಪ್ತಿಯುಳ್ಳ ಅಂಶಗಳ ಕಡೆಗೆ, ಅಂದರೆ ಕೆಳಗಿನಿಂದ ಮೇಲಕ್ಕೆ ನಮ್ಮ ಗಮನ ಏರಿದಾಗ, ಅದನ್ನು ಅನುಗಮನ (Induction) ಎಂದು ಕರೆಯಬಹುದು. ಇವೆರಡೂ ಒಂದು ನಾಣ್ಯದ ಎರಡು ಮುಖಗಳಂತೆ, ಒಂದನ್ನು ಬಿಟ್ಟು ಒಂದು ಇರಲು ಸಾಧ್ಯವಿಲ್ಲ. ನಾವು ಒಂದು ಸಂದರ್ಭದಲ್ಲಿ ನಿಗಮನ ಕ್ರಮದಲ್ಲಿ ಆಸಕ್ತರಾಗಿರುತ್ತೇವೆ. ಆಗ ವಿಭಜನೆಯನ್ನು ಅನುಸರಿಸುತ್ತೇವೆ. ಮತ್ತೊಂದು ಸಂದರ್ಭದಲ್ಲಿ ಅನುಗಮನಕ್ರಮದಲ್ಲಿ ಅಂದರೆ ವರ್ಗೀಕರಣದಲ್ಲಿ ಆಸಕ್ತರಾಗಿರುತ್ತೇವೆ. ನಮ್ಮ ತಿಳಿವಿನ ಈ ಪರಿವನ್ನು ಬೇರೆ ಬೇರೆ ರೂಪಗಳಲ್ಲಿ ನಾವು ತರ್ಕಶಾಸ್ತ್ರದ ಉದ್ದಕ್ಕೂ ಕಾಣಬಹುದು. ನಮ್ಮ ತಿಳಿವು ಹೀಗೆ ನಿಗಮನ ಅನುಗಮನಕ್ರಮಗಳನ್ನನುಸರಿಸಿ ಹಿಂದಿನಿಂದ ಮುಂದಕ್ಕೆ, ಮುಂದಿನಿಂದ ಹಿಂದಕ್ಕೆ ಸಂಚರಿಸುವುದರಿಂದ, ಅದು ಬೆಳೆಯಲು ಸಾಧ್ಯವಾಗುತ್ತದೆ. ಇವುಗಳಲ್ಲಿ ಯಾವುದಾದರೂ ಒಂದನ್ನೇ ಅನುಸರಿಸಿ ಇನ್ನೊಂದನ್ನು ಬಿಟ್ಟುಬಿಟ್ಟರೆ ನಮ್ಮ ತಿಳಿವು ಮೊಟಕಾಗುತ್ತದೆ.

## ಅಭ್ಯಾಸಗಳು (೫)

೧. ಲಕ್ಷಣನಿರೂಪಣೆಗೂ ವಿಭಜನೆಗೂ ಇರುವ ಸಂಬಂಧವನ್ನು ತಿಳಿಸಿ.

೨. ತಾರ್ಕಿಕ ವಿಭಜನೆಯನ್ನು ಇತರ ಬಗೆಯ ವಿಭಜನೆಗಳಿಂದ ಪ್ರತ್ಯೇಕಿಸಿ ಅದರ ಸ್ವರೂಪವನ್ನು ತಿಳಿಸಿ

೩. ವಿಭಜನೆ ಮತ್ತು ವರ್ಗೀಕರಣ ಇವುಗಳಿಗಿರುವ ವ್ಯತ್ಯಾಸವನ್ನು ತಿಳಿಸಿ.

೪. ಕೃತಕ ವಿಭಜನೆ ಎಂದರೆ ಏನು? ಉದಾಹರಿಸಿ.

೫. ವಿಭಜನೆಯ ನಿಯಮಗಳನ್ನು ಉದಾಹರಣೆಗಳ ಸಹಿತವಾಗಿ ತಿಳಿಸಿ.

೬. ಈ ವಿಭಜನೆಗಳನ್ನು ಪರೀಕ್ಷಿಸಿ:

(೧) ಮನುಷ್ಯರನ್ನು ಆಂಧ್ರರು, ತಮಿಳರು, ತೊದವರು, ಗುಜರಾತಿಗಳು, ನೀಗ್ರೋಗಳು, ಐರೋಪ್ಯರು ಎಂದು ವಿಭಾಗಮಾಡುವುದು.

(೨) ಶಾಸ್ತ್ರಗಳನ್ನು ಮನಶ್ಶಾಸ್ತ್ರ, ವೈದ್ಯಶಾಸ್ತ್ರ, ಪ್ರಾಣಿಶಾಸ್ತ್ರ ಎಂದು ವಿಭಾಗಿಸುವುದು.

(೩) ವಾಹನಗಳನ್ನು ಜಟಕಗಾಡಿ, ರೈಲುಗಾಡಿ, ಮೋಟಾರು, ಲಾರಿ ಎಂದು ವಿಭಾಗಿಸುವುದು.

(೪) ಲೋಹಗಳನ್ನು ದ್ರವರೂಪವಾದುವು, ಒಡವೆಮಾಡಲು ಉಪಯೋಗಿಸುವಂಥವು, ಕರಗಿಸಲು ಸುಲಭವಾದುವು, ಭಾರವಾದುವು, ಹಗುರವಾದುವು ಎಂದು ವಿಭಾಗಿಸುವುದು.

(೫) ವಿದ್ಯಾರ್ಥಿಗಳನ್ನು ಸೋಮಾರಿ, ಅಲಂಕಾರ ವಿದ್ಯಾರ್ಥಿ, ಆಟಗಾರ, ಬುದ್ಧಿವಂತ ಎಂದು ವಿಭಾಗಿಸುವುದು.

ಈ ಪದಗಳ ಅರ್ಥವನ್ನು ತಿಳಿಸಿ. ಒಂದೊಂದಕ್ಕೂ ಒಂದೊಂದು ಉದಾಹರಣೆಯನ್ನು ಕೊಡಿ.

೭. ಡಿಸ್ಕ್ರಿಪ್ಟಿವ್ ಡೆಫಿನಿಷನ್ ('Descriptive definition') ಡೆಫಿನಿಷನ್ ಬೈ ಟೈಪ್ ('Definition by type,') ಸಿಸ್ಟಮ್ಯಾಟಿಕ್ ಡೆಫಿನಿಷನ್ ('Systematic definition.)'

೮. "ಲಕ್ಷಣನಿರೂಪಣೆ ವಿಭಜನೆಯನ್ನು ಒಳಗೊಂಡಿದೆ, ವಿಭಜನೆ ಲಕ್ಷಣನಿರೂಪಣೆಯನ್ನು ಒಳಗೊಂಡಿದೆ.'—ವಿಮರ್ಶಿಸಿ.

# ೬. ಪ್ರತಿಜ್ಞೆಗಳು ಮತ್ತು ಪ್ರತಿಜ್ಞಾವಾಕ್ಯಗಳು

## (Judgements and Propositions)

ನಮ್ಮ ಅನುಭವಕ್ಕೆ ಬಂದ ವಿಷಯಗಳನ್ನು ಅರ್ಥಮಾಡಿಕೊಳ್ಳುವುದು ನಮ್ಮ ತಿಳಿವಿನ ಸ್ವಭಾವ. ಇದು ಗಿಡ, ಇದು ಹಸು, ಇದು ಲೋಹ, ಇದು ಒಳ್ಳೆಯದು, ಇದು ಕೆಟ್ಟದ್ದು, ಇದು ಕ್ಷೇಮಕಾರಿ, ಇದು ಅಪಾಯಕರವಾದದ್ದು, ಇದು ಉಪಯೋಗಕರವಾದದ್ದು, ಇದು ವಾಸ್ತವವಾದದ್ದು, ಇದು ಭ್ರಮೆ, ಇದು ಹಿಂದೆ ನಡೆದದ್ದು, ಇದು ಈಗ ನಡೆಯುತ್ತಿರುವುದು, ಇದು ಮುಂದೆ ನಡೆಯಬಹುದಾದದ್ದು, ಇದು ಕಾಯಿಲೆಗೆ ಕಾರಣ, ಇದು ಪ್ರವಾಹಕ್ಕೆ ಕಾರಣ, ಇದು ಚಳುವಳಿಗೆ ಕಾರಣ, ಇದು ಬೆಲೆ ಏರುವುದಕ್ಕೆ ಕಾರಣ— ಹೀಗೆ ನಾವು ನಮ್ಮ ಸುತ್ತಲಿರುವ ವಸ್ತುಗಳನ್ನೂ ವ್ಯವಹಾರಗಳನ್ನೂ ವಿದ್ಯಮಾನಗಳನ್ನೂ ಒಂದಲ್ಲ ಒಂದು ರೀತಿಯಲ್ಲಿ ಅರ್ಥಮಾಡಿಕೊಳ್ಳುತ್ತಿದ್ದೇವೆ. ಹೀಗೆ ನಾವು ಅರ್ಥಮಾಡಿಕೊಂಡದ್ದು ಯಾವಾಗಲೂ ಪ್ರತಿಜ್ಞಾರೂಪದಲ್ಲಿರುತ್ತದೆ. ಪ್ರತಿಜ್ಞಾರೂಪ ಎಂದರೆ ಇದು ಹೀಗಿದೆ, ಹೀಗಿಲ್ಲ ಎಂದು ನಿರ್ಧರಿಸಿ ಹೇಳುವುದು. ಪ್ರತಿಜ್ಞೆಗೆ ಆಂಗ್ಲಭಾಷೆಯಲ್ಲಿ ಜಡ್ಜ್‌ಮೆಂಟ್ ಎಂದು ಹೆಸರು.

ಅರ್ಥ ನಿರ್ಧರಿಸುವುದು ಎರಡು ವಿಧವಾಗಿರಬಹುದು. ನಮಗೆ ಈಗಾಗಲೇ ತಿಳಿದಿರುವ ಸಾಮಾನ್ಯ ಲಕ್ಷಣವನ್ನು ಹೊಸದೊಂದು ವಿಷಯಕ್ಕೆ ಅನ್ವಯಿಸುವುದು ಒಂದು ವಿಧವಾದದ್ದು. ಕೊಂಬುಳ್ಳ ಪ್ರಾಣಿಗಳಿಗೆ ಸೀಳು ಗೊರಸುಗಳಿವೆ ಎಂದು ನಾವು ಈಗಾಗಲೇ ತಿಳಿದಿದ್ದರೆ ಹೊಸದೊಂದು ಕೊಂಬುಳ್ಳ ಪ್ರಾಣಿಯನ್ನು ಕಂಡಾಗ ಅದಕ್ಕೆ ಸೀಳುಗೊರಸುಗಳಿವೆ ಎಂದು ಅರ್ಥಮಾಡಿಕೊಳ್ಳುತ್ತೇವೆ. ಈಚಲುಜಾತಿಯ ಗಿಡಗಳಿಗೆ ಗರಿಗಳಿರುವುದು ಸಾಮಾನ್ಯ. ಈ ತಿಳಿವಳಿಕೆಯನ್ನು ನಾವು ಪಡೆದಿದ್ದರೆ ನಾವು ಹೊಸದೊಂದು ಗಿಡವನ್ನು, ಉದಾಹರಣೆಗೆ ಖರ್ಜೂರದ ಗಿಡವನ್ನು, ನೋಡಿದಾಗ ಅದು ಈಚಲಜಾತಿಯ ಗಿಡ ಎಂದು ಅರ್ಥಮಾಡಿಕೊಳ್ಳುತ್ತೇವೆ. ನಾವು ಕೆಲವು ಪ್ರತ್ಯೇಕವಾದ ಅಥವಾ ಬೇರೆಬೇರೆಯಾದ ವಿಶೇಷ ವಸ್ತುಗಳನ್ನು ನೋಡಿ ಅವುಗಳೆಲ್ಲಕ್ಕೂ ಸಾಮಾನ್ಯವಾದ ಲಕ್ಷಣವನ್ನು ತಿಳಿದಾಗ ನಾವು ವಿಷಯಗಳನ್ನು ಇನ್ನೊಂದು ಬಗೆಯಾಗಿ ಅರ್ಥಮಾಡಿಕೊಳ್ಳುತ್ತೇವೆ. ಸೀಸ, ತಾಮ್ರ,

ಚಿನ್ನ, ಬೆಳ್ಳಿ ಮುಂತಾದ ಬೇರೆ ಬೇರೆ ವಸ್ತುಗಳನ್ನು ನೋಡಿ ಅವುಗಳೆಲ್ಲಕ್ಕೂ ಸಾಮಾನ್ಯವಾದ ಲಕ್ಷಣವನ್ನು ತಿಳಿದುಕೊಳ್ಳುವುದು, ಅಂದರೆ ಅವು ಲೋಹಗಳು ಎಂದು ತಿಳಿದುಕೊಳ್ಳುವುದು ಎರಡನೆಯ ಬಗೆಯ ಅರ್ಥನಿರೂಪಣೆಗೆ ಉದಾಹರಣೆ. ಮೊದಲನೆಯ ವಿಧವಾದ ಅರ್ಥನಿರೂಪಣೆಯಲ್ಲಿ ನಮ್ಮ ಆಲೋಚನೆ ಸಾಮಾನ್ಯದಿಂದ ವಿಶೇಷದ ಕಡೆಗೆ ಹರಿಯುತ್ತದೆ. ಎರಡನೆಯದರಲ್ಲಿ ನಮ್ಮ ತಿಳಿವು ವಿಶೇಷದಿಂದ ಸಾಮಾನ್ಯದ ಕಡೆಗೆ ಹರಿಯುತ್ತದೆ. ಮೊದಲನೆಯದು, ಸಾಮಾನ್ಯದಲ್ಲಿ ಅಡಗಿರುವ ವೈಶಿಷ್ಟ್ಯವನ್ನು ವ್ಯಕ್ತಪಡಿಸುತ್ತದೆ; ಎರಡನೆಯದು, ವಿಶಿಷ್ಟವಾದ ವಸ್ತುಗಳಲ್ಲಡಗಿರುವ ಸಾಮಾನ್ಯವನ್ನು ಹೊರಗೆಡಹುತ್ತದೆ. ನಮ್ಮ ಅನುಭವದಲ್ಲಿ ಈ ಎರಡು ವಿಧವಾದ ಕ್ರಿಯೆಗಳು ಒಂದನ್ನೊಂದು ಬಿಟ್ಟು, ಒಂದಕ್ಕೊಂದು ಸಂಬಂಧಿಸದೆ, ಇರುವುದಿಲ್ಲ. ಒಂದಕ್ಕೊಂದು ಸೇರಿಕೊಂಡು, ಒಂದಕ್ಕೊಂದು ನೆರವಾಗಿ ನಮ್ಮ ತಿಳಿವನ್ನು ಬೆಳಸುತ್ತವೆ.

ನಾವು ಹುಟ್ಟಿದಾಗಲೆ ವಿಷಯುಗಳ ವೈಶಿಷ್ಟ್ಯಗಳನ್ನೂ ಸಾಮಾನ್ಯ ಲಕ್ಷಣಗಳನ್ನೂ ತಿಳಿದುಕೊಂಡು ಹುಟ್ಟುವುದಿಲ್ಲ. ಹುಟ್ಟಿದ ಮಗುವಿನ ಅನುಭವ ತುಂಬ ಸಂಕುಚಿತವಾದದ್ದು, ಅವ್ಯಕ್ತವಾದದ್ದು; ತನ್ನ ಸುತ್ತ ಇರುವ ಪ್ರಪಂಚ ಒಂದು ಅವ್ಯಕ್ತವಾದ ಗೊಂದಲವಾಗಿ ತೋರುವುದು. ಕ್ರಮ ಕ್ರಮವಾಗಿ ಅದು ಶಾಖ, ಶೈತ್ಯ, ಬೆಳಕು, ಶಬ್ದ, ರುಚಿ ಮುಂತಾದುವನ್ನು ತಿಳಿದುಕೊಳ್ಳುತ್ತದೆ. ತಾಯಿ, ಅಕ್ಕ, ಅಜ್ಜಿ ಮುಂತಾದ ಹತ್ತಿರದ ಸಂಬಂಧಗಳನ್ನು ಗುರುತಿಸುತ್ತದೆ. ಇದು ಬೆಕ್ಕು, ಇದು ನಾಯಿ, ಇದು ಬೊಂಬೆ, ಇದು ಕಲ್ಲು, ಇದು ಸಜೀವವಸ್ತು, ಇದು ನಿರ್ಜೀವವಸ್ತು ಎಂದು ಅದು ತಿಳಿದುಕೊಳ್ಳುವುದು ತುಂಬ ತಡ. ಬೆಕ್ಕು ನಾಯಿ ಬೇರೆ ಪ್ರಾಣಿಗಳು ಎಂಬುದನ್ನು ನಾವು ಸುಲಭವಾಗಿ ತಿಳಿದುಕೊಳ್ಳುತ್ತೇವೆ. ಆದರೆ ಮಕ್ಕಳಾಗಿದ್ದಾಗ ನಮಗೆ ಆ ತಿಳಿವು ಅಷ್ಟು ಸುಲಭವಾಗಿರಲಿಲ್ಲ. ಮಕ್ಕಳು ಬೆಕ್ಕನ್ನು ಮೊದಲಲ್ಲಿ ಪರಿಚಯಮಾಡಿಕೊಂಡಿದ್ದು ಅನಂತರ ಒಂದು ನಾಯಿಯನ್ನು ನೋಡಿದಾಗ ಅದನ್ನು ದೊಡ್ಡ ಬೆಕ್ಕು ಎಂದು ಕರೆಯುತ್ತವೆ. ಅಥವಾ ಅವು ನಾಯಿಯನ್ನು ಮೊದಲು ಪರಿಚಯಮಾಡಿಕೊಂಡಿದ್ದು ಅನಂತರ ಬೆಕ್ಕನ್ನು ನೋಡಿದಾಗ ಅದನ್ನು ಪುಟ್ಟ ನಾಯಿ ಎಂದು ಕರೆಯುತ್ತವೆ. ಹೀಗೆ ಹೇಳಿದಾಗ ಮಕ್ಕಳಿಗೆ ಸಾಮಾನ್ಯ ಮತ್ತು ವಿಶೇಷಗಳ ಅರಿವು ಸ್ಪಷ್ಟವಾಗಿರುವುದಿಲ್ಲ. ಕಾಲ ಕ್ರಮದಲ್ಲಿ ಬೆಕ್ಕು, ನಾಯಿ ಬೇರೆ ಬೇರೆ ಎಂದು ತಿಳಿದಾಗ ವಿಶೇಷದ ಅರಿವು ಸ್ಪಷ್ಟವಾಗುತ್ತದೆ. ನಾಯಿ, ಬೆಕ್ಕು ಬೇರೆಯಾದರೂ ಅವೆರಡೂ ಪ್ರಾಣಿಗಳು

ಎಂದು ತಿಳಿದಾಗ ಮಕ್ಕಳ ಸಾಮಾನ್ಯದ ಅರಿವು ಸ್ಪಷ್ಟವಾಗಿತ್ತು. ನಾಯಿ, ಬೆಕ್ಕು ಬೇರೆ ಬೇರೆ ಎಂದು ಮಾತ್ರ ಅವು ತಿಳಿದುಕೊಂಡರೆ, ಅವುಗಳ ವೈಶಿಷ್ಟ್ಯವನ್ನು ಮಾತ್ರ ತಿಳಿದುಕೊಂಡರೆ, ಬೆಕ್ಕು ನಾಯಿಗಳ ಅರ್ಥವು ಪೂರ್ಣವಾಗಿ ತಿಳಿದಂತಾಗುವುದಿಲ್ಲ. ಅವು ಪ್ರಾಣಿಗಳು ಎಂದು ಅವುಗಳ ಸಾಮಾನ್ಯ ಗುಣವನ್ನು ಮಾತ್ರ ತಿಳಿದುಕೊಂಡಾಗಲೂ ನಾಯಿ ಬೆಕ್ಕುಗಳ ಅರ್ಥ ಪೂರ್ಣವಾಗಿ ತಿಳಿದಂತಾಗುವುದಿಲ್ಲ. ಅವೆರಡೂ ಬೇರೆಬೇರೆಯಾದರೂ ಎರಡೂ ಪ್ರಾಣಿಗಳು ಎಂದು ತಿಳಿದಾಗ ಅವೆರಡರ ಸಾಮಾನ್ಯ ಮತ್ತು ವಿಶಿಷ್ಟಗುಣಗಳೆರಡೂ ತಿಳಿದು ಅವೆರಡರ ಅರ್ಥ ಪೂರ್ಣವಾಗಿ ಬೋಧೆಯಾಗುತ್ತದೆ. ನಾವು ಯಾವುದೊಂದರ ಅರ್ಥವನ್ನು ಪೂರ್ಣವಾಗಿ ತಿಳಿಯಬೇಕಾದರೂ ನಮ್ಮ ಆಲೋಚನೆ ಸಾಮಾನ್ಯದಿಂದ ವಿಶೇಷದ ಕಡೆಗೂ ವಿಶೇಷದಿಂದ ಸಾಮಾನ್ಯದ ಕಡೆಗೂ ಹರಿಯಬೇಕು. ಆದುದರಿಂದಲೇ ಒಂದು ವಸ್ತುವಿನ ಲಕ್ಷಣನಿರೂಪಣೆ ಪೂರ್ಣವಾಗಬೇಕಾದರೆ ನಾವು ಆ ವಸ್ತುವಿಗೂ ಇತರ ವಸ್ತುಗಳಿಗೂ ಇರುವ ಸಾಮಾನ್ಯ ಲಕ್ಷಣವನ್ನೂ ಅದು ಯಾವ ಜಾತಿಗೆ ಸೇರಿದುದು ಎಂಬುದನ್ನೂ ಮತ್ತು ಅದು ಯಾವ ವೈಶಿಷ್ಟ್ಯವನ್ನು ಪಡೆದಿರುವುದರಿಂದ ಅದು ಇತರ ವಸ್ತುಗಳಿಂದ ಬೇರೆಯಾಗಿದೆ ಎಂಬುದನ್ನೂ ತಿಳಿಸಬೇಕು. ಸಾಮಾನ್ಯದಿಂದ ವಿಶೇಷದ ಕಡೆಗೆ ನಮ್ಮ ಬುದ್ಧಿ ಸಂಚರಿಸಿದಾಗ ಅದು ನಿಗಮನಕ್ರಿಯೆಯಾಗುತ್ತದೆ. ವಿಶೇಷದಿಂದ ಸಾಮಾನ್ಯದ ಕಡೆಗೆ ಹರಿದಾಗ ಅದು ಅನುಗಮನಕ್ರಿಯೆಯಾಗುತ್ತದೆ. ಬುದ್ಧಿಯ ಸಂಚಾರ ಏಮ್ಮುಖವಾಗಿ ಇರುವುದಿಲ್ಲ. ಒಮ್ಮೆ ನಿಗಮನವಾಗಿಯೂ ಇನ್ನೊಮ್ಮೆ ಅನುಗಮನವಾಗಿಯೂ ಕೆಲಸಮಾಡಿ ಪೂರ್ಣತ್ವವನ್ನು ಪಡೆಯುತ್ತದೆ. ನಮ್ಮ ತಿಳಿವಿನ ಈ ಎರಡು ಬಗೆಯಾದ ಗಮನವನ್ನು ಇನ್ನೊಂದು ಬಗೆಯಾಗಿ ವರ್ಣಿಸಬಹುದು. ನಾವು ಒಂದು ಅಪರಿಚಿತ ವಸ್ತುವನ್ನು ನೋಡಿದಾಗ ನಮಗೆ ಅದರ ಸಾಮಾನ್ಯ ಮತ್ತು ವಿಶಿಷ್ಟಸ್ವಭಾವ ಗೋಚರವಾಗಿರುವುದಿಲ್ಲ. ಆಗ ನಮ್ಮ ಅನುಭವ ನಿರ್ವಿಕಲ್ಪಕವಾಗಿರುತ್ತದೆ, ಅನಿರ್ದಿಷ್ಟವಾಗಿರುತ್ತದೆ. ಇಂಥ ಅನುಭವದಿಂದ ನಮಗೆ ತೃಪ್ತಿ ಇಲ್ಲ, ಅದನ್ನು ಸವಿಕಲ್ಪವಾಗಿ ಮಾಡಲು ನಮ್ಮ ಮನಸ್ಸು ತವಕಪಡುತ್ತದೆ. ಹೀಗೆ ವಿಕಲ್ಪವಾಗಿ ತಿಳಿಯಲು ನಾವು ಯತ್ನಿಸಿದಾಗ ನಮ್ಮ ಬುದ್ಧಿ ನಿರ್ವಿಕಲ್ಪಕ ಅನುಭವದಲ್ಲಿರುವ ಅಂಶಗಳನ್ನು ವಿಚ್ಛೇದಿಸಿ, ಬಿಡಿಸಿ ತಿಳಿಯಲು ಪ್ರಯತ್ನಪಡುತ್ತದೆ. ಈ ವಿಚ್ಛೇದನಕ್ರಿಯೆಗೆ ಅನ್ಯಾಲಿಸಿಸ್ (Analysis) ಎಂದು ಹೆಸರು. ವಿಚ್ಛೇದನದಿಂದ ನಮಗೆ ವಸ್ತುವಿನ ವೈಶಿಷ್ಟ್ಯ ವ್ಯಕ್ತವಾಗುತ್ತದೆ. ಆದರೆ ಬರಿಯ ವೈಶಿಷ್ಟ್ಯವನ್ನು ತಿಳಿದು ಅಲ್ಲಿಗೇ ನಮ್ಮ ಬುದ್ಧಿ ವಿಶ್ರಾಂತವಾಗುವುದಿಲ್ಲ

ಬಿಡಿಸಿದ ಅಂಶಗಳನ್ನು ಒಂದು ಸಾಮಾನ್ಯದ ಮೂಲಕ ಸಂಯೋಜನಗೊಳಿಸುತ್ತದೆ, ಒಂದುಗೂಡಿಸುತ್ತದೆ. ಈ ಸಂಯೋಜನ ಕ್ರಿಯೆಗೆ, ಒಂದುಗೂಡಿಸುವ ಕ್ರಿಯೆಗೆ ಸಿಂಥಿಸಿಸ್ (Synthesis) ಎಂದು ಹೆಸರು. ಇವೆರಡು ಕ್ರಿಯೆಗಳು ಜೊತೆಜೊತೆಯಲ್ಲಿ ಒಂದಕ್ಕೊಂದು ಸೇರವಾಗಿರುತ್ತದೆ. ನಾವು ವಿಶ್ಲೇಷಣೆಯ ಮೂಲಕ ಸಂಯೋಜನೆ ಮಾಡುತ್ತೇವೆ, ಸಂಯೋಜನೆಯ ಮೂಲಕ ವಿಶ್ಲೇಷಣೆ ಮಾಡುತ್ತೇವೆ. " In analysing we synthesise and in synthesising we analyse ". ವಸ್ತುಗಳು ಬೇರೆ ಬೇರೆ ಎಂಬುದನ್ನು ತಿಳಿಯಲು ನಮಗೆ ಅವು ವಸ್ತುಗಳು ಎಂಬ ಸಾಮಾನ್ಯದ ಅರಿವು ತಳಹದಿ, ಸಾಮಾನ್ಯದ ಅರಿವಿಗೆ ವಿಶೇಷಗಳು ತಳಹದಿ. ಅಂಗೈ ಮುಂಗೈ ಒಂದಕ್ಕೊಂದು ಆಶ್ರಯ; ಒಂದನ್ನು ಬಿಟ್ಟು ಇನ್ನೊಂದು ಇರಲು ಸಾಧ್ಯವಿಲ್ಲ. ಹಾಗೆಯೇ ನಮ್ಮ ತಿಳಿವಿನಲ್ಲಿ ವಿಶ್ಲೇಷಣೆ ಸಂಯೋಜನೆ ಒಂದಕ್ಕೊಂದು ಆಶ್ರಯವಾಗಿ ವಿಷಯದ ಅರ್ಥವನ್ನು ಪೂರ್ಣಮಾಡುತ್ತವೆ. ನಮ್ಮ ಬುದ್ಧಿಯ ಕ್ರಿಯೆ ಬರಿಯ ವಿಶ್ಲೇಷಣೆಯೂ ಅಲ್ಲ, ಬರಿಯ ಸಂಯೋಜನೆಯೂ ಅಲ್ಲ. ಅದು ಎರಡೂ ಆಗಿದೆ—ವಿಶ್ಲೇಷಣ ಸಂಯೋಜನ ರೂಪವಾಗಿದೆ (Analytico -synthetic).

ನಮ್ಮ ನಿತ್ಯವ್ಯವಹಾರದಲ್ಲಿಯೂ ವಿಜ್ಞಾನಶಾಸ್ತ್ರಗಳಲ್ಲಿಯೂ, ನಮ್ಮ ತಿಳಿವಿನ ಎಲ್ಲ ಹಂತಗಳಲ್ಲೂ ವಿಶ್ಲೇಷಣ ಸಂಯೋಜನ, ನಿಗಮನ ಅನುಗಮನ ಕ್ರಿಯೆಗಳು ಒಂದಕ್ಕೊಂದು ಸೇರವಾಗಿ, ಪರಸ್ಪರ ಆಶ್ರಯಗಳಾಗಿ ಇರುತ್ತವೆ. ಲಕ್ಷಣ ನಿರೂಪಣೆ, ವಿಭಜನೆ, ವರ್ಗೀಕರಣ—ಇವುಗಳನ್ನು ವಿಚಾರಮಾಡಿದಾಗ ಈ ಅಂಶವನ್ನು ಗಮನಿಸಿದೆವು. ಪ್ರತಿಜ್ಞೆಯ ಸ್ವರೂಪವನ್ನು ತಿಳಿಯುವಾಗಲೂ ಇದು ನಮ್ಮ ಗಮನಕ್ಕೆ ಬಂದಿದೆ. ಮುಂದೆ ಅನುಮಾನ ವಿಚಾರ ಬಂದಾಗಲೂ ಈ ಅಂಶ ನಮ್ಮ ಗಮನಕ್ಕೆ ಬರುತ್ತದೆ.

ವಿಶ್ಲೇಷಣ—ಸಂಯೋಜನ ಅನುಗಮನ—ನಿಗಮನಗಳ ಮೂಲಕ ಹೀಗೆ ನಾವು ವಿಷಯಗಳನ್ನು ಅರ್ಥಮಾಡಿಕೊಳ್ಳುವುದು ನಮ್ಮ ಬುದ್ಧಿಗೆ ವಿಶಿಷ್ಟವಾದ ವ್ಯಾಪಾರ. ಅದು ಸದಾ ಪ್ರತಿಜ್ಞಾರೂಪವಾಗಿರುತ್ತದೆ; ವಿಷಯಿ ವಿಶೇಷಣ (Subject-predicate) ಸಂಬಂಧ ರೂಪವಾಗಿರುತ್ತದೆ. ಯೋಚಿಸುವುದು ಎಂದರೆ—ಒಂದು ವಿಷಯ ಒಂದು ವಿಶೇಷಣವನ್ನು ಪಡೆದಿದೆ ಎಂದು ತಿಳಿಯುವುದು. ಮಾವು " ಸಿಹಿ ", " ಬೇವು ಕಹಿ " ಎಂಬ ಸಾಮಾನ್ಯ ಪ್ರತಿಜ್ಞೆಗಳಿಂದ ಹಿಡಿದು " ಪರಮಾಣುಗಳು ವಿದ್ಯುತ್ಪುಂಜಗಳು " ಎಂಬ ವೈಜ್ಞಾನಿಕ ಪ್ರತಿಜ್ಞೆಯವರೆಗೆ ಎಲ್ಲ ಪ್ರತಿಜ್ಞೆಗಳೂ ವಿಷಯಿ ವಿಶೇಷಣರೂಪವಾಗಿರುತ್ತವೆ.

ಒಂದು ವಿಷಯವನ್ನು ಒಂದು ವಿಶೇಷಣದ ಮೂಲಕ ತಿಳಿಯಲಾಗದಿದ್ದರೆ, ಅದು ತಿಳಿದ ವಿಷಯವೆಂದು ಹೇಳಲಾಗುವುದಿಲ್ಲ.

ನಾವು ನಮ್ಮ ಆಲೋಚನೆಗಳನ್ನು ಸಾಮಾನ್ಯವಾಗಿ ಮಾತಿನ ಮೂಲಕ ವ್ಯಕ್ತಪಡಿಸುತ್ತೇವೆ. ಕೆಲವು ವೇಳೆ ಅವುಗಳನ್ನು ಮಾತಿನ ಮೂಲಕ ಹೊರ ಪಡಿಸದಿರುವುದೂ ಉಂಟು. ಆದರೆ ಮಾತಿನ ಮೂಲಕ ಹೊರಬಿದ್ದ ವಿನಾ ನಮ್ಮ ಆಲೋಚನೆ ಸ್ಪಷ್ಟವಾಗುವುದಿಲ್ಲ. ಮಾತಿನ ಮೂಲಕ ಹೊರಬಿದ್ದಾಗಲೂ ಕೂಡ ಅನೇಕ ವೇಳೆ ನಮ್ಮ ಆಲೋಚನೆಯ ಅರ್ಥ ಸ್ಪಷ್ಟವಾಗಿರುವುದಿಲ್ಲ. "ಚೇಳು!" ಎಂದು ಒಬ್ಬನು ಕೂಗಿಕೊಂಡಾಗ ಅವನು ತನ್ನ ಮನಸ್ಸಿನಲ್ಲಿರುವ ಭಾವನೆಯನ್ನು ಮಾತಿನ ಮೂಲಕ ತಿಳಿಸಿದರೂ ಅದು ನಿರ್ದಿಷ್ಟವಾದ ಅರ್ಥ ಕೊಡುವುದಿಲ್ಲ. "ಚೇಳು!" ಎಂದು ಹೇಳಿದಾಗ ಅವನ "ಅರ್ಥ ಇಲ್ಲಿ ಚೇಳಿದೆ" ಎಂದಾದರೂ ಇರಬಹುದು. "ಚೇಳು ಕಡಿಯಿತು" ಎಂದಾದರೂ ಇರಬಹುದು. ನಮ್ಮ ಪ್ರತಿಜ್ಞೆಯ ಅರ್ಥ ಸ್ಪಷ್ಟವಾಗಬೇಕಾದರೆ ನಮ್ಮ ಭಾವನೆ ಗಳನ್ನು ಒಂದು ಕ್ರಮದಲ್ಲಿ ತಿಳಿಸಬೇಕು. ಮೊದಲಲ್ಲಿ ವಿಷಯಿ ನಿರ್ದೇಶಕ ಪದವಿರಬೇಕು. ಯಾವುದನ್ನು ಕುರಿತು ನಾವು ಆಲೋಚಿಸುತ್ತೇವೆಯೋ ಆ ವಿಷಯವನ್ನು ನಿರ್ದೇಶಿಸುವ ಪದ ಅಥವಾ ಪದಸಮುದಾಯ ಮೊದಲಲ್ಲಿ ಬರಬೇಕು. ಈ ಪದಕ್ಕೆ ವಿಷಯ ಎಂದು ಹೆಸರು. ಅನಂತರ ವಿಷಯಿಯ ಸ್ವರೂಪವನ್ನು ತಿಳಿಸುವ ವಿಶೇಷಣಪದ ಅಥವಾ ಪದಸಮುದಾಯ ಬರಬೇಕು. ಈ ವಿಶೇಷಣ ವಿಷಯಿಯಲ್ಲಿ ಇದೆ ಅಥವಾ ಇಲ್ಲ ಎಂದು ಸೂಚಿಸುವ ಪದವಿರಬೇಕು. ವಿಷಯಿ ಸಾಮಾನ್ಯವೇ ಅಥವಾ ಪ್ರತ್ಯೇಕವೇ ಎಂಬುದನ್ನು ಸ್ಪಷ್ಟವಾಗಿ ತಿಳಿಸುವ ಮಾತಿರಬೇಕು. ವಿಷಯಿ ಸಾಮಾನ್ಯ ವಾದರೆ ಅದರ ಹಿಂದೆ "ಎಲ್ಲ" ಎಂಬ ಪದವಿರಬೇಕು. ಹಾಗಿಲ್ಲದೆ ಅದು ಕೆಲವನ್ನು ಮಾತ್ರ ನಿರ್ದೇಶಿಸಿದರೆ ವಿಷಯಿ ಪದದ ಹಿಂದೆ "ಕೆಲವು" ಎಂಬ ಪದ ಇರಬೇಕು. "ಎಲ್ಲರೂ ಸುಖವನ್ನು ಬಯಸುವವರಾಗಿದ್ದಾರೆ." "ಕೆಲವರು ಒಳ್ಳೆಯವರಾಗಿರುತ್ತಾರೆ." "ಕೆಲವರು ಕೆಟ್ಟವರಾಗಿರುತ್ತಾರೆ." "ಯಾರೂ ಸರ್ವಜ್ಞರಾಗಿರುವುದಿಲ್ಲ." ಈ ಪ್ರತಿಜ್ಞೆಗಳು ಕ್ರಮಬದ್ಧ ವಾದುವು. ಇವುಗಳಲ್ಲಿ ವಿಷಯಿಪದ ಮೊದಲು ಬರುತ್ತದೆ. ಅನಂತರ ವಿಶೇಷಣಪದ ಬರುತ್ತದೆ. ವಿಶೇಷಣ ವಿಷಯಿಗೆ ಅನ್ವಯಿಸುತ್ತದೆ ಅಥವಾ ಇಲ್ಲ ಎಂಬುದನ್ನು "ಆಗಿರುತ್ತದೆ" "ಆಗಿರುವುದಿಲ್ಲ" ಎಂಬ ಪದಗಳು ಸೂಚಿಸುತ್ತವೆ. ವಿಷಯ ಎಲ್ಲವನ್ನೂ ನಿರ್ದೇಶಿಸುತ್ತದೆಯೆ ಅಥವಾ ಕೆಲವನ್ನು ನಿರ್ದೇಶಿಸುತ್ತದೆಯೆ ಎಂಬುದನ್ನು ತಿಳಿಸುವ "ಎಲ್ಲ," "ಕೆಲವು" ಎಂಬ

ಪದಗಳು ವಿಷಯಿಯ ಹಿಂದೆ ಇರುತ್ತವೆ. ಹೀಗೆ ಪ್ರತಿಜ್ಞೆ ಸಕ್ರಮವಾದ ಪದಗಳ ಮೂಲಕ ವ್ಯಕ್ತವಾದಾಗ ಅದಕ್ಕೆ ಪ್ರತಿಜ್ಞಾ ವಾಕ್ಯ (Proposition) ಎಂದು ಹೆಸರು. ನಾವು ಸಾಮಾನ್ಯವಾಗಿ ಪ್ರತಿಜ್ಞೆ ಎಂದರೆ ವಾಚಕವಾದ ಪ್ರತಿಜ್ಞೆಯನ್ನೇ ಕುರಿತು ಮಾತನಾಡುತ್ತೇವೆಯಾದುದರಿಂದ, ವಾಕ್ಯ ಎಂಬುದನ್ನು ಹೇಳದೆ ಅದನ್ನು ಪ್ರತಿಜ್ಞೆ ಎಂದು ಹೇಳಿಕೊಂಡು ಹೋಗುವುದು ರೂಢಿ. ಇನ್ನುಮೇಲೆ ನಾವು ಪ್ರತಿಜ್ಞೆ ಎಂದು ಹೇಳಿದಾಗ ನಾವು ವಾಚಕವಾದ ಪ್ರತಿಜ್ಞೆಯನ್ನು ಕುರಿತು ಮಾತನಾಡುತ್ತಿರುವೆವೆಂದು ತಿಳಿದುಕೊಳ್ಳಬೇಕು.

ಪ್ರತಿಜ್ಞೆಗಳು ಹಲವು ಬಗೆಯಾಗಿವೆ. ಇವುಗಳನ್ನು ವಿಧವಿಧವಾಗಿ ವಿಂಗಡಿಸಿರುತ್ತಾರೆ. ಈ ವಿಂಗಡಣೆಗಳನ್ನು ಒಂದೊಂದಾಗಿ ಪರಿಚಯಮಾಡಿಕೊಳ್ಳೋಣ. ಪ್ರತಿಜ್ಞೆಗಳನ್ನು ನಿರುಪಾಧಿಕ (Categorical) ಔಪಾಧಿಕ (Hypothetical) ಮತ್ತು ಪಕ್ಷಾಂತರ (Disjunctive) ಎಂದು ವಿಂಗಡಿಸುವುದು ಒಂದು ಬಗೆ. ಯಾವದೊಂದು ಷರತ್ತೂ ಇಲ್ಲದೆ ಒಂದು ವಿಷಯಿ ಒಂದು ವಿಶೇಷಣವನ್ನು ಪಡೆದಿದೆ ಅಥವಾ ಇಲ್ಲ ಎಂದು ನಿಶ್ಚಿತವಾಗಿ, ಖಂಡಿತವಾಗಿ ಹೇಳುವುದು ನಿರುಪಾಧಿಕಪ್ರತಿಜ್ಞೆ. "ಇದು ತ್ರಿಭುಜವಾಗಿದೆ" ಎಂಬ ಪ್ರತಿಜ್ಞೆ ನಿರುಪಾಧಿಕ ಪ್ರತಿಜ್ಞೆ. ಇದು ತ್ರಿಭುಜ ಎಂದು ಈ ಪ್ರತಿಜ್ಞೆ ನಿಶ್ಚಿತವಾಗಿ ಅಂದರೆ ಯಾವದೊಂದು ಸಂದೇಹಕ್ಕೂ ಎಡೆಗೊಡದೆ ತಿಳಿಸುತ್ತದೆ. ನೇರವಾದ ಒಂದು ಉಪಾಧಿಗೆ ಒಳಪಟ್ಟು ಒಂದು ವಿಷಯಿ ಒಂದು ವಿಶೇಷಣವನ್ನು ಪಡೆದಿದೆ ಎಂದು ಪ್ರತಿಜ್ಞೆ ಮಾಡಿದಾಗ ಅದು ಔಪಾಧಿಕಪ್ರತಿಜ್ಞೆಯಾಗುತ್ತದೆ. "ಒಂದು ಕ್ಷೇತ್ರ ಮೂರು ನೇರವಾದ ರೇಖೆಗಳಿಂದ ಆವೃತವಾಗಿದ್ದರೆ ಅದು ಮೂರು ಕೋನಗಳುಳ್ಳದ್ದಾಗಿರುತ್ತದೆ" ಎಂಬ ಪ್ರತಿಜ್ಞೆ ಔಪಾಧಿಕವಾದದ್ದು. "ಇದ್ದರೆ" ಎಂಬುದು ಉಪಾಧಿಸೂಚಕ ಪದ. ವಿಷಯ ಎರಡು ಅಥವ ಅದಕ್ಕಿಂತ ಹೆಚ್ಚಿನ ಪಕ್ಷಗಳನ್ನು ಪಡೆದಿರುವುದೆಂಬುದನ್ನು ತಿಳಿಸುವ ಪ್ರತಿಜ್ಞೆ ಪಕ್ಷಾಂತರಪ್ರತಿಜ್ಞೆ. "ಒಂದು ತ್ರಿಭುಜ ಮೂರು ಸಮಾನ ಭುಜಗಳನ್ನು ಪಡೆದಿರುತ್ತದೆ, ಅಥವಾ ಎರಡು ಸಮನಾದ ಭುಜಗಳನ್ನು ಅಥವಾ ಮೂರು ಅಸಮನಾದ ಭುಜಗಳನ್ನು ಪಡೆದಿರುತ್ತದೆ" ಎಂದು ಹೇಳಿದಾಗ ಆ ಪ್ರತಿಜ್ಞೆ ತ್ರಿಭುಜದ ಮೂರು ಪಕ್ಷಗಳನ್ನು ತಿಳಿಸುತ್ತದೆ. ಅವನು ಬುದ್ಧಿವಂತನಾದರೆ ಇದ್ದ ಸ್ಥಳದಲ್ಲೇ ಹೊಂದಿಕೊಂಡು ಹೋಗುತ್ತಾನೆ, ಅಥವಾ ಅನುಕೂಲವಾದ ಬೇರೆ ಸ್ಥಳವನ್ನು ಹುಡುಕಿಕೊಂಡು ಹೋಗುತ್ತಾನೆ, ಈ ಪ್ರತಿಜ್ಞೆ ಎರಡು ಪಕ್ಷ (Alternatives) ಗಳನ್ನು ತಿಳಿಸುತ್ತದೆ.

ಕ್ರಿಯಾನಿರ್ದೇಶನ ರೀತಿ (Modality) ಯನ್ನು ಅನುಸರಿಸಿ, ಪ್ರತಿಜ್ಞೆಗಳನ್ನು ವಿಂಗಡಿಸಬಹುದು. ಇಂಥಾ ಪ್ರತಿಜ್ಞೆಗಳಿಗೆ ರೀತಿನಿರ್ದೇಶಕ ಪ್ರತಿಜ್ಞೆಗಳು (Judgements of Modality) ಎಂದು ಹೆಸರು. ಒಂದು ವಿಷಯಿ ಒಂದು ವಿಶೇಷಣವನ್ನು ಪಡೆದಿರುತ್ತದೆ ಅಥವಾ ಪಡೆದಿರಬಹುದು, ಅಥವಾ ಪಡೆದಿರಬೇಕು ಎಂದು ಮೂರು ರೀತಿಯಲ್ಲಿ ತಿಳಿಸಬಹುದು. ಪಡೆದಿದೆ ಎಂದು ಹೇಳುವ ಪ್ರತಿಜ್ಞೆ ದೃಢಪ್ರತಿಜ್ಞೆ (Asertoric Judgement). "ಅವನು ಮನೆಯಲ್ಲಿದ್ದಾನೆ" ಎಂಬುದು ದೃಢಪ್ರತಿಜ್ಞೆ. "ಅವನು ಮನೆಯಲ್ಲಿರಬಹುದು" ಎಂಬ ಪ್ರತಿಜ್ಞೆ ಸಂಭಾವನಾಪ್ರತಿಜ್ಞೆ (Problematic Judgement). ಅದು ಸಂಶಯ ಸೂಚಿಸುವ ಪ್ರತಿಜ್ಞೆ; ಇರಬಹುದು ಎಂದು ಹೇಳಿದಾಗ ಇಲ್ಲದೆಯೂ ಇರಬಹುದು ಎಂಬ ಭಾವ ಅದರ ಹಿಂದೆ ಅಡಗಿದೆ. "ಅವನು ಮನೆಯಲ್ಲಿರಬೇಕು" ಎಂಬುದು ಆವಶ್ಯಕಪ್ರತಿಜ್ಞೆ (Necessary Judgement). ಈ ಪ್ರತಿಜ್ಞೆ ಅವನು ಅಲ್ಲಿ ಇರಬೇಕಾದದ್ದು ಅಗತ್ಯ ಎಂದು ತಿಳಿಸುತ್ತದೆ. ಮೊದಲನೆಯ ಪ್ರತಿಜ್ಞೆ ನೋಡಿ ತಿಳಿದ ವಾಸ್ತವ ವಿಷಯವನ್ನು ಹೇಳುತ್ತದೆ. ಎರಡನೆಯ ಪ್ರತಿಜ್ಞೆಯ ವಿಷಯ ನೋಡಿ ತಿಳಿದ ವಿಷಯವಲ್ಲ; ಅದು ಊಹೆ. ಮೂರನೆಯದರ ವಿಷಯ ನೋಡಿ ತಿಳಿದ ವಿಷಯವೂ ಅಲ್ಲ, ಊಹೆಯೂ ಅಲ್ಲ; ಅದು ಅಗತ್ಯಸಂಬಂಧ ಬೋಧಕ; ಅವನು ಮನೆಯಲ್ಲಿರಬೇಕಾದ ಕಾರಣವನ್ನು ತಿಳಿದು ಅದರ ಆಧಾರದ ಮೇಲೆ ಮಾಡಿದ ಪ್ರತಿಜ್ಞೆ. ಅವನಿಗೆ ವಿಶಿಷ್ಟವಾದ ಧ್ವನಿಯನ್ನು ಕೇಳಿ ಅವನು ಮನೆಯಲ್ಲಿದ್ದಾನೆ ಎಂದು ನಿಶ್ಚಯಿಸಬಹುದು. ಇದು ಅವನದೇ ಧ್ವನಿ. ಆದ್ದರಿಂದ ಅವನು ಮನೆಯಲ್ಲಿರಬೇಕು. ತಾರ್ಕಿಕ ಆವಶ್ಯಕತೆ (Logical necessity) ಈ ಪ್ರತಿಜ್ಞೆಯ ಆಧಾರ.

ಪ್ರತಿಜ್ಞೆಗಳನ್ನು ಮೂರನೆಯದೊಂದು ಬಗೆಯಾಗಿ ವಿಂಗಡಿಸುವುದುಂಟು. ಈ ವಿಂಗಡಣೆಗೆ ಪ್ರತಿಜ್ಞೆಯ ಎರಡು ಅಂಶಗಳಿಗಿರುವ ಸಂಬಂಧ ಆಧಾರ ಸೂತ್ರ. ಇಂಥ ಪ್ರತಿಜ್ಞೆಗಳನ್ನು ಸಂಬಂಧಪ್ರತಿಜ್ಞೆಗಳು (Relational Propositions) ಎಂದು ಕರೆಯುವುದು ವಾಡಿಕೆಯಾಗಿದೆ. ಈ ಪ್ರತಿಜ್ಞೆಗಳಲ್ಲಿ ವಿಷಯಿ ವಿಶೇಷಣಗಳಿಗೆ ಪ್ರಾಧಾನ್ಯವಿಲ್ಲ; ಸಂಬಂಧಕ್ಕೆ ಪ್ರಾಧಾನ್ಯ. ಈ ಸಂಬಂಧಪ್ರತಿಜ್ಞೆಗಳಿಗೆ ಸಮಾನತೆ, ಅಸಮಾನತೆ, ವಿಪರ್ಯಯ ಸಂಬಂಧಗಳು ಆಧಾರ. "'A'ಯು 'B'ಗೆ ಸಮ." "'B'ಯು 'A'ಗೆ ಸಮ." ಇಲ್ಲಿ ಹೇಳಿರುವ ಸಂಬಂಧ ಸಮಾನತೆ. ಇದಕ್ಕೆ ಸಿಮೆಟ್ರಿಕಲ್ ಪ್ರಾಪೋಜಿಷನ್ (Symmetrical Proposition) ಎಂದು ಹೆಸರು. "'A'ಯು

'B' ಗಿಂತ ದೊಡ್ಡದು," "'B'ಯು 'A' ಗಿಂತ ಚಿಕ್ಕದು" ಎಂಬ ಪ್ರತಿಜ್ಞೆಗೆ ಅಸಮಾನತೆಯ ಪ್ರತಿಜ್ಞೆ, ಅಸಿಮೆಟ್ರಿಕಲ್ ಪ್ರಾಪೊಜಿಷನ್ (Asymmetrical Proposition) ಎಂದು ಹೆಸರು. "'A'ಯು 'B'ಯ ಹಿಂದೆ ಇದೆ," "'B'ಯು 'C'ಯ ಹಿಂದೆ ಇದೆ," "'A'ಯು 'C'ಯ ಹಿಂದೆ ಇದೆ"—ಎಂಬ ಪ್ರತಿಜ್ಞೆಗೆ ಟ್ರಾನ್ಸಿಟಿವ್ ಪ್ರಾಪೊಜಿಷನ್ (Transitive Proposition) ಎಂದು ಹೆಸರು. "'A'ಯು 'B'ಯ ತಂದೆ," "'B'ಯು 'C'ಯ ತಂದೆ," "'A'ಯು 'C'ಯ ತಂದೆಯಲ್ಲ" ಎಂಬ ಪ್ರತಿಜ್ಞೆಗೆ ಇನ್‌ಟ್ರಾನ್ಸಿಟಿವ್ ಪ್ರಾಪೊಜಿಷನ್ (Intransitive Proposition) ಎಂದು ಹೆಸರು. "'A'ಯು 'B' ಗಿಂತ ದೊಡ್ಡದು," "'B'ಯು 'A' ಗಿಂತ ಸಣ್ಣದು" ಎಂಬ ಪ್ರತಿಜ್ಞೆಗೆ ವಿಪರ್ಯಯ ಸಂಬಂಧ (Converse relation) ಆಧಾರ. ಇದಕ್ಕೆ ವಿಪರ್ಯಯಪ್ರತಿಜ್ಞೆ, ಕಾನ್‌ವರ್ಸ್ ಪ್ರಾಪೊಜಿಷನ್ (Converse Proposition) ಎಂದು ಹೆಸರು.

ಪ್ರತಿಜ್ಞೆಗಳನ್ನು ಪೂರ್ಣಾನ್ವಯಪ್ರತಿಜ್ಞೆ (Universal Proposition) ಭಾಗಾನ್ವಯಪ್ರತಿಜ್ಞೆ (Particular Proposition) ಎಂದೂ, ಅಸ್ತ್ಯರ್ಥಕ ಪ್ರತಿಜ್ಞೆ (Affirmative Proposition) ನೇತ್ಯರ್ಥಕಪ್ರತಿಜ್ಞೆ (Negative Proposition) ಎಂದೂ ವಿಂಗಡಿಸುವುದು ಸಾಮಾನ್ಯವಾಗಿ ತುಂಬ ಬಳಕೆಯಲ್ಲಿರುವ ವಿಂಗಡನೆ. ಒಂದು ವಿಶೇಷಣ ಒಂದು ವಿಷಯಕ್ಕೆ ಪೂರ್ಣವಾಗಿ ಅಂದರೆ ಅದು ನಿರ್ದೇಶಿಸುವ ಎಲ್ಲಕ್ಕೂ ಅನ್ವಯವಾಗಬಹುದು ಅಥವಾ ಅದು ನಿರ್ದೇಶಿಸುವ ಕೆಲವಕ್ಕೆ ಮಾತ್ರ ಅನ್ವಯವಾಗಬಹುದು. ಅದು ವಿಷಯಿಗೆ ಅಸ್ತ್ಯರ್ಥದಲ್ಲಿ (Affirmatively) ಅನ್ವಯವಾಗಬಹುದು ಅಥವಾ ನೇತ್ಯರ್ಥಕದಲ್ಲಿ (Negatively) ಅನ್ವಯವಾಗಬಹುದು. ಈ ಎರಡು ವಿಧವಾದ ಅನ್ವಯಗಳು ಒಂದನ್ನು ಬಿಟ್ಟು ಒಂದು ಇರುವುದಿಲ್ಲ. ಪೂರ್ಣಾನ್ವಯ ಅಸ್ತ್ಯರ್ಥಕವಾಗಿರಬೇಕು ಇಲ್ಲವೆ ನೇತ್ಯರ್ಥಕವಾಗಿರಬೇಕು. ಹಾಗೆಯೇ ಭಾಗಾನ್ವಯವೂ ಅಸ್ತ್ಯರ್ಥಕವಾಗಿರಬೇಕು, ಇಲ್ಲವೆ ನೇತ್ಯರ್ಥಕವಾಗಿರಬೇಕು. ಈ ಎರಡು ಬಗೆಯಾದ ಅನ್ವಯಗಳೂ ಸೇರಿ ಪ್ರತಿಜ್ಞೆಗಳು ನಾಲ್ಕು ಬಗೆಯಾಗಿರುತ್ತವೆ. ಪೂರ್ಣಾನ್ವಯ ಅಸ್ತ್ಯರ್ಥಕಪ್ರತಿಜ್ಞೆ (Universal Affirmative) ಪೂರ್ಣಾನ್ವಯನೇತ್ಯರ್ಥಕಪ್ರತಿಜ್ಞೆ (Universal Negative), ಭಾಗಾನ್ವಯ ಅಸ್ತ್ಯರ್ಥಕಪ್ರತಿಜ್ಞೆ (Particular Affirmative) ಭಾಗಾನ್ವಯನೇತ್ಯರ್ಥಕಪ್ರತಿಜ್ಞೆ (Particular Negative).

೧. ಎಲ್ಲ 'S'ಗಳು 'P'ಗಳಾಗಿರುತ್ತವೆ. ಎಲ್ಲ ಮಾನವರೂ ಮರ್ತ್ಯರಾಗಿರುತ್ತಾರೆ. (ಪೂರ್ಣಾನ್ವಯ ಅಸ್ತ್ಯರ್ಥಕ.)

೨. 'S' ಯಾವುದು 'P' ಆಗಿರುವುದಿಲ್ಲ. ಯಾವ ಮನುಷ್ಯನೂ ಸರ್ವಜ್ಞನಲ್ಲ (ಪೂರ್ಣಾನ್ವಯ ನೇತ್ಯರ್ಥಕ.)

೩. ಕೆಲವು 'S'ಗಳು 'P'ಗಳಾಗಿರುತ್ತವೆ. ಕೆಲವು ಮನುಷ್ಯರು ಸೋಮಾರಿಗಳಾಗಿರುತ್ತಾರೆ. (ಭಾಗಾನ್ವಯ ಅಸ್ತ್ಯರ್ಥಕ.)

೪. ಕೆಲವು 'S' ಗಳು 'P'ಗಳಾಗಿರುವುದಿಲ್ಲ. ಕೆಲವು ಮನುಷ್ಯರು ಮದುವೆ ಆಗದವರು. (ಭಾಗಾನ್ವಯ ನೇತ್ಯರ್ಥಕ.)

ಇವುಗಳು ಸೂಚಿಸುವ ಅನ್ವಯವನ್ನು ಚಿತ್ರರೂಪದಲ್ಲಿ ಹೀಗೆ ತಿಳಿಸಬಹುದು:




ಎಲ್ಲ ಮನುಷ್ಯರೂ ಸಾವುಳ್ಳವರು

ಈ ಚಿತ್ರದಲ್ಲಿ 'ಮಾನವರು' ಎಂಬ ವರ್ಗವನ್ನು ಪೂರ್ಣವಾಗಿ ಸಣ್ಣ ವರ್ತುಳ ನಿರ್ದೇಶಿಸುತ್ತದೆ. 'ಸಾವುಳ್ಳವರು' ಎಂಬ ವರ್ಗವನ್ನು ಪೂರ್ಣವಾಗಿ ದೊಡ್ಡ ವರ್ತುಳ ನಿರ್ದೇಶಿಸುತ್ತದೆ. ಮಾನವವರ್ಗ ಪೂರ್ಣವಾಗಿ ಸಾವುಳ್ಳವರ ವರ್ಗದಲ್ಲಿ ಸೇರಿದೆ. ಇದು ಪೂರ್ಣಾನ್ವಯ ಅಸ್ತ್ಯರ್ಥಕಪ್ರತಿಜ್ಞೆಯನ್ನು ಸೂಚಿಸುವ ಚಿತ್ರ.




ಹಕ್ಕಿಗಳು ಸಸ್ತನಿಗಳಲ್ಲ

ಇಲ್ಲಿ 'ಹಕ್ಕಿಗಳು' ಎಂಬ ವರ್ಗವನ್ನು ಸೂಚಿಸುವ ವರ್ತುಳ 'ಸಸ್ತನಿಗಳು' ಎಂಬ ವರ್ಗವನ್ನು ಸೂಚಿಸುವ ವರ್ತುಳಕ್ಕೆ ಹೊರತಾಗಿದೆ. ಒಂದು ಇನ್ನೊಂದನ್ನು ಪೂರ್ಣವಾಗಿ ಬಹಿಷ್ಕರಿಸುತ್ತದೆ. ಇದು ಪೂರ್ಣಾನ್ವಯ ನೇತ್ಯರ್ಥಕ ಪ್ರತಿಜ್ಞೆಯನ್ನು ಸೂಚಿಸುವ ಚಿತ್ರ.




ಕೆಲವು ಕೋಳಿಗಳು ಬೆಳ್ಳಗಿರುತ್ತವೆ

ಇಲ್ಲಿ 'ಕೋಳಿಗಳು' ಎಂಬ ವರ್ಗಸೂಚಕ ವರ್ತುಳದ ಗೆರೆಯೆಳೆದಿರುವ ಸ್ವಲ್ಪ

ಭಾಗ ಮಾತ್ರ 'ಬೆಳ್ಳಗಿರುವುವು' ಎಂಬ ವರ್ಗಸೂಚಕ ವರ್ತುಳದಲ್ಲಿ ಸೇರಿದೆ. ಇದು ಭಾಗಾನ್ವಯ ಅಸ್ತ್ಯರ್ಥಕಪ್ರತಿಜ್ಞೆಯನ್ನು ಸೂಚಿಸುವ ಚಿತ್ರ.




ಕೆಲವು ಲೋಹಗಳು ಬೆಳ್ಳಗಿರುವ ವಸ್ತುಗಳಲ್ಲ

'ಲೋಹಗಳು' ಎಂಬುದನ್ನು ಸೂಚಿಸುವ ವರ್ತುಳದಲ್ಲಿ ಗೆರೆಯೆಳೆದಿರುವ ಭಾಗ 'ಬೆಳ್ಳಗಿರುವ ವಸ್ತುಗಳು' ಎಂಬುದನ್ನು ಸೂಚಿಸುವ ವರ್ತುಳದಿಂದ ಹೊರಗೆ ಇದೆ. ಈ ಭಾಗ ಬೆಳ್ಳಗಿಲ್ಲದ ಲೋಹಗಳನ್ನು ಸೂಚಿಸುತ್ತದೆ. ಇದು ಭಾಗಾನ್ವಯ ನೇತ್ಯರ್ಥಕ ಪ್ರತಿಜ್ಞೆಯನ್ನು ಸೂಚಿಸುವ ಚಿತ್ರ.

ಪಾಶ್ಚಾತ್ಯ ತಾರ್ಕಿಕರು ಈ ನಾಲ್ಕು ವಿಧವಾದ ಪ್ರತಿಜ್ಞೆಗಳನ್ನು ಕೆಲವು ಸಂಜ್ಞೆಗಳ ಮೂಲಕ ನಿರೂಪಿಸುವುದು ವಾಡಿಕೆ. ಪೂರ್ಣಾನ್ವಯ ಅಸ್ತ್ಯರ್ಥಕ ಪ್ರತಿಜ್ಞೆಯನ್ನು 'A' ಪ್ರತಿಜ್ಞೆ ಎಂದೂ ಪೂರ್ಣಾನ್ವಯನೇತ್ಯರ್ಥಕ ಪ್ರತಿಜ್ಞೆಯನ್ನು 'E' ಪ್ರತಿಜ್ಞೆಯೆಂದೂ ಭಾಗಾನ್ವಯ ಅಸ್ತ್ಯರ್ಥಕ ಪ್ರತಿಜ್ಞೆಯನ್ನು 'I' ಪ್ರತಿಜ್ಞೆಯೆಂದೂ ಭಾಗಾನ್ವಯ ನೇತ್ಯರ್ಥಕ ಪ್ರತಿಜ್ಞೆಯನ್ನು 'O' ಪ್ರತಿಜ್ಞೆಯೆಂದೂ ಸಂಜ್ಞಾರೂಪವಾಗಿ ತಿಳಿಸುತ್ತಾರೆ. ಈ ವಿಧವಾದ ಸಂಜ್ಞಾ ನಿರೂಪಣೆ ವಿಷಯವನ್ನು ಸಂಗ್ರಹವಾಗಿ ತಿಳಿಸಲು ಅನುಕೂಲವಾಗಿರುತ್ತದೆ.

ಹಾಗೆಯೇ ವಿಷಯಿಯನ್ನು S ಎಂಬ ಅಕ್ಷರದ ಮೂಲಕವೂ ವಿಶೇಷಣ ವನ್ನು P ಎಂಬ ಅಕ್ಷರದ ಮೂಲಕವೂ ಸೂಚಿಸುತ್ತಾರೆ. ಎಲ್ಲ ಮಾನವರೂ ಮರ್ತ್ಯರು ಎಂಬ ಪ್ರತಿಜ್ಞೆಯನ್ನು ಸಂಜ್ಞಾರೂಪದಲ್ಲಿ ತಿಳಿಸಿದಾಗ SAP ಎಂದು ಆಗುತ್ತದೆ. ಯಾವ ಮನುಷ್ಯನೂ ಸರ್ವಜ್ಞನಲ್ಲ ಎಂಬ ಪ್ರತಿಜ್ಞೆಯ

ಸಂಜ್ಞಾರೂಪ SEP. ಕೆಲವು ಮನುಷ್ಯರು ಸೋಮಾರಿಗಳು ಎಂಬ ಪ್ರತಿಜ್ಞೆಯ ಸಂಜ್ಞಾರೂಪ SIP. ಕೆಲವು ಮನುಷ್ಯರು ಮದುವೆಯಾದವರಲ್ಲ ಎಂಬುದರ ಸಂಜ್ಞಾರೂಪ SOP.

ವ್ಯವಹಾರದಲ್ಲಿ ನಾವು ಉಪಯೋಗಿಸುವ ವಾಕ್ಯಗಳು ಪ್ರತಿಜ್ಞಾ ವಾಕ್ಯರೂಪದಲ್ಲಿರುವುದಿಲ್ಲ. ಅವುಗಳನ್ನು ತರ್ಕಬದ್ಧವಾಗಿ ನಿರೂಪಿಸಲು ಕೆಲವು ನಿಯಮಗಳನ್ನು ಅನುಸರಿಸಬೇಕು.

೧. ವಿಷಯಸೂಚಕಪದ ಅಂದರೆ ವಿಷಯಿಪದವನ್ನೂ, ವಿಶೇಷಣ ಸೂಚಕ ಪದವನ್ನೂ ಒಂದು ಅಥವಾ ಹಲವು ಮಾತುಗಳಲ್ಲಿ ಒಂದು ಕ್ರಮದಲ್ಲಿ ಸ್ಪಷ್ಟವಾಗಿ ತಿಳಿಸಬೇಕು. ವಿಷಯಿಪದ ಮೊದಲು ಬರಬೇಕು ಅನಂತರ ವಿಶೇಷಣ ಪದ ಬರಬೇಕು. ಒಂದು ವೇಳೆ ಒಂದು ವಾಕ್ಯದಲ್ಲಿ ವಿಷಯಿಪದ ಅಧ್ಯಾಹಾರವಾಗಿದ್ದಾಗ ಅದನ್ನು ಕಂಡುಹಿಡಿದು ತಿಳಿಸಬೇಕು. ಒಂದು ವಾಕ್ಯದಲ್ಲಿ ಪದಗಳು ತಿರುಗುಮರುಗಾಗಿ ಇದ್ದಾಗ ಅವುಗಳನ್ನು ಸರಿಯಾದ ಕ್ರಮದಲ್ಲಿ ತಿಳಿಸಬೇಕು. "ಮಳೆಯಾಗಿದೆ" ಎಂಬ ವಾಕ್ಯವನ್ನು ಪ್ರತಿಜ್ಞಾ ವಾಕ್ಯರೂಪದಲ್ಲಿ ಹೇಳಬೇಕಾದಾಗ, ಎಲ್ಲಿ ಮಳೆಯಾಗಿದೆ ಎಂಬುದನ್ನು ಪ್ರತಿಜ್ಞಾವಾಕ್ಯದಲ್ಲಿ ತಿಳಿಸಬೇಕು. "ಬಂದಿತು ಮಧುಮಾಸ" ಎಂಬ ವಾಕ್ಯದಲ್ಲಿ ವಿಷಯಪದ ಕೊನೆಯಲ್ಲಿದೆ ; ಅದು ಮೊದಲು ಬರಬೇಕು. "ಮಧುಮಾಸ ಈಗ ಹುಟ್ಟಿದೆ" ಎಂದು ಪ್ರತಿಜ್ಞಾವಾಕ್ಯರೂಪದಲ್ಲಿ ತಿಳಿಸಬೇಕು. "ರಾಮಕೃಷ್ಣರು ವಿಷ್ಣುವಿನ ಅವತಾರಗಳು" ಎಂಬ ವಾಕ್ಯದಲ್ಲಿ ವಿಷಯಪದ ಸಂಯುಕ್ತಪದ. ಆದ್ದರಿಂದ ಈ ವಾಕ್ಯವನ್ನು ಎರಡು ಪ್ರತಿಜ್ಞಾವಾಕ್ಯಗಳಾಗಿ ಒಡೆಯಬೇಕು. "ರಾಮ ವಿಷ್ಣುವಿನ ಅವತಾರ", "ಕೃಷ್ಣ ವಿಷ್ಣುವಿನ ಅವತಾರ."

೨ ಪ್ರತಿಜ್ಞಾವಾಕ್ಯದ ವಿಷಯ ಪೂರ್ಣಾರ್ಥಕವೋ ಭಾಗಾರ್ಥಕವೋ ಎಂಬುದನ್ನು 'ಎಲ್ಲ,' ಅಥವಾ 'ಕೆಲವು' ಎಂಬ ಪದಗಳ ಮೂಲಕ ತಿಳಿಸಬೇಕು. "ಮಾನವರು ಮರ್ತ್ಯರು" ಎಂಬುದನ್ನು "ಎಲ್ಲ ಮಾನವರು ಮರ್ತ್ಯರು ಆಗಿರುತ್ತಾರೆ" ಎಂದು ಪ್ರತಿಜ್ಞಾ ವಾಕ್ಯರೂಪಕ್ಕೆ ತಿರುಗಿಸಬೇಕು.

೩. ಪ್ರತಿಜ್ಞೆಯು ಅಸ್ತ್ಯರ್ಥಕವೋ ನೇತ್ಯರ್ಥಕವೋ ಎಂಬುದನ್ನು 'ಇದೆ' 'ಇಲ್ಲ', 'ಆಗಿದೆ' 'ಆಗಿಲ್ಲ' ಎಂಬ ಮಾತುಗಳಿಂದ ವಿಶದಪಡಿಸಬೇಕು. "ಮಾನವರು ಮರ್ತ್ಯರು" ಎಂಬ ವಾಕ್ಯದಲ್ಲಿ ಅಸ್ತ್ಯರ್ಥಕ ಪದವಿಲ್ಲ. ಅದಕ್ಕೆ "ಆಗಿದ್ದಾರೆ" ಎಂಬುದನ್ನು ಸೇರಿಸಿದಾಗ ಅಸ್ತ್ಯರ್ಥವಾಚಕವಾಗುತ್ತದೆ.

೪. 'ಎಲ್ಲವೂ ಅಲ್ಲ' ಎಂದು ಒಂದು ವಾಕ್ಯದಲ್ಲಿ ಬಂದಾಗ ಅದಕ್ಕೆ 'ಕೆಲವು ಅಲ್ಲ' ಎಂದು ಹೇಳಿ ಅರ್ಥ ಸ್ಪಷ್ಟಪಡಿಸಬೇಕು. "ಎಲ್ಲ ಬಲ್ಲವರಿಲ್ಲ"

"ಎಲ್ಲರೂ ಬಲ್ಲವರಲ್ಲ" ಎಂಬ ವಾಕ್ಯಗಳನ್ನು ಪ್ರತಿಜ್ಞಾವಾಕ್ಯಗಳಾಗಿ ಪರಿವರ್ತಿಸಿದಾಗ "ಕೆಲವು ವಿಷಯುಗಳು ತಿಳಿದ ವಿಷಯಗಳಲ್ಲ", "ಕೆಲವರು ತಿಳಿದವರಲ್ಲ" ಎಂದು ಆಗುತ್ತವೆ.

೫. ವಾಕ್ಯದಲ್ಲಿ 'ಮಾತ್ರ,' "'ವಿನಾ' ಎಂಬ ಪದಗಳು ಇದ್ದಾಗ ಅವುಗಳ ಅರ್ಥವನ್ನು ವಿಶದಪಡಿಸಬೇಕು. ತಪ್ಪಿತಸ್ಥರು ಮಾತ್ರ ನ್ಯಾಯಾಧೀಶನಿಗೆ ಹೆದರುತ್ತಾರೆ." "ಪೌರರು ಮಾತ್ರ ಆಸ್ತಿಯನ್ನು ಪಡೆಯುವ ಹಕ್ಕುಳ್ಳವರಾಗಿರುತ್ತಾರೆ." "ಕೆಲಸವಿದ್ದವನಿಗೆ ವಿನಾ ಪ್ರವೇಶವಿಲ್ಲ." 'ತಪ್ಪಿತಸ್ಥರು ಮಾತ್ರ' ಎಂದು ಹೇಳಿದಾಗ ಬಹಿಷ್ಕರಣ (Exclusion) 'ಮಾತ್ರ' ಪದದ ಉದ್ದೇಶ. ಆದ್ದರಿಂದ ನಾವು ಆ ಅರ್ಥವನ್ನು ಪ್ರತಿಜ್ಞಾವಾಕ್ಯದಲ್ಲಿ ಸ್ಪಷ್ಟಪಡಿಸಬೇಕು. ಹೀಗೆ ಸ್ಪಷ್ಟಪಡಿಸಿದಾಗ "ತಪ್ಪಿತಸ್ಥನಲ್ಲದ ಯಾವನೂ ನ್ಯಾಯಾಧೀಶನಿಗೆ ಹೆದರುವವನಲ್ಲ." "ಪೌರನಲ್ಲದ ಯಾವನೂ ಆಸ್ತಿ ಪಡೆಯಲಾರ." "ಕೆಲಸವಿಲ್ಲದವನಿಗೆ ಪ್ರವೇಶ ಇಲ್ಲ."

## ಅಭ್ಯಾಸಗಳು (೪)

೧. 'ಪ್ರತಿಜ್ಞೆ' ಎಂದರೆ ಏನು? ಪ್ರತಿಜ್ಞಾವಾಕ್ಯಕ್ಕೂ ಬರಿಯ ವಾಕ್ಯಕ್ಕೂ ವ್ಯತ್ಯಾಸವೇನು?

೨. ಪ್ರತಿಜ್ಞೆಗಳಲ್ಲಿ 'ವಿಶೇಷ್ಯ' 'ವಿಶೇಷಣ'ಗಳ ಪಾತ್ರವೇನು?

೩. ಪ್ರತಿಜ್ಞೆಯ ತಾರ್ಕಿಕರೂಪವೆಂದರೆ ಏನು?

೪. ಒಂದು ಪ್ರತಿಜ್ಞಾವಾಕ್ಯದಲ್ಲಿ ಒಂದು ಪದ ಪೂರ್ಣನಿರ್ದೇಶನವ್ಯಾಪ್ತಿ ಪಡೆದಿದೆ ಅಥವಾ ಇಲ್ಲ ಎಂಬುದನ್ನು ತಿಳಿಯುವುದು ಹೇಗೆ? A E I ಮತ್ತು O ಗಳಲ್ಲಿ ಯಾವ ಪದಗಳಿಗೆ ಪೂರ್ಣನಿರ್ದೇಶನವ್ಯಾಪ್ತಿ ಇದೆ?

೫. ನಿರುಪಾಧಿಕ, ಸೋಪಾಧಿಕ ಮತ್ತು ಪಕ್ಷಾಂತರ ಪ್ರತಿಜ್ಞೆಗಳಿಗಿರುವ ವ್ಯತ್ಯಾಸವನ್ನು ಉದಾಹರಣೆಗಳ ಸಹಿತವಾಗಿ ತಿಳಿಸಿ.

೬. ಕೆಳಗೆ ಕೊಟ್ಟಿರುವ ವಾಕ್ಯಗಳನ್ನು ಪ್ರತಿಜ್ಞಾವಾಕ್ಯರೂಪದಲ್ಲಿ ತಿಳಿಸಿ. ಅವು ಯಾವ ಬಗೆಯ ಪ್ರತಿಜ್ಞೆಗಳು ಎಂಬುದನ್ನು A E I O ಸಂಜ್ಞೆಗಳ ಮೂಲಕ ಸ್ಪಷ್ಟಪಡಿಸಿ.

(೧) ರಂಜಕ ನೀರಿನಲ್ಲಿ ಕರಗುವುದಿಲ್ಲ.
(೨) ಅನೇಕ ಸಾಕ್ಷಿಗಳು ಅವನ ಪರವಾಗಿ ಹೇಳಿಕೆ ಕೊಟ್ಟರು.
(೩) ಒಬ್ಬ ಕುಂಟನ ವಿನಾ ಎಲ್ಲರೂ ತಪ್ಪಿಸಿಕೊಂಡರು.
(೪) ಟಿಕೀಟಿರುವವರು ಮಾತ್ರ ಒಳಕ್ಕೆ ಬರಬಹುದು.
(೫) ಅಯ್ಯೋ ಕೆಟ್ಟೆನಲ್ಲ!
(೬) ಹೆಚ್ಚು ಕಡಮೆ ಎಲ್ಲರೂ ಅಪಾಯದಿಂದ ಪಾರಾದರು.
(೭) ಮದುವೆಯಾದಮೇಲೆ ಕಷ್ಟಸುಖಗಳು ತಿಳಿಯುತ್ತವೆ.
(೮) ಕಳ್ಳರಿದ್ದಾರೆ ಜೋಕೆ.

೭. ಸಂಬಂಧಪ್ರತಿಜ್ಞೆ ಎಂದರೆ ಏನು? ಉದಾಹರಿಸಿ.

# ೭. ಆಲೋಚನೆಯ ಮೂಲನಿಯಮಗಳು

## (Laws of Thought)

ನಾವು ಒಂದು ಪ್ರತಿಜ್ಞೆಯಿಂದ ಪ್ರಾರಂಭಿಸಿ ಅದರ ಅರ್ಥವನ್ನು ತಿಳಿದುಕೊಳ್ಳಲು ಪ್ರಯತ್ನಿಸಿದಾಗ ಅದರ ಹಿಂದೆ ಅಡಗಿರುವ ಅರ್ಥವನ್ನು ವಿಶದ ಪಡಿಸುವ, ಅಥವಾ ಅದಕ್ಕೆ ಆಧಾರವಾಗಿರುವ ಇನ್ನೊಂದು ಪ್ರತಿಜ್ಞೆಯ ಅರಿವುಂಟಾಗುತ್ತದೆ. ಅದೇ ರೀತಿಯಾಗಿ ಆ ಪ್ರತಿಜ್ಞೆಯ ಅರ್ಥವನ್ನು ವಿಶದ ಪಡಿಸಿಕೊಳ್ಳಲು ಪ್ರಯತ್ನಿಸಿದಾಗ ಅದಕ್ಕೆ ಆಧಾರವಾದ ಅಥವಾ ಅದರಲ್ಲಿ ಅಡಗಿರುವ ಅರ್ಥವನ್ನು ವಿಶದಪಡಿಸುವ ಮತ್ತೊಂದು ಪ್ರತಿಜ್ಞೆಯ ಅರಿವು ಆವಶ್ಯಕವಾಗುತ್ತದೆ. ಇದರಿಂದ ನಮ್ಮ ಜ್ಞಾನ ಪರಸ್ಪರ ಸಂಬಂಧಗಳ ಹಾಸುಹೊಕ್ಕಿನಲ್ಲಿ ಹೆಣೆದುಕೊಂಡಿರುವ ವಸ್ತುಗಳ ಅರಿವು ಎಂಬುದು ಸ್ಪಷ್ಟವಾಗುತ್ತದೆ. ಪ್ರಪಂಚದಲ್ಲಿ ಯಾವ ವಸ್ತುವೂ ಇತರ ವಸ್ತುಗಳಿಗೆ ಸಂಬಂಧವಿಲ್ಲದೆ ಇರುವುದಿಲ್ಲ. ಆದುದರಿಂದ ಒಂದು ವಸ್ತುವನ್ನು ತಿಳಿದುಕೊಳ್ಳಲು ಪ್ರಯತ್ನಿಸಿದಾಗ ನಮ್ಮ ಮನಸ್ಸು ಒಂದೇ ಒಂದು ಪ್ರತಿಜ್ಞೆಯಲ್ಲಿ ತೃಪ್ತಿಹೊಂದಿ ನಿಂತುಬಿಡುವುದಿಲ್ಲ. ಅದಕ್ಕೆ ಸಂಬಂಧಪಟ್ಟ, ಅದರ ಅರ್ಥವನ್ನು ವ್ಯಕ್ತಪಡಿಸುವ ಇತರ ಪ್ರತಿಜ್ಞೆಗಳನ್ನು ಅರಿಯಲು ತವಕಪಡುತ್ತದೆ. ಒಂದು ಚೂರು ಕಬ್ಬಿಣವನ್ನು ನೋಡಿ ಅದು ಕಬ್ಬಿಣ ಎಂದು ತಿಳಿದ ಮಾತ್ರಕ್ಕೆ ಅದು ತೃಪ್ತಿಹೊಂದುವುದಿಲ್ಲ. ಅದಕ್ಕೂ ಅದೇ ವಿಧವಾದ ಇತರ ವಸ್ತುಗಳಿಗೂ ಇರುವ ಸಂಬಂಧವನ್ನು ತಿಳಿಯಬಯಸುತ್ತದೆ. ಆಗ ನಮಗೆ ಕಬ್ಬಿಣವು ತಾಮ್ರದಂತೆ, ಸೀಸದಂತೆ ಒಂದು ಲೋಹ ಎಂಬ ತಿಳಿವು ಹುಟ್ಟಲೂ ಅದು ತಾಮ್ರದಿಂದ ಮತ್ತು ಸೀಸದಿಂದ ಭಿನ್ನವಾದ ವಸ್ತುವೆಂಬ ತಿಳಿವು ಹುಟ್ಟಲೂ ಕಾರಣವಾಗುತ್ತದೆ. ನಮ್ಮ ತಿಳಿವಿಗೆ ಏಕತೆಯ (Unity) ಅರಿವೂ ಆವಶ್ಯಕ, ಭಿನ್ನತೆಯ (Difference) ಅರಿವೂ ಆವಶ್ಯಕ; ಭಿನ್ನವಾದುವುಗಳಲ್ಲಿ ಏಕತೆಯನ್ನೂ ಏಕವಾದುದರಲ್ಲಿ ಭಿನ್ನತೆಯನ್ನೂ ಕಂಡುಹಿಡಿಯುವುದೇ ನಮ್ಮ ಬುದ್ಧಿಯ ಹವ್ಯಾಸ. ಅದು ಬರಿಯ ಏಕತೆಯನ್ನು ಮಾತ್ರ ಗ್ರಹಿಸಿ ಅದರಲ್ಲೇ ನೆಲೆಗೊಂಡರೆ ಅದರ ವಿಷಯವಾಗಿ ನಮ್ಮ ಜ್ಞಾನ ಬೆಳೆಯುವುದಿಲ್ಲ. ಆಗ ಆ ಜ್ಞಾನದ ರೂಪವು "ಕಬ್ಬಿಣವು ಕಬ್ಬಿಣವಾಗಿರುತ್ತದೆ" ಎಂಬ ಪ್ರತಿಜ್ಞಾ ರೂಪ ಹೊಂದಬೇಕಾಗುತ್ತದೆ. ಇದು ಬರಿಯ ಪುನರುಕ್ತಿ; ಹೇಳಿದ್ದನ್ನೇ ಹೇಳಿ

ದಂತಾಗುತ್ತದೆ. ಹಾಗೆಯೇ ನಮ್ಮ ಆಲೋಚನೆಯು ಅದರ ಭಿನ್ನತೆಯನ್ನು ಮಾತ್ರ ಗ್ರಹಿಸಿ ಅಲ್ಲೇ ನಿಂತುಬಿಟ್ಟರೆ ಆಗಲೂ ಅದರ ವಿಷಯವಾಗಿ ನಮ್ಮ ಜ್ಞಾನ ಬೆಳೆಯುವುದಿಲ್ಲ. ಆಗ ನಮ್ಮ ಅರಿವಿನ ರೂಪ "ಕಬ್ಬಿಣ ಸೀಸವಲ್ಲ" ಎಂಬ ಪ್ರತಿಜ್ಞಾರೂಪವನ್ನು ಹೊಂದುತ್ತದೆ. "ಇದೇನು" ಎಂದು ಕೇಳಿದಾಗ "ಇದು ತಾಮ್ರವಲ್ಲ" ಎಂದು ಯಾರಾದರೂ ಉತ್ತರ ಹೇಳಿದರೆ ನಮಗೆ ಆ ಉತ್ತರದಿಂದ ಸಮಾಧಾನವಾಗುವುದಿಲ್ಲ. "ಇದು ತಾಮ್ರವಲ್ಲ, ಆದರೂ ಕಾಸಿದಾಗ ತಾಮ್ರ ಕರಗುವಂತೆ ಕರಗುತ್ತದೆ. ತಾಮ್ರದಿಂದ ತಂತಿಯನ್ನು ಎಳೆಯುವಂತೆ ಇದರಿಂದಲೂ ತಂತಿಯನ್ನು ಎಳೆಯಬಹುದು; ತಾಮ್ರಕ್ಕೆ ಕಿಲುಬು ಹತ್ತುವಂತೆ, ಇದಕ್ಕೂ ತುಕ್ಕು ಹತ್ತುತ್ತದೆ. ಇವೆರಡೂ ಬೇರೆಬೇರೆಯಾದವು, ಆದರೂ ಎರಡೂ ಕೆಲವು ಸಾಮಾನ್ಯಗುಣಗಳುಳ್ಳವು, ಎರಡೂ ಲೋಹಗಳು" ಎಂದು ಉತ್ತರಕೊಟ್ಟಾಗ ನಮಗೆ ಹೆಚ್ಚು ಸಮಾಧಾನವಾಗುತ್ತದೆ; ಭಿನ್ನತೆಯಲ್ಲಿರುವ ಏಕತೆ, ಏಕತೆಯ ವೈಚಿತ್ರ್ಯ ತಿಳಿಯುತ್ತದೆ. ಹೀಗೆ ಭಿನ್ನತೆಯಲ್ಲಿರುವ ಏಕತೆಯನ್ನೂ ಏಕವಾದುದರ ವೈವಿಧ್ಯವನ್ನೂ ಗ್ರಹಿಸುವುದು ನಮ್ಮ ಆಲೋಚನೆಯ ನಿಯಮ. ಇದು ಎಲ್ಲ ಆಲೋಚನೆಗಳಲ್ಲೂ ಕಾಣಬಹುದಾದ ಸಾಮಾನ್ಯ ಲಕ್ಷಣ. ಯಾವುದೊಂದು ಪ್ರತಿಜ್ಞೆಯಾಗಲಿ ಯಾವ ಬಗೆಯ ತರ್ಕವಾಗಲಿ ಈ ನಿಯಮಕ್ಕೆ ಒಳಪಡದೆ ಇರಲು ಸಾಧ್ಯವಿಲ್ಲ. ಇದು ಆಲೋಚನೆಯ ಮೂಲನಿಯಮ.

ಆದರೆ ಸಾಂಪ್ರದಾಯಕವಾಗಿ ಪಾಶ್ಚಾತ್ಯ ತಾರ್ಕಿಕರು ಈ ಮೂಲ ನಿಯಮವನ್ನು ಮೂರಾಗಿ ಪರಿಗಣಿಸುತ್ತಾರೆ. ಅವು (1) ಲಾ ಆಫ್ ಐಡೆಂಟಿಟಿ (Law of Identity)—ಏಕತೆಯ ನಿಯಮ, (2) ಲಾ ಆಫ್ ಕಾಂಟ್ರಡಿಕ್ಷನ್ (Law of Contradiction)—ಪರಸ್ಪರ ವಿರೋಧನಿಯಮ, (3) ಲಾ ಆಫ್ ಎಕ್ಸ್‌ಕ್ಲೂಡೆಡ್ ಮಿಡಲ್ (Law of Excluded Middle)—ಪಕ್ಷಾಂತರ ನಿಯಮ. ಈ ಮೂರರ ಜೊತೆಗೆ ಲೈಬ್ನಿಜ್ ಎಂಬ ಪಾಶ್ಚಾತ್ಯ ತಾರ್ಕಿಕನು ನಾಲ್ಕನೆಯದಾಗಿ (4) ಲಾ ಆಫ್ ಸಫಿಷೆಂಟ್ ರೀಸನ್ (Law of Sufficient Reason)—ಸಕಾರಣನಿಯಮ ಎಂಬುದನ್ನು ಸೇರಿಸಿದನು. ಈ ನಿಯಮಗಳನ್ನು ಪ್ರತಿಜ್ಞಾರೂಪವಾಗಿ ಹೀಗೆ ತಿಳಿಸುವುದು ವಾಡಿಕೆ. "'ಏ'ಯು 'ಏ' ಆಗಿರುತ್ತದೆ" ('A is A') ಇದು ಲಾ ಆಫ್ ಐಡೆಂಟಿಟಿಯ ಪ್ರತಿಜ್ಞಾರೂಪ. "'ಏ' ಯು 'ಏ' ಆಗಿಯೂ 'ಏ' ಅಲ್ಲದೆಯೂ ಎರಡೂ ಆಗಿರಲಾರದು." 'A cannot be A and not A'. ಇದು ಲಾ ಆಫ್ ಕಾಂಟ್ರಡಿಕ್ಷನ್ನಿನ ಪ್ರತಿಜ್ಞಾರೂಪ. ಪ್ರತಿಯೊಂದೂ 'ಏ' ಆಗಿರಬೇಕು. ಅಥವಾ ಏ ಗಿಂತ

ಬೇರೆಯಾದುದಾಗಿರಬೇಕು; ಇದು ಲಾ ಆಫ್ ಎಕ್ಸ್‌ಕ್ಲೂಡೆಡ್ ಮಿಡಲ್‌ನ ಪ್ರತಿಜ್ಞಾರೂಪ. ('Everything is either A or not A') ಪ್ರತಿಯೊಂದಕ್ಕೂ ಅದು ಏಕೆ ಹಾಗೆ ಇದೆ ಬೇರೆಯಾಗಿಲ್ಲ ಎಂಬುದಕ್ಕೆ ಸರಿಯಾದ ಕಾರಣ ವಿರಬೇಕು. ("Everything must have a sufficient reason why it is so and not otherwise.") ಇದು ಲಾ ಆಫ್ ಸಫಿಷೆಂಟ್ ರೀಸನ್ನಿನ ಪ್ರತಿಜ್ಞಾರೂಪ.

ಈ ಮೂಲನಿಯಮಗಳನ್ನು ಮೇಲೆ ಹೇಳಿರುವಂತೆ ಪ್ರತಿಪಾದಿಸಿದಾಗ ಅವು ಬರಿಯ ಪುನರುಕ್ತಿಗಳಾಗಿ ಅರ್ಥವಿಲ್ಲದವುಗಳಂತೆ ತೋರುತ್ತವೆ. 'ಏ'ಯು 'ಏ'ಆಗಿರುತ್ತದೆ ಎಂಬುದು ಅರ್ಥವಿಲ್ಲದ ಪ್ರಲಾಪ. ಆದರೆ ಈ ನಿಯಮದ ಅರ್ಥ "ಅದು ಅದಾಗಿದೆ" ಎಂಬುದಲ್ಲ. ಒಂದು ವಸ್ತುವು ಬೇರೆ ಬೇರೆ ಕಾಲಗಳಲ್ಲಿ ಬೇರೆ ಬೇರೆ ಸ್ಥಳಗಳಲ್ಲಿ, ಬೇರೆ ಬೇರೆ ಅವಸ್ಥೆಗಳಲ್ಲಿ ಕಂಡುಬಂದರೂ ಅದರಲ್ಲಿ ಒಂದು ವಿಧವಾದ ಏಕತೆ ಇರುವುದರಿಂದಲೇ ಆ ವಸ್ತು ಅದಾಗಿರುವುದು, ಆ ವಸ್ತುವನ್ನು ನಾವು ಆಲೋಚಿಸುವುದಕ್ಕಾಗುವುದು. ಪ್ರತಿಯೊಂದು ವಸ್ತು ವಿನಲ್ಲೂ ಇರುವ ಏಕತೆಯನ್ನು ಗ್ರಹಿಸಿದ ವಿನಾ ನಾವು ಅದನ್ನು ಆಲೋಚಿಸಲು ಸಾಧ್ಯವಿಲ್ಲ. ನಾವು ಒಂದು ಗಿಡವನ್ನು ಸಸಿಯಾಗಿದ್ದಾಗ ನೋಡಿರಬಹುದು, ಗಿಡವಾದ ಮೇಲೆ ನೋಡಬಹುದು, ಚಿಗುರಿದಾಗ ನೋಡಬಹುದು, ಹೂಬಿಟ್ಟಾಗ ನೋಡಬಹುದು, ಹೂ ಕಾಯಾಗಿ ಹಣ್ಣಿನಿಂದ ತುಂಬಿ ಜಗಿಯುತ್ತಿದ್ದಾಗ ನೋಡಬಹುದು, ಎಲೆ ಉದುರಿ ಬೋಳಾಗಿ ನಿಂತಾಗ ನೋಡಬಹುದು. ಆದರೂ ಈ ಭಿನ್ನಾವಸ್ಥೆಗಳಲ್ಲಿ ನಾವು ನೋಡುವುದು ಒಂದೇ ಗಿಡ ಎಂಬುದಾಗಿ ನಾವು ತಿಳಿಯುತ್ತೇವೆ. ಹೀಗೆ ಅದು ಒಂದೇ ಗಿಡ ಎಂದು ತಿಳಿಯುವುದು ಭಿನ್ನತೆಯಲ್ಲಿರುವ ಏಕತೆಯ ಮೂಲಕ. ಏಕತೆಯ ನಿಯಮದ ಅರ್ಥ ಇದು. 'ಏ' 'ಏ' ಆಗಿ ಇರುತ್ತದೆ ಎಂದು ಹೇಳಿದಾಗ, 'ಏ' ಏನೇನು ಬದಲಾವಣೆ ಹೊಂದಲಿ, ಆ ಭಿನ್ನಾವಸ್ಥೆಗಳಲ್ಲೆಲ್ಲ ಮೂಲಭೂತವಾದ ಏಕತೆ ಅದರಲ್ಲಿ ಇದೆ; ಅದು 'ಏ' ಆಗಿಯೇ ಇರುತ್ತದೆ. ಗಿಡ ಸಸಿಯಾಗಿದ್ದಾಗ ಅದನ್ನು ಏ$_1$ ಎಂದೂ, ಅದು ಗಿಡವಾದಾಗ ಅದನ್ನು ಏ$_2$ ಎಂದೂ, ಅದು ಚಿಗುರಿದಾಗ ಏ$_3$ ಎಂದೂ ಹೂಬಿಟ್ಟಾಗ ಏ$_4$ ಎಂದೂ, ಹೂ ಕಾಯಾದಾಗ ಏ$_5$ ಎಂದೂ, ಅದು ಹಣ್ಣಾದಾಗ ಏ$_6$ ಎಂದೂ, ಎಲೆ ಉದುರಿ ಬೋಳಾದಾಗ ಏ$_7$ ಎಂದೂ ಭಾವಿಸ ಬೇಕು. ಹಾಗಿಲ್ಲದಿದ್ದರೆ ಅದು ಒಂದೇ ಗಿಡ ಎಂದು ಯೋಚಿಸಲಾಗುವುದಿಲ್ಲ. ಹೀಗೆ ಭಾವಿಸಿದಲ್ಲದೆ, ಅಂದರೆ ಪ್ರತಿಯೊಂದು ವಸ್ತುವಿನಲ್ಲೂ ಒಂದು ಏಕತೆ ಇದೆ ಎಂದು ಭಾವಿಸಿದ ವಿನಾ ನಾವು ಯಾವುದನ್ನೂ ಯೋಚಿಸಲಾಗುವುದಿಲ್ಲ.

ಜೀವನದ ಎಲ್ಲ ವ್ಯವಹಾರಗಳೂ ನಿಂತಿರುವುದು ಈ ಏಕತೆಯ ನಿಯಮದ ಮೇಲೆ.

ಲಾ ಆಫ್ ಐಡೆಂಟಿಟಿಯಲ್ಲಿ ಅಡಗಿರುವ ಈ ಭಾವವನ್ನೇ ಲಾ ಆಫ್ ಕಾಂಟ್ರಡಿಕ್ಷನ್ ಬೇರೆಯ ಮಾತಿನಲ್ಲಿ ಹೇಳುತ್ತದೆ. ನಾವು ಯಾವುದೊಂದು ವಸ್ತುವಿಗೂ ಒಂದೇ ಕಾಲದಲ್ಲಿ ಅಸ್ತ್ಯರ್ಥಕ ಮತ್ತು ನೇತ್ಯರ್ಥಕ ಲಕ್ಷಣ ವನ್ನು ಹೇಳಲಾಗುವುದಿಲ್ಲ. ಒಂದೇ ಕಾಲದಲ್ಲಿ 'ಏ' ಎಂಬ ವಸ್ತು 'ಏ' ಆಗಿಯೂ 'ಏ' ಅಲ್ಲದೆಯೂ ಇರಲಾರದು. "'ಏ' ಇದೆ", "'ಏ' ಇಲ್ಲ" ಎಂಬ ಎರಡು ಪ್ರತಿಜ್ಞೆಗಳೂ ನಿಜವಾಗಲಾರವು. ಹೀಗೆ ಹೇಳಿದಾಗ ಲಾ ಆಫ್ ಕಾಂಟ್ರಡಿಕ್ಷನ್ ಒಂದು ವಸ್ತುವಿಗೆ ಒಂದೇ ಗುಣವಿರಬೇಕು, ಅದು ವೈವಿಧ್ಯ ವಿಲ್ಲದ್ದು, ಎಂದು ಹೇಳುವುದಾಗಿ ತಿಳಿಯಕೂಡದು. ಈ ನಿಯಮವಸ್ತು ಗಳಲ್ಲಿ ವೈವಿಧ್ಯವಿಲ್ಲವೆಂದು ಹೇಳುವುದಿಲ್ಲ. ಆದರೆ ನಾವು ಯಾವುದೊಂದು ವಸ್ತುವಿನ ವಿಚಾರವಾಗಿ ಯೋಚಿಸುವಾಗಲೂ ಒಂದೇ ಕಾಲದಲ್ಲಿ, ಒಂದೇ ಅರ್ಥದಲ್ಲಿ ಅದು ವಿರುದ್ಧ ಗುಣಗಳುಳ್ಳದ್ದು ಎಂದು ಹೇಳಲಾಗುವುದಿಲ್ಲ. ಒಂದು ಗಿಡ ವಸಂತದಲ್ಲಿ ಚಿಗುರಿರುತ್ತದೆ, ಹಿಮಂತದಲ್ಲಿ ಬೋಳಾಗಿರುತ್ತದೆ. ಆದರೆ ಒಂದೇ ಕಾಲದಲ್ಲಿ ಅದು ಚಿಗರಿರಲು ಮತ್ತು ಬೋಳಾಗಿರಲು ಸಾಧ್ಯವಿಲ್ಲ. ಹೀಗೆ ಹೇಳುವುದು ಅಸಂಗತ. ಲಾ ಆಫ್ ಕಾಂಟ್ರಡಿಕ್ಷನ್ ಎಂಬ ಎರಡನೆಯ ನಿಯಮದಲ್ಲಿ ಅಡಗಿರುವ ಅರ್ಥವನ್ನೇ ಮೂರನೆಯದಾದ ಲಾ ಆಫ್ ಎಕ್ಸ್‌ಕ್ಲೂಡೆಡ್ ಮಿಡಲ್ ಇನ್ನೂ ಸ್ಪಷ್ಟಪಡಿಸುತ್ತದೆ. ಪರಸ್ಪರ ವಿರುದ್ಧಪ್ರತಿಜ್ಞೆಗಳು ಎರಡೂ ನಿಜವಾಗಿರಲಾರವು ಎಂದು ಲಾ ಆಫ್ ಕಾಂಟ್ರಡಿಕ್ಷನ್ ಹೇಳಿದರೆ, ಲಾ ಆಫ್ ಎಕ್ಸ್‌ಕ್ಲೂಡೆಡ್ ಮಿಡಲ್ ಇವೆರಡಲ್ಲಿ ಒಂದು ಸತ್ಯವಾದರೆ ಇನ್ನೊಂದು ಅಸತ್ಯವಾಗಲೇಬೇಕು ಎಂದು ತಿಳಿಸುತ್ತದೆ. "ಏ ಇದೆ" "ಏ ಇಲ್ಲ" ಎಂಬ ಎರಡು ವಿರುದ್ಧ ಪ್ರತಿಜ್ಞೆ ಗಳಲ್ಲಿ ಒಂದು ಮಾತ್ರ ಸತ್ಯವಾಗಬಹುದು ಇನ್ನೊಂದು ಅಸತ್ಯವಾಗಲೇ ಬೇಕು. "ಏ ಇದೆ" ಎಂಬುದು ಸತ್ಯವಾದರೆ "ಏ ಇಲ್ಲ" ಎಂಬುದು ಅಸತ್ಯವಾಗಬೇಕು.

ಈ ಮೂರು ನಿಯಮಗಳೂ ಒಂದೇ ಮೂಲಭೂತ ಸತ್ಯವನ್ನು ಬೇರೆ ಬೇರೆ ಮಾತುಗಳಲ್ಲಿ ಹೇಳುತ್ತವೆ. ಒಂದೊಂದೂ ಒಂದೇ ನಿಯಮದ ಬೇರೆ ಬೇರೆ ಮುಖಗಳನ್ನು ತೋರಿಸುತ್ತವೆ. ಇವು ಮೂರೂ ನಮ್ಮ ಆಲೋಚನೆಯ ಮೂಲಸ್ವಭಾವವನ್ನು ಸ್ಪಷ್ಟಪಡಿಸುತ್ತವೆ. ನಾವು ಯೋಚಿಸು ವಾಗಲೆಲ್ಲ ವೈವಿಧ್ಯದಲ್ಲಿ ಏಕತೆಯನ್ನೂ ಏಕತೆಯಲ್ಲಿ ವೈವಿಧ್ಯವನ್ನೂ ತಿಳಿಯ

ಬಯಸುತ್ತೇವೆ. ಹೀಗೆ ನಾವು ವೈವಿಧ್ಯದಲ್ಲಿ ಏಕತೆಯನ್ನೂ ಏಕತೆಯಲ್ಲಿ ವೈವಿಧ್ಯವನ್ನೂ ತಿಳಿಯಬಯಸಿದಾಗ ಈ ವಿಶ್ವದಲ್ಲಿ ಪ್ರತಿಯೊಂದೂ ಇನ್ನೊಂದಕ್ಕೆ ಸಂಬಂಧಪಟ್ಟಂತೆ ಇರುತ್ತದೆ, ಯಾವುದೂ ಬೇರೆಯದಕ್ಕೆ ಸಂಬಂಧವಿಲ್ಲದೆ ಇರುವುದಿಲ್ಲ ಎಂಬ ಭಾವನೆ ಅದರ ಹಿನ್ನೆಲೆಯಲ್ಲಿರುತ್ತದೆ. ಒಂದನ್ನು ತಿಳಿಯಲು ಯತ್ನಿಸಿದಾಗ ಇತರ ವಸ್ತುಗಳೊಡನೆ ಅದು ಪಡೆದಿರುವ ಸಂಬಂಧವನ್ನು ಆಲೋಚಿಸಬೇಕಾಗುತ್ತದೆ. ಅಂದರೆ ಈ ವಿಶ್ವ ಬರಿಯ ಏಕತೆಯ ರೂಪವಾದದ್ದೂ ಅಥವಾ ಬರಿಯ ಭಿನ್ನತೆಯ ರೂಪವಾದದ್ದೂ ಅಲ್ಲ. ಅದು ಏಕತೆಯಲ್ಲಿ ಭಿನ್ನತೆ, ಭಿನ್ನತೆಯಲ್ಲಿ ಏಕತೆಯುಳ್ಳ ಒಂದು ವ್ಯವಸ್ಥೆ. ಒಂದು ಇನ್ನೊಂದಕ್ಕೆ ಆಧಾರ ಅಥವಾ ಆಧೇಯವಾಗಿ ಒಂದು ಇನ್ನೊಂದಕ್ಕೆ ಕಾರಣವಾಗಿ ಇರುತ್ತದೆ. ನಾವು ಏನನ್ನು ತಿಳಿದರೂ ತಿಳಿದದ್ದಕ್ಕೆ ಸರಿಯಾದ ಕಾರಣವಿದೆ ಎಂದೇ ನಮ್ಮ ಭಾವನೆ; ಇದು ನಮ್ಮ ಅನುಭವದ ಹಿಂದುಗಡೆ ಇರುವ ಭಾವನೆ. ನಾಲ್ಕನೆಯ ನಿಯಮವಾದ ಲಾ ಆಫ್ ಸಫಿಷೆಂಟ್ ರೀಸ್ಟನ್ ಈ ಅಂಶವನ್ನು ವ್ಯಕ್ತಪಡಿಸುತ್ತದೆ. ನಾವು ಯಾವುದನ್ನೇ ಆಗಲಿ ಹೀಗಿದೆ ಎಂದು ತಿಳಿದಾಗ ಅದು ಬೇರೆಯಾಗಿಲ್ಲದಿರಲು ಸರಿಯಾದ ಕಾರಣವಿದೆ ಎಂಬ ಭಾವನೆ ನಮ್ಮ ಮನಸ್ಸಿನಲ್ಲಿ ಹುದುಗಿದೆ.

ಈ ನಿಯಮಗಳು ಎಲ್ಲ ಆಲೋಚನೆಗಳಿಗೂ ತಳಹದಿಯಾದ ನಿಯಮಗಳು ಎಂದು ಹೇಳಿದಾಗ ತಾರ್ಕಿಕರು ತಿಳಿದಿರುವಂತೆ ಎಲ್ಲರೂ ಇದನ್ನು ತಿಳಿದಿರುತ್ತಾರೆಂದು ಭಾವಿಸಕೂಡದು. ನಾವು ನಮ್ಮ ತಿಳಿವಿನ ಸ್ವಭಾವವೇನು ಅದಕ್ಕೆ ಮೂಲಭೂತವಾದ ಆಧಾರವೇನು ಎಂದು ತಾರ್ಕಿಕರಾಗಿ ಯೋಚಿಸಿದಾಗ, ಎಲ್ಲ ತಿಳಿವಿನ ತಳಹದಿಯಾಗಿ ಈ ನಿಯಮಗಳಿವೆ ಎಂದೂ ನಾವು ಯೋಚಿಸಲು ಸಾಧ್ಯವಾಗಿರುವುದು ಈ ನಿಯಮಗಳ ಸಲುವಾಗಿಯೇ ಎಂದೂ ಇದನ್ನು ಬಿಟ್ಟು ನಾವು ಯೋಚಿಸುವುದೇ ಅಸಾಧ್ಯ ಎಂದೂ ನಮಗೆ ತಿಳಿಯಬರುತ್ತದೆ. ಈ ತಿಳಿವೂ ಕೂಡ ಸಾಧ್ಯವಾಗಿರುವುದು ಸಾವಿರಾರು ವರ್ಷಗಳ ತರ್ಕಶಾಸ್ತ್ರ ವಿಮರ್ಶೆಯ ಪರಿಣಾಮವಾಗಿ. ಈ ನಿಯಮಗಳ ವಿಚಾರವಾಗಿ ಎಷ್ಟೋ ತಪ್ಪು ಭಾವನೆಗಳು ಇದ್ದು ಕಾಲಕ್ರಮೇಣ ಹೆಚ್ಚು ಹೆಚ್ಚು ಸಮಂಜಸವಾದ ತಿಳಿವು ಉಂಟಾಗಿದೆ. ಏಕತೆಯ ನಿಯಮ ಭಿನ್ನತೆ ಇಲ್ಲದ ಕೇವಲ ಏಕತೆಯನ್ನು ಸಾರುತ್ತದೆ ಎಂಬುದು ಅಂಥ ತಪ್ಪು ಭಾವನೆಗಳಲ್ಲಿ ಒಂದು. ಲಾ ಆಫ್ ಐಡೆಂಟಿಟಿ, ಲಾ ಆಫ್ ಕಾಂಟ್ರಡಿಕ್ಷನ್, ಲಾ ಆಫ್ ಎಕ್ಸ್‌ಕ್ಲೂಡೆಡ್ ಮಿಡಲ್, ಲಾ ಆಫ್ ಸಫಿಷೆಂಟ್ ರೀಸ್ಟನಿಂಗ್, ಇವು ಒಂದೇ ಮೂಲನಿಯಮದ ಬೇರೆ ಬೇರೆ ಮುಖಗಳಾಗಿರದೆ, ಅವು ಬೇರೆಬೇರೆಯವು ಎಂಬುದು ಇನ್ನೊಂದು ತಪ್ಪುಭಾವನೆ.

ಈ ನಿಯಮಗಳು ಅನುಭವದಿಂದ ತಿಳಿದ ಸತ್ಯಗಳಲ್ಲ ; ಅವು ಅನುಭವಕ್ಕೆ ಪೂರ್ವ ಭಾವಿಯಾಗಿ ನಮ್ಮ ಮನಸ್ಸಿನಲ್ಲಿ ಇರತಕ್ಕವು ; ಇವು ಸ್ವತಸ್ಸಿದ್ಧವಾದುವು (Sef-evident) ಎಂಬುದು ಇನ್ನೊಂದು ತಪ್ಪುಭಾವನೆ. ಈ ನಿಯಮಗಳನ್ನು ನಾವು ಅನುಮಾನದ ಮೂಲಕ ಪಡೆದುವೆಂಬುದು ಮತ್ತೊಂದು ತಪ್ಪುಭಾವನೆ. ಈ ನಿಯಮಗಳು ಅನುಭವಕ್ಕೆ ಮುಂಚೆಯೆ ನಮ್ಮ ಮನಸ್ಸಿನಲ್ಲಿ ಇದ್ದವೂ ಅಲ್ಲ ; ಅನುಮಾನದ ಮೂಲಕ ಪಡೆದುವೂ ಅಲ್ಲ. ನಮ್ಮ ಅನುಭವದ ಮೂಲಕವಲ್ಲದೆ ಅಂದರೆ ನಮ್ಮ ಅನುಭವವನ್ನು ಬಿಟ್ಟು ಈ ನಿಯಮಗಳಿಗೆ ಬೇರೆ ಅಸ್ತಿತ್ವವಿಲ್ಲ. ಇವು ಅನುಮಾನದ ಮೂಲಕ ತಿಳಿದ ನಿಯಮಗಳಲ್ಲ. ಏಕೆಂದರೆ, ಅನುಮಾನವು ನಿಂತಿರುವುದು ಈ ನಿಯಮಗಳ ಆಧಾರದ ಮೇಲೆ. ಯಾವುದು ಅನುಮಾನಕ್ಕೆ ಆಧಾರವೋ ಅದನ್ನು ಅನುಮಾನದಿಂದ ಪಡೆಯಲು ಸಾಧ್ಯವಿಲ್ಲ. ಯಾವುದು ಎಲ್ಲ ಅನುಭವಕ್ಕೂ ತಳಹದಿಯೋ, ಯಾವುದನ್ನು ನಾವು ಮೂಲ ಆಧಾರ ವಾಗಿ ಇಟ್ಟುಕೊಳ್ಳದೆ ಯಾವ ಆಲೋಚನೆಯನ್ನೂ ಮಾಡಲು ಸಾಧ್ಯವಿಲ್ಲವೋ ಅದನ್ನು ಅನುಭವದಿಂದಾಗಲಿ ತರ್ಕದಿಂದಾಗಲಿ ಪಡೆಯಲಾಗುವುದಿಲ್ಲ. ತಿಳಿದಂತಾಗಲಿ ತಿಳಿಯದಂತಾಗಲಿ ನಾವು ಯೋಚಿಸಿದಾಗಲೆಲ್ಲ ಈ ನಿಯಮ ಗಳು ನಮ್ಮ ಅನುಭವದಲ್ಲಿ ಅದಕ್ಕೆ ಆಧಾರವಾಗಿ ಕೆಲಸಮಾಡುತ್ತವೆ. ಯಾವುದನ್ನು ಬಿಟ್ಟು, ಯಾವುದರ ವಿನಾ ನಾವು ಆಲೋಚಿಸುವುದಕ್ಕೆ ಸಾಧ್ಯವಿಲ್ಲವೊ ಅದನ್ನು ನಾವು ಆಲೋಚನೆಯ ಮೂಲನಿಯಮವಾಗಿ ಇಟ್ಟು ಕೊಳ್ಳಬೇಕು. ಹೀಗೆ ಮಾತ್ರ ಅವುಗಳನ್ನು ಸಮರ್ಥಿಸುವುದು ಸಾಧ್ಯ.

## ಅಭ್ಯಾಸಗಳು (೭)

೧. ಆಲೋಚನೆಯ ಮೂಲನಿಯಮಗಳು ಯಾವುವು ? ಅವುಗಳ ಪರಸ್ಪರ ಸಂಬಂಧವನ್ನು ತಿಳಿಸಿ.

೨. ಆಲೋಚನೆಯ ಮೂಲನಿಯಮಗಳಿಗೆ ಆಧಾರವಾದ ತತ್ತ್ವ ಯಾವುದು ?

೩. ಆಲೋಚನೆಯ ಮೂಲನಿಯಮಗಳನ್ನು ನಾವು ಅನುಮಾನದ ಮೂಲಕ ಪಡೆಯು ತ್ತೇವೆಯೆ ? ಕಾರಣಸಹಿತವಾಗಿ ಉತ್ತರವನ್ನು ಕೊಡಿ.

# ೮. ಅನುಮಾನ (Inference)

ನಮ್ಮ ಅನುಭವದಲ್ಲಿ ಯಾವುದೊಂದು ಪ್ರತಿಜ್ಞೆಯೂ ಹೊರಚಾಗಿ ಹಿಂದು ಮುಂದಿಲ್ಲದೆ ಇರುವುದಿಲ್ಲ. ಒಂದು ಪ್ರತಿಜ್ಞೆಯನ್ನು ನಾವು ತಿಳಿಯಬೇಕಾದರೆ ಇತರ ಪ್ರತಿಜ್ಞೆಗಳ ಸಹಾಯ ಬೇಕು. 'ಪಾರಿವಾಳ ಒಂದು ಹಕ್ಕಿ' ಎಂಬ ಸರಳವಾದ ಪ್ರತಿಜ್ಞೆಯ ಹಿಂದೆ ಅನೇಕ ಪ್ರತಿಜ್ಞೆಗಳ ತಿಳಿವು ಅಡಗಿದೆ. ಪಾರಿವಾಳ ಹಕ್ಕಿ ಎಂದು ತಿಳಿಯಬೇಕಾದರೆ ಹಕ್ಕಿಯ ಲಕ್ಷಣವೇನು ಎಂಬುದು ತಿಳಿದಿರಬೇಕು. 'ಹಕ್ಕಿ ರೆಕ್ಕೆಗಳುಳ್ಳ ಪ್ರಾಣಿ' ಎಂಬುದು ಪಾರಿವಾಳ ಒಂದು ಹಕ್ಕಿ ಎಂಬ ತಿಳಿವಿಗೆ ಆಧಾರ. ಹಕ್ಕಿ ರೆಕ್ಕೆಗಳುಳ್ಳ ಪ್ರಾಣಿ ಎಂಬುದನ್ನು ತಿಳಿದ ವಿನಾ ಪಾರಿವಾಳ ಹಕ್ಕಿ ಎಂಬುದನ್ನು ತಿಳಿಯಲಾಗುವುದಿಲ್ಲ. ಹಾಗೆಯೇ 'ಹಕ್ಕಿಗಳು ಜೀವವುಳ್ಳ ಪ್ರಾಣಿಗಳು' ಎಂಬ ಪ್ರತಿಜ್ಞೆಯನ್ನು ತಿಳಿದ ವಿನಾ ಹಕ್ಕಿಗಳು ಪ್ರಾಣಿಗಳು ಎಂಬುದನ್ನು ತಿಳಿಯಲಾಗುವುದಿಲ್ಲ. ಹಾಗೆಯೇ ಜೀವವಸ್ತು ಎಂಬುದನ್ನು ತಿಳಿಯಬೇಕಾದರೆ ಇತರ ಪ್ರತಿಜ್ಞೆಗಳ ಸಹಾಯ ಬೇಕು. ಹೀಗೆ ಪ್ರತಿಜ್ಞೆಗಳು ಒಂದಕ್ಕೊಂದು ಆಧಾರವಾಗಿರುತ್ತವೆ; ಒಂದರ ಅರ್ಥವನ್ನು ಇನ್ನೊಂದು ಪೂರ್ಣಗೊಳಿಸುತ್ತದೆ. ನಮ್ಮ ಜ್ಞಾನ ಪ್ರತಿಜ್ಞೆಗಳ ವ್ಯವಸ್ಥೆ (System). ಅದರ ಭಾಗವಾದ ಯಾವುದದೊಂದು ಪ್ರತಿಜ್ಞೆಯನ್ನು ತಿಳಿಯಬೇಕಾದರೂ ಇತರ ಪ್ರತಿಜ್ಞೆಗಳ ಸಹಾಯ ಬೇಕು.

ಒಂದು ಪ್ರತಿಜ್ಞೆಯಲ್ಲಿ ಅಡಗಿರುವ ಅರ್ಥವನ್ನು ವ್ಯಕ್ತಪಡಿಸಬೇಕಾದಾಗ ನಾವು ಅದರಿಂದ ಪ್ರತ್ಯೇಕವಾದ ಒಂದು ಪ್ರತಿಜ್ಞೆಯನ್ನು ಮಾತ್ರ ಉಪಯೋಗಿಸಿಕೊಳ್ಳಬಹುದು, ಅಥವಾ ಎರಡು ಪ್ರತಿಜ್ಞೆಗಳ ನೆರವನ್ನು ಪಡೆಯಬಹುದು. ಉದಾಹರಣೆಗಾಗಿ, 'ಪಾರಿವಾಳಗಳು ಪಕ್ಷಿಗಳು' ಎಂಬ ಪ್ರತಿಜ್ಞೆಯನ್ನು ತೆಗೆದುಕೊಳ್ಳೋಣ. ಇದರ ಅರ್ಥವನ್ನು ವಿಶದಪಡಿಸಲು ನಾವು 'ಯಾವ ಪಾರಿವಾಳವೂ ಪಕ್ಷಿಯಲ್ಲದ್ದಲ್ಲ' ಎಂದು ಹೇಳಬಹುದು. 'ಪಕ್ಷಿಯಲ್ಲದ್ದು ಪಾರಿವಾಳವಲ್ಲ' ಎಂದು ಹೇಳಬಹುದು. 'ಎಲ್ಲ ಪಕ್ಷಿಗಳೂ ಪಾರಿವಾಳಗಳಲ್ಲ,' ಅಂದರೆ ಪಕ್ಷಿಗಳಲ್ಲಿ ಕೆಲವು ಮಾತ್ರ ಪಾರಿವಾಳಗಳು ಎಂದು ಹೇಳಬಹುದು. 'ಪಾರಿವಾಳಗಳು ಪಕ್ಷಿಗಳಲ್ಲ' ಎಂಬುದು ಅಸತ್ಯ ಎಂದು ಹೇಳಬಹುದು. ಹೀಗೆ ಮೂಲಪ್ರತಿಜ್ಞೆಯ ವಿಷಯಿ ವಿಶೇಷಣಗಳನ್ನು ಬೇರೆ ಬೇರೆ ರೀತಿಯಲ್ಲಿ ಅಥವಾ ರೂಪದಲ್ಲಿ ಪ್ರತಿಜ್ಞಾ ಪದಗಳಾಗಿ ಉಳ್ಳ ಹಲವು ಪ್ರತಿಜ್ಞೆಗಳ ಮೂಲಕ ಮೂಲಪ್ರತಿಜ್ಞೆಯ ಅರ್ಥವನ್ನು ವಿಶದಪಡಿಸಬಹುದು. ಒಂದು

ಪ್ರತಿಜ್ಞೆಯ ಅರ್ಥವನ್ನು ಅದೇ ಪ್ರತಿಜ್ಞಾಪದಗಳುಳ್ಳ ವಿವಿಧ ಪ್ರತಿಜ್ಞೆಗಳ ಮೂಲಕ ವಿಶದಪಡಿಸುವ ವಿಧಾನಕ್ಕೆ ನೇರವಾದ ಅಥವಾ ಸಮಕ್ಷ ಅನುಮಾನ (Immediate Inference) ಎಂದು ಹೆಸರು.

ಒಂದು ಪ್ರತಿಜ್ಞೆಯ ಅರ್ಥವನ್ನು ಅದರಿಂದ ಬೇರೆಯಾದ ಎರಡು ಪ್ರತಿಜ್ಞೆಗಳ ಮೂಲಕ ಅರ್ಥ ವಿಶದಪಡಿಸುವ ವಿಧಾನಕ್ಕೆ ಸಮಧ್ಯಮ ಅನುಮಾನ (Mediate Inference) ಎಂದು ಹೆಸರು. 'ಪಾರಿವಾಳಗಳು ಪಕ್ಷಿಗಳು' ಎಂಬ ಪ್ರತಿಜ್ಞೆಯ ಅರ್ಥವನ್ನು ಅದಕ್ಕೆ ಕಾರಣ ತಿಳಿಸಿ ವ್ಯಕ್ತಪಡಿಸಬಹುದು. 'ಪಾರಿವಾಳ ಪಕ್ಷಿ ' ಎಂದು ನಾವು ಹೇಳಿದಾಗ ಏಕೆ ಎಂಬ ಪ್ರಶ್ನೆ ಹುಟ್ಟುವುದು ಸಹಜ. ಆ ಪ್ರಶ್ನೆಗೆ ಉತ್ತರ ಹೇಳಿದ ಹೊರತು ಅದರ ಅರ್ಥ ವ್ಯಕ್ತವಾದಂತಾಗಲಿಲ್ಲ ; ಪ್ರತಿಜ್ಞೆಯಲ್ಲಿ ಹೇಳಿದುದು ಸ್ಥಿರಪಡುವುದಿಲ್ಲ. 'ಪಾರಿವಾಳಗಳು ಪಕ್ಷಿಗಳು, ಏಕೆಂದರೆ ಅವು ರೆಕ್ಕೆಯುಳ್ಳವು' ಎಂದು ಹೇಳಿದಾಗ ಅವು ಪಕ್ಷಿಗಳಾದುದಕ್ಕೆ ಕಾರಣ ಹೇಳಿದಂತಾಯಿತು. ಆದರೆ ರೆಕ್ಕೆಗಳಿಗೂ ಪಕ್ಷಿಗಳಿಗೂ ಏನು ಸಂಬಂಧ ಎಂಬುದನ್ನು ತಿಳಿಸಿದ ಹೊರತು ಕಾರಣ ಸ್ಥಿರಪಡುವುದಿಲ್ಲ. 'ಯಾವುವು ಪಕ್ಷಿಗಳೋ ಅವೆಲ್ಲವೂ ರೆಕ್ಕೆಗಳನ್ನು ಪಡೆದಿರುತ್ತವೆ' ಎಂದು ಹೇಳಿದಾಗ ಪಕ್ಷಿಗಳಿಗೂ ರೆಕ್ಕೆಗಳಿಗೂ ನಿಕಟಸಂಬಂಧವಿದೆ ಎಂಬುದನ್ನು ಸ್ಥಿರಪಡಿಸಿ ಪಾರಿವಾಳವು ರೆಕ್ಕೆಗಳನ್ನು ಪಡೆದಿರುವುದರಿಂದ ಅದು ಪಕ್ಷಿ ಎಂಬ ಪ್ರತಿಜ್ಞೆಯ ಅರ್ಥವನ್ನು ವಿಶದಪಡಿಸಿದಂತಾಯಿತು. ಸಮಧ್ಯಮ ಅನುಮಾನವನ್ನು ನ್ಯಾಯವಾಕ್ಯರೂಪದಲ್ಲಿ ಹೀಗೆ ಹೇಳಬಹುದು :

ಪಾರಿವಾಳ ಪಕ್ಷಿ
∵ ಪಾರಿವಾಳ ರೆಕ್ಕೆಗಳನ್ನು ಪಡೆದಿದೆ ;
ರೆಕ್ಕೆಗಳನ್ನು ಪಡೆದಿರುವ ಎಲ್ಲ ಪ್ರಾಣಿಗಳೂ ಪಕ್ಷಿಗಳು.

ಅಥವಾ

ರೆಕ್ಕೆಗಳನ್ನು ಪಡೆದಿರುವ ಎಲ್ಲ ಪ್ರಾಣಿಗಳೂ ಪಕ್ಷಿಗಳು,
ಪಾರಿವಾಳ ರೆಕ್ಕೆಗಳನ್ನು ಪಡೆದಿದೆ,
∴ ಪಾರಿವಾಳ ಪಕ್ಷಿ.

ಇಲ್ಲಿ 'ರೆಕ್ಕೆಗಳುಳ್ಳ ಎಲ್ಲ ಪ್ರಾಣಿಗಳೂ ಪಕ್ಷಿಗಳು' ಎಂಬ ವಿಶಾಲವಾದ ಸಾಮಾನ್ಯದ ತಿಳಿವನ್ನು ರೆಕ್ಕೆಗಳುಳ್ಳ ಒಂದು ಜಾತಿಯ ಪ್ರಾಣಿಗೆ ಅನ್ವಯಿಸಿದೆ ;

ವಿಸ್ತಾರವಾದ ಸಾಮಾನ್ಯದಿಂದ ಅದಕ್ಕಿಂತ ಕಡಮೆಯ ವಿಸ್ತಾರವುಳ್ಳ ಅಂಶಕ್ಕೆ ಇಳಿದಾಗ ಅದನ್ನು ನಿಗಮನ (Deduction) ಎಂದು ಕರೆಯುತ್ತೇವೆ. ನಮ್ಮ ಆಲೋಚನೆ ವಿಸ್ತಾರವಾದ ವ್ಯಾಪ್ತಿಯುಳ್ಳ ವಿಷಯದಿಂದ ಅದಕ್ಕಿಂತ ಕಡಮೆ ವ್ಯಾಪ್ತಿಯುಳ್ಳ ವಿಷಯದ ಕಡೆಗೆ ಹರಿದಿದೆ. ಹೀಗೆ ನಮ್ಮ ಆಲೋಚನೆ ಕಡಮೆ ವ್ಯಾಪ್ತಿಯುಳ್ಳ ಅಂಶಗಳನ್ನು ಪರಿಶೀಲಿಸಿ ಅವುಗಳಲ್ಲಿ ಅವ್ಯಕ್ತವಾಗಿರುವ ಹೆಚ್ಚು ವ್ಯಾಪಕವಾದ ಸಾಮಾನ್ಯವನ್ನು ವ್ಯಕ್ತಪಡಿಸಿದಾಗ, ಅಂದರೆ ಕಡಮೆ ವ್ಯಾಪ್ತಿಯುಳ್ಳ ವಿಷಯಗಳಿಂದ ಹೆಚ್ಚು ವ್ಯಾಪ್ತಿಯುಳ್ಳ ಸಾಮಾನ್ಯದ ಕಡೆಗೆ ಏರಿದಾಗ ಅದನ್ನು ಅನುಗಮನ (Induction) ಎಂದು ಕರೆಯುತ್ತೇವೆ.

## ಅಭ್ಯಾಸಗಳು (೮)

೧. ಒಂದು ಪ್ರತಿಜ್ಞೆಯ ಅರ್ಥವನ್ನು ಯಾವ ಯಾವ ರೀತಿಗಳಲ್ಲಿ ವ್ಯಕ್ತಪಡಿಸಬಹುದು? ಉದಾಹರಣೆಗಳನ್ನು ಕೊಡಿ.

೨. 'ಸಮಕ್ಷ' ಮತ್ತು 'ಸಮಧ್ಯಮ' ಅನುಮಾನಗಳಿಗಿರುವ ವ್ಯತ್ಯಾಸವನ್ನು ತಿಳಿಸಿ.

# ೯. ಸಮಕ್ಷ ಅನುಮಾನ

## (Immediate Inference)

ನಾವು ಹಿಂದಿನ ಅಧ್ಯಾಯದಲ್ಲಿ ಸಮಕ್ಷ ಅನುಮಾನ ಸಮಧ್ಯಮ ಅನುಮಾನ ಎಂಬ ಎರಡು ವಿಧವಾದ ಅನುಮಾನಗಳಿವೆ ಎಂದು ತಿಳಿದೆವಷ್ಟೆ. ಈಗ ಈ ಅಧ್ಯಾಯದಲ್ಲಿ ನೇರವಾದ ಅಥವಾ ಸಮಕ್ಷ[1] ಅನುಮಾನದ ಸ್ವಭಾವ (Nature) ವನ್ನೂ ಮತ್ತು ಅದರ ಬೇರೆಬೇರೆ ರೂಪ (Forms) ಗಳನ್ನೂ ವಿಚಾರ ಮಾಡೋಣ.

ನಾವು ಒಂದು ಪ್ರತಿಜ್ಞೆಯ ಸತ್ಯಾಸತ್ಯತೆಗಳಿಂದ ಬೇರೊಂದು ಪ್ರತಿಜ್ಞೆಯ ಸತ್ಯಾಸತ್ಯತೆಗಳನ್ನು ಅವರೆಡಕ್ಕೂ ಮಧ್ಯವರ್ತಿಯಾದ ಪ್ರತಿಜ್ಞೆಯ ಸಹಾಯ ವಿಲ್ಲದೆ ನೇರವಾಗಿ ನಿರ್ಧರಿಸುವುದು ಸಮಕ್ಷ ಅನುಮಾನ. 'ಎಲ್ಲ S ಗಳೂ P ಗಳಾಗಿರುತ್ತವೆ' ಎಂಬ ಪ್ರತಿಜ್ಞೆ ಸತ್ಯವಾದರೆ 'ಕೆಲವು S ಗಳು P ಗಳಾಗಿರುತ್ತವೆ' ಎಂಬುದು ಸತ್ಯವೆಂದು ಹೇಳಬಹುದು. ಏಕೆಂದರೆ 'ಎಲ್ಲ' ಎಂಬುದರಲ್ಲಿ 'ಕೆಲವು' ಎಂಬುದು ಸೇರಿದೆ. 'ಎಲ್ಲ S ಗಳೂ P ಗಳಾಗಿರುತ್ತವೆ' ಎಂಬುದು ಸತ್ಯವಾದರೆ 'S ಯಾವುದೂ P ಆಗಿರುವುದಿಲ್ಲ' ಎಂಬುದು ಅಸತ್ಯ ಎಂದು ನಿರ್ಧರಿಸಬಹುದು. ಏಕೆಂದರೆ 'ಎಲ್ಲವೂ ಆಗಿವೆ' ಎಂಬುದು 'ಯಾವುದೂ ಆಗಿಲ್ಲ' ಎಂಬುದನ್ನು ಬಹಿಷ್ಕರಿಸುತ್ತದೆ. ಹಾಗೆಯೇ 'ಎಲ್ಲ S ಗಳೂ P ಗಳಾಗಿವೆ' ಎಂಬ ಪ್ರತಿಜ್ಞೆ 'ಕೆಲವು S ಗಳು P ಗಳಾಗಿರುವುದಿಲ್ಲ' ಎಂಬುದನ್ನು ಬಹಿಷ್ಕರಿಸುತ್ತಾದ್ದರಿಂದ ಮೊದಲನೆಯದು ಸತ್ಯವಾದರೆ ಎರಡನೆಯದು ಅಸತ್ಯವಾಗುತ್ತದೆ ಎಂದು ನೇರವಾಗಿ ಹೇಳಬಹುದು.

ಹೀಗೆ ಒಂದು ಪ್ರತಿಜ್ಞೆಯ ಸತ್ಯಾಸತ್ಯತೆಯಿಂದ ಅಪ್ರತಿಜ್ಞೆಯ ಪದಗಳನ್ನೇ ಬೇರೆ ಬೇರೆ ವಿಧವಾಗಿ ವಿಷಯಿ (Subject) ಅಥವಾ ವಿಶೇಷಣ (Predicate) ವಾಗುಳ್ಳ ಇನ್ನೊಂದು ಪ್ರತಿಜ್ಞೆಯ ಸತ್ಯಾಸತ್ಯತೆಗಳನ್ನು ನಿರ್ಧರಿಸುವುದು ಬರಿಯ ಅರ್ಥನಿರೂಪಣೆಯಲ್ಲವೆ, ಅದು ಕೇವಲ 'ಶಾಬ್ದಬೋಧವಲ್ಲವೆ' ಅದು ನಿಜವಾಗಿ

---

[1] ಪಾಶ್ಚಾತ್ಯ ತಾರ್ಕಿಕರ ಸಮಕ್ಷ ಅನುಮಾನವು ಭಾರತೀಯ ತಾರ್ಕಿಕರ ಶಾಬ್ದ ಬೋಧಕ್ಕೆ ಸಮಾನವಾದುದು. "The Nyāya theory of Śābdabodha . . . is for all practical purposes the theory of import of propositions."

S. KUPPUSWAMI SASTRI, *A Primer of Indian Logic*, p. 335.

ಅನುಮಾನಕ್ರಿಯೆ ಎಂದು ಹೇಳಬಹುದೆ ಎಂಬ ಪ್ರಶ್ನೆ ಹುಟ್ಟುತ್ತದೆ. 'ಯಾವ ಮನುಷ್ಯನೂ ಸರ್ವಜ್ಞನಲ್ಲ' ಎಂಬ ಪ್ರತಿಜ್ಞೆ ಸತ್ಯವಾದರೆ 'ಸರ್ವಜ್ಞನಾದವನು ಯಾವನೂ ಮನುಷ್ಯನಲ್ಲ' ಎಂಬುದು ಸತ್ಯ ಎಂದು ಹೇಳಿದಾಗ ನಾವು ಮೊದಲ ನೆಯ ಪ್ರತಿಜ್ಞೆಯಲ್ಲಿ ಹೇಳಿದ್ದನ್ನೇ ಬೇರೆ ಮಾತಿನಲ್ಲಿ ಹೇಳುತ್ತಿರುವೆವಲ್ಲವೆ? ಒಂದು ವಿಷಯಕ್ಕೂ ಇನ್ನೊಂದು ವಿಷಯಕ್ಕೂ ಮಧ್ಯವರ್ತಿಯಾದ ವಿಷಯದ ಮೂಲಕ ಅವೆರಡರ ಸಂಬಂಧ ನಿರ್ಧರಿಸುವುದು ಅನುಮಾನದ ಕೆಲಸ. ಅದು ಒಂದು ಪ್ರತಿಜ್ಞೆಯಿಂದ ಒಂದು ಮಧ್ಯವರ್ತಿಯ ಮೂಲಕ ಹೊಸದೊಂದು ಪ್ರತಿಜ್ಞೆಯನ್ನು ಪಡೆಯುತ್ತದೆ. ಸಮಕ್ಷ ಅನುಮಾನದಲ್ಲಿ ನಾವು ಈ ರೀತಿಯಾದ ಹೊಸದೊಂದು ಪ್ರತಿಜ್ಞೆಯನ್ನು ಪಡೆದಿರುತ್ತೇವೆಯೆ ಅಥವಾ ಮೊದಲು ಹೇಳಿದ್ದನ್ನೇ ಬೇರೆಯ ಮಾತಿನಲ್ಲಿ ಹೇಳುತ್ತಿದ್ದೇವೆಯೆ? 'ಯಾವ ಮನುಷ್ಯನೂ ಸರ್ವಜ್ಞನಲ್ಲ' ಎಂಬ ಪ್ರತಿಜ್ಞೆಯಿಂದ 'ಸರ್ವಜ್ಞನಾದವನು ಮನುಷ್ಯನಲ್ಲ' ಎಂಬ ಪ್ರತಿಜ್ಞೆಗೆ ಸಾಗಿದಾಗ ನಾವು ಹೊಸದೊಂದು ವಿಷಯದ ಕಡೆಗೆ ಸಾಗಿಲ್ಲ. ಎರಡನೆಯ ಪ್ರತಿಜ್ಞೆ ಮೊದಲನೆಯ ಪ್ರತಿಜ್ಞೆಯಲ್ಲಿ ಅಡಗಿರುವ ಅರ್ಥವನ್ನೇ ವಿಷಯ ವಿಶೇಷಣಗಳನ್ನು ಅದಲುಬದಲು ಮಾಡಿ ತಿಳಿಸುತ್ತದೆ. ಆದರೂ ಇಲ್ಲಿ ನಡೆದಿರುವ ಕ್ರಿಯೆ ಬರಿಯ ಶಾಬ್ದಿಕ ಕ್ರಿಯೆಯಲ್ಲ. ಇಲ್ಲಿ ಜ್ಞಾನಕ್ರಿಯಾರೂಪವಾದ ಚಲನೆ ಇದೆ. ಇದರಿಂದ ಮೂಲಪ್ರತಿಜ್ಞೆಯ ಅರ್ಥ ಬೆಳೆಯದೆ ಇರಬಹುದು, ಹೊಸದೇನೂ ಬೋಧೆಯಾಗದಿರಬಹುದು. ಆದರೆ ಎರಡನೆಯ ಪ್ರತಿಜ್ಞೆ ಮೊದಲನೆಯ ಪ್ರತಿಜ್ಞೆಯ ಅರ್ಥವನ್ನು ಸ್ಪಷ್ಟಪಡಿಸುತ್ತದೆ. ಅನೇಕ ವೇಳೆ ಒಂದು ಪ್ರತಿಜ್ಞೆಯ ಅರ್ಥ ಸ್ಪಷ್ಟವಾಗದಿರುವುದರಿಂದ ವಾದದಲ್ಲಿ ದೋಷಗಳು ಹುಟ್ಟಿಕೊಳ್ಳುತ್ತವೆ. ಉದಾಹರಣೆಗೆ, 'ಎಲ್ಲ ಕಳ್ಳರೂ ಕೆಟ್ಟವರು' ಎಂಬ ಪ್ರತಿಜ್ಞೆಯನ್ನು ಆಧಾರವಾಗಿ ಇಟ್ಟುಕೊಂಡು 'ಕೆಟ್ಟವರೆಲ್ಲ ಕಳ್ಳರು' ಎಂದು ತಪ್ಪಾಗಿ ವಾದಿಸಬಹುದು. ಒಂದು ಪ್ರತಿಜ್ಞೆಯಲ್ಲಿ ಯಾವ ಯಾವ ಅರ್ಥ ಅಡಗಿದೆ ಎಂಬುದನ್ನೆಲ್ಲ ಸ್ಪಷ್ಟಪಡಿಸುವುದರಿಂದ ವಾದದಲ್ಲಿ ದೋಷ ಕಡಮೆಯಾಗುತ್ತದೆ. ಒಂದು ಪ್ರತಿಜ್ಞೆಯನ್ನು ಆಧಾರವಾಗಿ ಇಟ್ಟುಕೊಂಡು ಅದಕ್ಕೆ ಸಂಗತವಾದ ಅಥವಾ ಅಸಂಗತವಾದ ಅದೇ ವಿಷಯಿ ವಿಶೇಷಣಗಳುಳ್ಳ ಬೇರೆ ಯಾವ ಯಾವ ಪ್ರತಿಜ್ಞೆಗಳಿರಬಹುದು ಎಂಬುದನ್ನು ತಿಳಿಸುವುದು ನೇರವಾದ ಅನುಮಾನದ ಕೆಲಸ. ವಿಷಯವನ್ನು ಸ್ಪಷ್ಟಪಡಿಸಿ ಅಸ್ಪಷ್ಟತೆಯಿಂದ ಹುಟ್ಟಬಹುದಾದ ತಪ್ಪುಗಳನ್ನು ನಿವಾರಿಸುವುದು ಇದು ಮಾಡುವ ಸೇವೆ. ಸಮಧ್ಯಮ ಅನುಮಾನವು ಮಾಡುವ ಕೆಲಸವನ್ನು ಇದು ಮಾಡುವುದಿಲ್ಲ. ಒಂದು ಪ್ರತಿಜ್ಞೆಯಲ್ಲಿ ಅಡಗಿರುವ ಅರ್ಥವನ್ನು ಬೇರೊಂದು ಪ್ರತಿಜ್ಞೆ ಸ್ಪಷ್ಟಪಡಿಸುವುದರಿಂದ ಇದನ್ನು ಸಮಕ್ಷತರ್ಕವೆಂದು ಕರೆಯಲಾಗಿದೆ.

ಸಮಕ್ಷ ತರ್ಕವನ್ನು ಸಮಧ್ಯಮ ತರ್ಕವಲ್ಲವೆಂದು ತಿಳಿದುಕೊಂಡು ಅದನ್ನು ಒಂದು ಬಗೆಯ ಅನುಮಾನವೆಂದು ಕರೆದರೆ ಅದರಿಂದ ಬಾಧಕವಿಲ್ಲ.

## ೧ ಪ್ರತಿಜ್ಞೆಗಳ ಬಹಿಷ್ಕರಣ

ನಾವು ಒಂದು ಪ್ರತಿಜ್ಞೆಯಿಂದ ಹೊರಟು, ಅದು ಒಳಗೊಂಡಿರುವ ಇತರ ಪ್ರತಿಜ್ಞೆಗಳನ್ನು ನಿರ್ಧರಿಸಬಹುದು ಅಥವಾ ಅದು ಬಹಿಷ್ಕರಿಸುವ ಇತರ ಪ್ರತಿಜ್ಞೆಗಳನ್ನು ನಿರ್ಧರಿಸಬಹುದು. ಪ್ರತಿಜ್ಞೆಗಳು ಒಂದನ್ನೊಂದು ಒಳಗೊಳ್ಳುವುದನ್ನು ಅಥವಾ ಬಹಿಷ್ಕರಿಸುವುದನ್ನು ತಿಳಿಸುವುದಕ್ಕೆ ಪ್ರತಿಜ್ಞೆಗಳ ಬಹಿಷ್ಕರಣ* (Opposition of Propositions) ಎಂದು ಸಾಂಪ್ರದಾಯಿಕವಾಗಿ ಪಾಶ್ಚಾತ್ಯ ತಾರ್ಕಿಕರು ಹೆಸರುಕೊಟ್ಟಿರುತ್ತಾರೆ. ಪ್ರತಿಜ್ಞೆಗಳ ಬಹಿಷ್ಕರಣವನ್ನು ಮುಂದಿನ ಪುಟದಲ್ಲಿ ಕೊಟ್ಟಿರುವ ಚಿತ್ರರೂಪದಲ್ಲಿ ತಿಳಿಸುವುದು ವಾಡಿಕೆಯಾಗಿದೆ.

ನಾವು ಈಗಾಗಲೇ ಪ್ರತಿಜ್ಞೆಗಳನ್ನು A.E.I.O. ಎಂದು ನಾಲ್ಕು ವಿಧವಾಗಿ ವಿಂಗಡಿಸಿದ್ದೇವೆ. ಈ ಪ್ರತಿಜ್ಞೆಗಳು ಒಂದೇ ವಿಶೇಷ್ಯ ವಿಶೇಷಣ ಪದಗಳನ್ನು ಪಡೆದಿದ್ದಾಗ ಅವು ಒಂದನ್ನೊಂದು ಒಳಗೊಳ್ಳಬಹುದು, ಅಥವಾ ಒಂದನ್ನೊಂದು ಬಹಿಷ್ಕರಿಸಬಹುದು. ಒಂದನ್ನೊಂದು ಒಳಗೊಂಡಾಗ ಒಂದು ನಿಜವಾದರೆ ಇನ್ನೊಂದು ನಿಜವಾಗುತ್ತದೆ. ಒಂದನ್ನೊಂದು ಬಹಿಷ್ಕರಿಸಿದಾಗ ಒಂದು ಸತ್ಯವಾದರೆ ಇನ್ನೊಂದು ಅಸತ್ಯವಾಗುತ್ತದೆ. ಕೆಲವು ವೇಳೆ ಒಂದು ಸತ್ಯವಾದರೆ ಇನ್ನೊಂದು ಅಸತ್ಯ, ಒಂದು ಅಸತ್ಯವಾದರೆ ಇನ್ನೊಂದು ಸತ್ಯ ಎಂದು ಹೇಳಲಾಗುವುದಿಲ್ಲ. ಆಗ ಅವೆರಡರ ಸಂಬಂಧ ಸಂದಿಗ್ಧ (Doubtful) ವಾಗಿರುತ್ತದೆ.

A. E. I. O.—ಈ ನಾಲ್ಕು ಪ್ರತಿಜ್ಞೆಗಳ ಸಂಬಂಧ ಹಲವು ಬಗೆಯಾಗಿದೆ. A ಮತ್ತು E ಗಳು ಅತ್ಯಂತ ವಿರುದ್ಧ ಪ್ರತಿಜ್ಞೆಗಳು. A ಪ್ರತಿಜ್ಞೆ 'ಎಲ್ಲ S ಗಳೂ

---

* ಈ ನಾಲ್ಕು ಪ್ರತಿಜ್ಞೆಗಳಿಗಿರುವ ಎಲ್ಲ ಸಂಬಂಧಗಳು ವಿರುದ್ಧಸಂಬಂಧವಲ್ಲ. A ಪ್ರತಿಜ್ಞೆ I ಪ್ರತಿಜ್ಞೆಯನ್ನು ಬಹಿಷ್ಕರಿಸುವುದಿಲ್ಲ ; A ಪ್ರತಿಜ್ಞೆ I ಪ್ರತಿಜ್ಞೆಯನ್ನು ಒಳಗೊಂಡಿದೆ. ಹಾಗೆಯೇ E ಪ್ರತಿಜ್ಞೆ O ಪ್ರತಿಜ್ಞೆಯನ್ನು ಬಹಿಷ್ಕರಿಸುವುದಿಲ್ಲ, ಒಳಗೊಂಡಿರುತ್ತದೆ. ಆದ್ದರಿಂದ ಈ ಚೌಕವನ್ನು ವಿರೋಧಗಳ ಚೌಕ ಎಂದು ಕರೆಯುವುದು ತಪ್ಪು ಭಾವನೆಗೆ ಎಡೆಕೊಡುತ್ತದೆ. ಆದರೆ ಅದನ್ನು ವಿರೋಧಗಳ ಚೌಕ ಎಂದು ಕರೆಯುವುದು ರೂಢಿಗೆ ಬಂದುಬಿಟ್ಟಿದೆ. ಆದ್ದರಿಂದ ವಿರೋಧಗಳ ಚೌಕ ಒಂದನ್ನೊಂದು ಬಹಿಷ್ಕರಿಸುವ ಪ್ರತಿಜ್ಞೆಗಳನ್ನಲ್ಲದೆ ಒಂದನ್ನೊಂದು ಒಳಗೊಳ್ಳುವ ಪ್ರತಿಜ್ಞೆಗಳನ್ನು ಹೊಂದಿದೆ ಎಂದು ಪಾರಿಭಾಷಿಕವಾಗಿ ಅರ್ಥಮಾಡಿಕೊಳ್ಳಬೇಕು.

P ಗಳಾಗಿರುತ್ತವೆ' ಎಂದು ಹೇಳಿದರೆ E ಪ್ರತಿಜ್ಞೆಯು 'S ಯಾವುದೂ P ಆಗಿರುವುದಿಲ್ಲ' ಎಂದು ಹೇಳುತ್ತದೆ. ಈ ಅತ್ಯಂತ ವಿರುದ್ಧ ಪ್ರತಿಜ್ಞೆಗಳಿಗೆ




ವಿರೋಧಗಳ ಚೌಕ (Square of Opposition)

ಕಾಂಟ್ರರೀಸ್ (Contraries) ಎಂದು ಹೆಸರು. ಆದರೆ A ಮತ್ತು O, E ಮತ್ತು I ಗಳು ಅತ್ಯಂತ ವಿರುದ್ಧ ಪ್ರತಿಜ್ಞೆಗಳಲ್ಲ. ಅವೆರಡಕ್ಕೂ ಇರುವ ವಿರೋಧ ಮಿತವಾದ ವಿರೋಧ. A ಪ್ರತಿಜ್ಞೆ 'ಎಲ್ಲ S ಗಳೂ P ಆಗಿರುತ್ತವೆ' ಎಂದರೆ O ಪ್ರತಿಜ್ಞೆ 'ಕೆಲವು S ಗಳು P ಗಳಾಗಿರುವುದಿಲ್ಲ' ಎಂದು ಹೇಳುತ್ತದೆ. E ಪ್ರತಿಜ್ಞೆ 'S ಯಾವುದೂ P ಆಗಿರುವುದಿಲ್ಲ' ಎಂದು ಹೇಳಿದರೆ ಪ್ರತಿಜ್ಞೆ 'ಕೆಲವು S ಗಳು P ಗಳಾಗಿರುತ್ತವೆ' ಎಂದು ಹೇಳುತ್ತದೆ. ಈ ಮಿತವಿರುದ್ಧ ಪ್ರತಿಜ್ಞೆಗಳನ್ನು ಕಾಂಟ್ರಡಿಕ್ಟರೀಸ್ (Contradictories) ಎಂದು ಕರೆಯು

ವುದು ವಾಡಿಕೆ. ಇವುಗಳಲ್ಲಿ ಒಂದು ಸತ್ಯವಾದರೆ ಇನ್ನೊಂದು ಅಸತ್ಯವಾಗಲೇ ಬೇಕು; ಒಂದು ಅಸತ್ಯವಾದರೆ ಇನ್ನೊಂದು ಸತ್ಯವಾಗಲೇಬೇಕು. ಒಂದು ಪ್ರತಿಜ್ಞೆ ಅಸತ್ಯ ಎಂಬುದನ್ನು ತೋರಿಸಬೇಕಾದರೆ ಎಷ್ಟು ಹೇಳಿದರೆ ಸಾಕೋ ಅಷ್ಟನ್ನು ಮಾತ್ರ ಕಾಂಟ್ರಡಿಕ್ಟರಿ ಪ್ರತಿಜ್ಞೆ ಹೇಳುತ್ತದೆ. 'ಎಲ್ಲ ಹಸುಗಳೂ ಗಬ್ಬವಾಗಿವೆ' ಎಂಬುದು ಅಸತ್ಯ ಎಂದು ತೋರಿಸಲು 'ಕೆಲವು ಹಸುಗಳು ಗಬ್ಬವಾಗಿಲ್ಲ' ಎಂದು ಹೇಳಿದರೆ ಸಾಕು; 'ಯಾವ ಹಸುವೂ ಗಬ್ಬವಾಗಿಲ್ಲ' ಎಂದು ಹೇಳುವ ಆವಶ್ಯಕತೆ ಇಲ್ಲ. ಒಂದು ಪ್ರತಿಜ್ಞೆಯನ್ನು ತಿರಸ್ಕರಿಸಲು ಎಷ್ಟು ಬೇಕೋ ಅಷ್ಟು ಮಾತ್ರ ಮಿತವಿರೋಧವನ್ನು ಕಾಂಟ್ರಡಿಕ್ಟರಿ ಹೇಳಿದರೆ, ಕಾಂಟ್ರರಿ ಪ್ರತಿಜ್ಞೆಯು ಇನ್ನೂ ಮುಂದೆ ಹೋಗಿ ಪರಮವಿರೋಧವನ್ನು ಸಾರುತ್ತದೆ. ಎರಡು ಅತ್ಯಂತ ವಿರುದ್ಧ ಪ್ರತಿಜ್ಞೆಗಳಲ್ಲಿ (Contrary Propositions) ಒಂದು ಸತ್ಯವಾದರೆ ಇನ್ನೊಂದು ಖಂಡಿತವಾಗಿಯೂ ಅಸತ್ಯ ಎಂದು ಹೇಳಬಹುದೇ ಹೊರತು ಒಂದು ಅಸತ್ಯವಾದರೆ ಇನ್ನೊಂದು ಸತ್ಯ ಎಂದು ಹೇಳಲಾಗುವುದಿಲ್ಲ. ಏಕೆಂದರೆ ಎರಡೂ ಅಸತ್ಯವಾಗಿರಬಹುದು.

I ಮತ್ತು O ಪ್ರತಿಜ್ಞೆಗಳು ವಿರುದ್ಧ ಪ್ರತಿಜ್ಞೆಗಳು. ಆದರೆ ಅವೆರಡರ ಸಂಬಂಧ ಕಾಂಟ್ರರಿ ಸಂಬಂಧವೂ ಅಲ್ಲ, ಕಾಂಟ್ರಡಿಕ್ಟರಿ ಸಂಬಂಧವೂ ಅಲ್ಲ. ಇವೆರಡನ್ನೂ ಕಾಂಟ್ರರಿಗಳಿಂದ ಮತ್ತು ಕಾಂಟ್ರಡಿಕ್ಟರಿಗಳಿಂದ ಪ್ರತ್ಯೇಕಿಸಲು ಇವುಗಳನ್ನು ಉಪವಿರೋಧಿಗಳು, ಸಬ್‌ಕಾಂಟ್ರರೀಸ್ (Sub-contraries) ಎಂದು ಕರೆಯುವುದು ವಾಡಿಕೆ. ಕಾಂಟ್ರರಿಗಳು ಎರಡೂ ಅಸತ್ಯವಾಗಬಹುದು, ಎರಡೂ ಸತ್ಯವಾಗಲಾರವು. ಆದರೆ ಸಬ್ ಕಾಂಟ್ರರಿಗಳು ಎರಡೂ ಸತ್ಯವಾಗಬಹುದು, ಎರಡೂ ಅಸತ್ಯವಾಗಲಾರವು. ಅವುಗಳಲ್ಲಿ ಒಂದು ಅಸತ್ಯವಾದರೆ ಇನ್ನೊಂದು ಸತ್ಯವಾಗಲೇಬೇಕು. ಆದರೆ ಒಂದು ಸತ್ಯವಾದರೆ ಇನ್ನೊಂದು ಅಸತ್ಯವಾಗಬೇಕಾದ್ದಿಲ್ಲ. ಸಬ್‌ಕಾಂಟ್ರರಿಗಳು ಕಾಂಟ್ರರಿಗಳಿಂದ ಭಿನ್ನವಾಗಿರುವಂತೆಯೇ ಕಾಂಟ್ರಡಿಕ್ಟರಿಗಳಿಂದಲೂ ಭಿನ್ನವಾಗಿವೆ. ಕಾಂಟ್ರಡಿಕ್ಟರಿಗಳಲ್ಲಿ ಎರಡೂ ಸತ್ಯವಾಗಲಾರವು ಆದರೆ ಸಬ್‌ಕಾಂಟ್ರರಿಗಳು ಎರಡು ಸತ್ಯವಾಗಬಹುದು. ಅವು ಒಂದನ್ನೊಂದು ಬಹಿಷ್ಕರಿಸದಿರಬಹುದು. 'ಕೆಲವರು ಸುಳ್ಳು ಹೇಳುತ್ತಾರೆ' ಎಂಬ ಪ್ರತಿಜ್ಞೆ 'ಕೆಲವರು ಸುಳ್ಳು ಹೇಳುವುದಿಲ್ಲ' ಎಂಬುದನ್ನು ಬಹಿಷ್ಕರಿಸುವುದಿಲ್ಲ. ಆದರೆ ಕಾಂಟ್ರಡಿಕ್ಟರಿಗಳಲ್ಲಿ ಒಂದು ಅಸತ್ಯವಾದರೆ ಇನ್ನೊಂದು ಸತ್ಯ ಎಂದು ಹೇಳಲು ಸಾಧ್ಯವಾಗಿರುವಂತೆಯೇ ಎರಡು ಸಬ್‌ಕಾಂಟ್ರರಿಗಳಲ್ಲಿ ಒಂದು ಅಸತ್ಯವಾದರೆ ಇನ್ನೊಂದು ಸತ್ಯ ಎಂದು ಖಂಡಿತವಾಗಿ ಹೇಳಬಹುದು.

ಪ್ರತಿಜ್ಞೆಗಳ ಸಂಬಂಧಗಳಲ್ಲಿ ನಾವು ವಿಚಾರಮಾಡದೆ ಉಳಿದಿರುವುದು A ಮತ್ತು I, E ಮತ್ತು O ಗಳ ಸಂಬಂಧ. A ಮತ್ತು I, E ಮತ್ತು O ಗಳಿಗೆ ಇರುವ ಸಂಬಂಧ ಸಬಾಲ್ಟರ್ನ್ (Subaltern) ಅಧೀನ ಸಂಬಂಧ I ಯು A ಗೆ ಅಧೀನ, O ವು E ಗೆ ಅಧೀನ. ಮೊದಲನೆಯದು ಹೆಚ್ಚು ವ್ಯಾಪಕ ವಾದುದು, ಎರಡನೆಯದು ಕಡಮೆ ವ್ಯಾಪನೆಯುಳ್ಳದ್ದು ; ಮೊದಲನೆಯದು ಎರಡನೆಯದನ್ನು ಒಳಗೊಂಡಿದೆ. ಆದ್ದರಿಂದ A ಸತ್ಯವಾದರೆ I ಸತ್ಯ ಎಂಬುದು ಸ್ವತಃಸಿದ್ಧ, E ಸತ್ಯವಾದರೆ O ಸತ್ಯ ಎಂಬುದು ಸ್ವತಃಸಿದ್ಧ. ಆದರೆ I ಸತ್ಯ ವಾದರ A ಸತ್ಯವೆಂದೂ, O ಸತ್ಯವಾದರೆ E ಸತ್ಯವೆಂದೂ ಹೇಳಲಾಗುವುದಿಲ್ಲ. ಏಕೆಂದರೆ ಕೆಲವನ್ನು ಕುರಿತು ಹೇಳಿದ್ದನ್ನು ಎಲ್ಲಕ್ಕೂ ಅನ್ವಯಮಾಡಲಾಗುವು ದಿಲ್ಲ. ಆದರೆ ಕಡಮೆ ವ್ಯಾಪ್ತಿಯುಳ್ಳದ್ದು ಅಸತ್ಯವೆಂದು ತಿಳಿದಾಗ ಅದಕ್ಕೆ ಸಂಬಂಧಪಟ್ಟ ಹೆಚ್ಚು ವ್ಯಾಪ್ತಿಯುಳ್ಳ ಪ್ರತಿಜ್ಞೆ ಅಸತ್ಯವೆಂದು ಘಂಟಾ ಘೋಷವಾಗಿ ಹೇಳಬಹುದು. 'ಕೆಲವರು ಎಲ್ಲವನ್ನೂ ತಿಳಿದವರು' ಎಂಬುದು ಅಸತ್ಯವಾದರೆ 'ಎಲ್ಲರೂ ಎಲ್ಲವನ್ನೂ ತಿಳಿದವರು' ಎಂಬ ಪ್ರತಿಜ್ಞೆ ಅಸತ್ಯ ಎಂಬುದು ಖಂಡಿತ. ಹಾಗೆಯೇ 'ಕೆಲವರು ಜಯಶೀಲರಾಗಲಿಲ್ಲ' ಎಂಬ ಪ್ರತಿಜ್ಞೆ ಅಸತ್ಯವಾದರೆ 'ಯಾರೂ ಜಯಶೀಲರಾಗಲಿಲ್ಲ' ಎಂಬ ಪ್ರತಿಜ್ಞೆ ಅಸತ್ಯ.

ಮೇಲೆ ಹೇಳಿದ A. E. I. O ಗಳ ಬೇರೆ ಬೇರೆ ಸಂಬಂಧಗಳನ್ನು ಸುಲಭ ವಾಗಿ ಗ್ರಹಿಸುವಂತೆ ಅವುಗಳಿಗಿರುವ ಸಂಬಂಧವನ್ನು ಸೂತ್ರರೂಪವಾಗಿ ತಿಳಿಸಬಹುದು.

(೧) ಅತ್ಯಂತ ವಿರುದ್ಧ (ಕಾಂಟ್ರರಿ) ಪ್ರತಿಜ್ಞೆಗಳಲ್ಲಿ ಒಂದು ಅಸತ್ಯವಾದರೆ, ಇನ್ನೊಂದು ಸತ್ಯ. ಆದರೆ ಒಂದು ಅಸತ್ಯವಾದರೆ ಇನ್ನೊಂದು ಸತ್ಯ ಎಂದು ಹೇಳಲಾಗುವುದಿಲ್ಲ. ಏಕೆಂದರೆ ಎರಡೂ ಅಸತ್ಯವಾಗಿರಬಹುದು.

(೨) ಮಿತವಿರೋಧಿ (Contradictory) ಪ್ರತಿಜ್ಞೆಗಳಲ್ಲಿ ಒಂದು ಸತ್ಯ ವಾಗಿರಲೇಬೇಕು. ಒಂದು ಸತ್ಯವಾದರೆ ಇನ್ನೊಂದು ಅಸತ್ಯ. ಒಂದು ಅಸತ್ಯವಾದರೆ ಇನ್ನೊಂದು ಸತ್ಯ. ಎರಡೂ ಅಸತ್ಯವಾಗಲಾರವು.

(೩) A ಆಗಲಿ E ಆಗಲಿ, ಸಾಮಾನ್ಯ (Universal) ಪ್ರತಿಜ್ಞೆ ಸತ್ಯವಾದರೆ ಅದಕ್ಕೆ ಅಧೀನವಾದ (Subaltern) ಪ್ರತಿಜ್ಞೆಯೂ ಸತ್ಯ ; ಆದರೆ ಸಾಮಾನ್ಯ ಪ್ರತಿಜ್ಞೆ ಅಸತ್ಯವಾದರೆ ಅದಕ್ಕೆ ಅಧೀನವಾದ ಪ್ರತಿಜ್ಞೆ ಸತ್ಯವಾಗಿಯಾದರೂ ಇರಬಹುದು, ಅಸತ್ಯವಾಗಿಯಾದರೂ ಇರಬಹುದು.

(೪) I ಆಗಲಿ O ಆಗಲಿ—ಅಧೀನ ಪ್ರತಿಜ್ಞೆ ಸತ್ಯವಾದರೆ ತತ್ಸಂಬಂಧವಾದ A ಅಥವಾ E ಪ್ರತಿಜ್ಞೆ ಸತ್ಯವಾಗಿ ಇರಬಹುದು ಅಥವಾ ಅಸತ್ಯವಾಗಿ ಇರಬಹುದು. ಆದರೆ ಅಧೀನ ಪ್ರತಿಜ್ಞೆ ಅಸತ್ಯವಾದರೆ ಅದಕ್ಕೆ ಸಂಬಂಧಿಸಿದ ಸಾಮಾನ್ಯ ಪ್ರತಿಜ್ಞೆ ಅಸತ್ಯವಾಗಲೇಬೇಕು.

(೫) ಸಬ್‌ಕಾಂಟ್ರರಿಗಳು (ಉಪವಿರೋಧಿಗಳು) ಎರಡೂ ಸತ್ಯವಾಗಿರಬಹುದು; ಆದರೆ ಅವುಗಳಲ್ಲಿ ಒಂದು ಅಸತ್ಯವಾದರೆ ಇನ್ನೊಂದು ಸತ್ಯವಾಗಿರಲೇಬೇಕು.

ಈ ಸೂತ್ರಗಳಲ್ಲಿ ಹೇಳಿರುವುದನ್ನೇ A. E. I. O. ಗಳಿಗೆ ಅನ್ವಯಿಸಿ ಅವುಗಳ ಸತ್ಯಾಸತ್ಯಸಂಬಂಧಗಳನ್ನು ಒಂದು ಪಟ್ಟಿಯ ರೂಪದಲ್ಲಿ ಕೊಡಬಹುದು.

| | A | E | I | O |
|---|---|---|---|---|
| A ಸತ್ಯವಾದರೆ | ಸತ್ಯ | ಅಸತ್ಯ | ಸತ್ಯ | ಅಸತ್ಯ |
| E ಸತ್ಯವಾದರೆ | ಅಸತ್ಯ | ಸತ್ಯ | ಅಸತ್ಯ | ಸತ್ಯ |
| I ಸತ್ಯವಾದರೆ | ಸಂದೇಹಕರ | ಅಸತ್ಯ | ಸತ್ಯ | ಸಂದೇಹಕರ |
| O ಸತ್ಯವಾದರೆ | ಅಸತ್ಯ | ಸಂದೇಹಕರ | ಸಂದೇಹಕರ | ಸತ್ಯ |

| | A | E | I | O |
|---|---|---|---|---|
| A ಅಸತ್ಯವಾದರೆ | ಅಸತ್ಯ | ಸಂದೇಹಕರ | ಸಂದೇಹಕರ | ಸತ್ಯ |
| E ಅಸತ್ಯವಾದರೆ | ಸಂದೇಹಕರ | ಸತ್ಯ | ಸತ್ಯ | ಸಂದೇಹಕರ |
| I ಅಸತ್ಯವಾದರೆ | ಅಸತ್ಯ | ಸತ್ಯ | ಅಸತ್ಯ | ಸಂದೇಹಕರ |
| O ಅಸತ್ಯವಾದರೆ | ಸತ್ಯ | ಸಂದೇಹಕರ | ಸಂದೇಹಕರ | ಅಸತ್ಯ |

ಈ ವಿರುದ್ಧ ಸಂಬಂಧಗಳ ಪ್ರಕರಣವನ್ನು ಮುಗಿಸುವ ಮುನ್ನ ಒಂದು ವಿಶೇಷ ವಿಷಯವನ್ನು ಗಮನಿಸಬೇಕು. ಅತ್ಯಂತ ವಿರುದ್ಧ ಪ್ರತಿಜ್ಞೆ (Contrary Propositions) ಗಳ ವಿಶೇಷ್ಯಪದ ರೂಢನಾಮವಾಗಿರದೆ ಅಂಕಿತನಾಮವಾಗಿದ್ದಾಗ ನಾವು ಕಾಂಟ್ರರಿಗಳ ಸಂಬಂಧದ ವಿಚಾರ ವಾಗಿ ಹೇಳಿದ ಸೂತ್ರ ಅಂಕಿತನಾಮಗಳುಳ್ಳ ವಿರುದ್ಧ ಪ್ರತಿಜ್ಞೆಗಳಿಗೆ ಅನ್ವಯಿಸುವುದಿಲ್ಲ. ರೂಢನಾಮಗಳುಳ್ಳ ಅತ್ಯಂತ ವಿರುದ್ಧ ಪ್ರತಿಜ್ಞೆಗಳಲ್ಲಿ ಒಂದು ಸತ್ಯವಾದರೆ ಇನ್ನೊಂದು ಅಸತ್ಯ ಎಂದು ಹೇಳಬಹುದು; ಒಂದು ಅಸತ್ಯವಾದರೆ ಇನ್ನೊಂದು ಸತ್ಯ ಎಂದು ಹೇಳಲಾಗುವುದಿಲ್ಲ. ಆದರೆ ಅಂಕಿತ ನಾಮಗಳುಳ್ಳ ಎರಡು ವಿರುದ್ಧ ಪ್ರತಿಜ್ಞೆಗಳಲ್ಲಾದರೂ ಒಂದು ಅಸತ್ಯ ಎಂದು ತಿಳಿದರೆ ಇನ್ನೊಂದು ಸತ್ಯ ಎಂದು ಹೇಳಬಹುದು. 'ರಾಮನು ಕಳ್ಳ' ಎಂಬ ಪ್ರತಿಜ್ಞೆ ಅಸತ್ಯವಾದರೆ 'ರಾಮನು ಕಳ್ಳನಲ್ಲ' ಎಂಬ ವಿರುದ್ಧ ಪ್ರತಿಜ್ಞೆ ಸತ್ಯವಾಗುತ್ತದೆ. ಅಂಕಿತನಾಮಗಳುಳ್ಳ ವಿರುದ್ಧ ಪ್ರತಿಜ್ಞೆಗಳು ರೂಪದಲ್ಲಿ ಕಾಂಟ್ರರಿಗಳಾಗಿ ಕಂಡರೂ ಅವಕ್ಕೆ ಕಾಂಟ್ರಡಿಕ್ಟರಿಗಳ ಬಲವಿದೆ. ಕಾಂಟ್ರಡಿಕ್ಟರಿಗಳಲ್ಲಿ ಒಂದು ಅಸತ್ಯವಾದರೆ ಇನ್ನೊಂದು ಸತ್ಯ ಎಂದು ಹೇಳಲು ಸಾಧ್ಯ ವಾಗುವಂತೆಯೇ ಅಂಕಿತನಾಮವುಳ್ಳ ಕಾಂಟ್ರರಿಗಳಲ್ಲಿ ಒಂದು ಅಸತ್ಯವಾದರೆ ಇನ್ನೊಂದು ಸತ್ಯ ಎಂದು ಹೇಳಲು ಸಾಧ್ಯ.

ಈ ಸಂದರ್ಭದಲ್ಲಿ ಅಂಕಿತನಾಮವುಳ್ಳ ವಿರುದ್ಧ ಪ್ರತಿಜ್ಞೆಗಳ ವಿಚಾರವಾಗಿ ಇನ್ನೂ ಒಂದು ಅಂಶವನ್ನು ನಾವು ಗಮನಿಸಬೇಕು. ರೂಢನಾಮಗಳುಳ್ಳ ಕಾಂಟ್ರರಿಗಳಿಗೆ ಸಬ್‌ಕಾಂಟ್ರರಿಗಳಿವೆ (ಉಪವಿರುದ್ಧ ಪ್ರತಿಜ್ಞೆಗಳಿವೆ), ಸಬಾಲ್ಟರ್ನ್ (ಅಧೀನ ಪ್ರತಿಜ್ಞೆ)ಗಳಿವೆ. ಆದರೆ ಅಂಕಿತನಾಮಗಳುಳ್ಳ ವಿರುದ್ಧ ಪ್ರತಿಜ್ಞೆಗಳಿಗೆ ಸಬ್‌ಕಾಂಟ್ರರಿಗಳಿಲ್ಲ, ಸಬಾಲ್ಟರ್ನ್‌ಗಳಿಲ್ಲ.

### ೨. ವಿಘಟನೆ (Eduction)

ಹೀಗೆ ಒಂದು ಪ್ರತಿಜ್ಞೆಯ ಸತ್ಯಾಸತ್ಯತೆಗಳನ್ನು ಆಧಾರವಾಗಿ ಇಟ್ಟು ಕೊಂಡು ಅದಕ್ಕೆ ಎದುರುಬದರಾದ ಇತರ ಪ್ರತಿಜ್ಞೆಗಳು ಸತ್ಯ ಅಥವಾ ಅಸತ್ಯ ಎಂದು ನೇರವಾಗಿ ಅನುಮಾನದ ಮೂಲಕ ನಿರ್ಧರಿಸಬಹುದಲ್ಲದೆ, ಒಂದು ಪ್ರತಿಜ್ಞೆಯನ್ನು ಸತ್ಯವೆಂದು ಇಟ್ಟುಕೊಂಡು ಆ ಪ್ರತಿಜ್ಞೆಯ ವಿಶೇಷ್ಯ ವಿಶೇಷಣ ಪದಗಳನ್ನು (೧) ಅದಲುಬದಲು ಮಾಡಿ, ಅಥವಾ (೨) ಅವುಗಳ ವಿರುದ್ಧರೂಪ (ನೇತ್ಯರ್ಥಕರೂಪ) ವನ್ನು ಉಪಯೋಗಿಸಿ ಕೊಂಡು, ಅಥವಾ (೩) ಒಂದೇ ಪ್ರತಿಜ್ಞೆಯಲ್ಲಿ ಈ ಎರಡು ವಿಧವಾದ ವಾದ

ಬದಲಾವಣೆಗಳನ್ನೂ ಮಾಡಿ ಸಮಕ್ಷ ಅನುಮಾನದ ಮೂಲಕ ಮೂಲ ಪ್ರತಿಜ್ಞೆಗೆ ಹೊಂದಿಕೊಳ್ಳುವ ಅಥವಾ ಸಂಗತವಾದ (Consistent) ಹಲವು ಪ್ರತಿಜ್ಞೆಗಳನ್ನು ಪಡೆಯಬಹುದು. ಈ ವಿಧವಾದ ಸಮಕ್ಷ ಅನುಮಾನಕ್ರಿಯೆಗೆ ವಿಘಟನೆ (Eduction) ಎಂದು ಹೆಸರು. ವಿಘಟನೆಯ ರೂಪಗಳು ಏಳು. (೧) 'ಎಲ್ಲ ಸಸ್ತನಿಗಳೂ ಬೆನ್ನೆಲುಬುಳ್ಳ ಪ್ರಾಣಿಗಳು' (ಎಲ್ಲ S ಗಳೂ P ಗಳಾಗಿರುತ್ತವೆ) ಎಂಬ ಪ್ರತಿಜ್ಞೆ ಸತ್ಯವೆಂದು ಆಧಾರವಾಗಿ ಇಟ್ಟುಕೊಂಡು, ಅದರ ವಿಶೇಷ್ಯ ವಿಶೇಷಣಪದಗಳನ್ನು ಅದಲುಬದಲು ಮಾಡಿ ಮೂಲ ಪ್ರತಿಜ್ಞೆಗೆ ಸಂಗತವಾಗಿ 'ಕೆಲವು ಬೆನ್ನೆಲುಬುಳ್ಳ ಪ್ರಾಣಿಗಳು ಸಸ್ತನಿಗಳು' ಎಂದು ಹೇಳಬಹುದು. ಇದನ್ನೇ ಸಂಜ್ಞೆಗಳನ್ನು ಬಳಸಿಕೊಂಡು ಹೇಳಿದರೆ SaP=PiS ಎಂದಾಗುವುದು. ಈ ವಿಧವಾದ ವಿಘಟನೆಗೆ ಕನ್‌ವರ್ಷನ್ (Conversion) ಎಂದು ಹೆಸರು. (೨) ಅಥವಾ ಮೂಲಪ್ರತಿಜ್ಞೆಯ ವಿಶೇಷಣ ಪದವನ್ನು ಅದಕ್ಕೆ ಪ್ರತಿಯಾದ ರೂಪವಾಗಿ ಮಾರ್ಪಡಿಸಿ, ಅಂದರೆ ಬೆನ್ನು ಮೂಳೆಯುಳ್ಳ ಪ್ರಾಣಿ ಎಂಬುದನ್ನು ಬೆನ್ನುಮೂಳೆ ಇಲ್ಲದ ಪ್ರಾಣಿ ಎಂದು ಬದಲಾಯಿಸಿ, ಮೂಲಪ್ರತಿಜ್ಞೆಗೆ ಸಂಗತವಾಗಿರುವಂತೆ 'ಯಾವ ಸಸ್ತನಿಯೂ ಬೆನ್ನುಮೂಳೆ ಇಲ್ಲದ ಪ್ರಾಣಿಯಲ್ಲ' ಎಂದು ಹೇಳಬಹುದು. ಇದನ್ನು ಸಂಜ್ಞಾ ರೂಪದಲ್ಲಿ ಹೇಳಿದಾಗ SaP=SeP'[1] ಆಗುವುದು. ಈ ವಿಘಟನೆಗೆ ಅಬ್‌ವರ್ಷನ್ (Obversion) ಎಂದು ಹೆಸರು. (೩) ವಿಶೇಷ್ಯ ವಿಶೇಷಣಪದಗಳನ್ನು ಅದಲುಬದಲುಮಾಡಿ ವಿಶೇಷ್ಯಪದವನ್ನು ಅದರ ವಿರುದ್ಧ ಪದವಾಗಿ ರೂಪಾಂತರ ಗೊಳಿಸಿದಾಗ ಇನ್ನೊಂದು ಬಗೆಯಾದ ವಿಘಟನೆ ಹುಟ್ಟುತ್ತದೆ. 'ಕೆಲವು ಬೆನ್ನೆಲುಬುಳ್ಳ ಪ್ರಾಣಿಗಳು ಸ್ತನವಿಲ್ಲದುವುಗಳಲ್ಲ' (PoS'). ಈ ವಿಘಟನೆಗೆ ಅಬ್‌ವರ್ಟೆಡ್ ಕನ್‌ವರ್ಷನ್ (Obverted Conversion) ಎಂದು ಹೆಸರು. (೪) ಮೂಲಪ್ರತಿಜ್ಞೆಯ ವಿಶೇಷಣಪದದ ವಿರುದ್ಧರೂಪವನ್ನು ವಿಶೇಷ್ಯವಾಗಿ ಇಟ್ಟುಕೊಂಡು ಮೂಲಪ್ರತಿಜ್ಞೆಗೆ ಸಂಗತವಾದ ಒಂದು ಪ್ರತಿಜ್ಞೆಯನ್ನು ಪಡೆಯಬಹುದು. ಹೀಗೆ ವಿಘಟಿಸಿದಾಗ 'ಎಲ್ಲ ಸಸ್ತನಿಗಳೂ ಬೆನ್ನೆಲುಬುಳ್ಳವು' (SaP) ಎಂಬ ಪ್ರತಿಜ್ಞೆ 'ಯಾವ ಬೆನ್ನೆಲುಬಿಲ್ಲದ ಪ್ರಾಣಿಯೂ ಸಸ್ತನಿಯಾಗಿರುವುದಿಲ್ಲ' (P'eS) ಎಂದು ಆಗುವುದು. ಈ ವಿಘಟನಾಕ್ರಿಯೆಗೆ ಕಾಂಟ್ರಾಪೊಸಿಷನ್ (Contraposition) ಎಂದು ಹೆಸರು. (೫) ವಿಶೇಷ್ಯ ವಿಶೇಷಣಗಳನ್ನು ಅದಲುಬದಲು ಮಾಡಿ, ಅವೆರಡನ್ನೂ ವಿರುದ್ಧಪದಗಳಾಗಿ

[1] P', S' ಎಂಬುವು Not-P, Not-S ಎಂಬುವಕ್ಕೆ ಸಮನಾದ ಸಂಜ್ಞೆಗಳು

ರೂಪಾಂತರಗೊಳಿಸಿದಾಗ "ಎಲ್ಲ ಎಲುಬಿಲ್ಲದ ಪ್ರಾಣಿಗಳೂ ಸಸ್ತನಿಗಳಲ್ಲದವಾಗಿರುತ್ತವೆ" P'aS' ಎಂದು ಆಗುತ್ತದೆ. ಈ ವಿಘಟನೆಗೆ ಫುಲ್ ಕಾಂಟ್ರಪೊಸಿಷನ್ (Full Contraposition) ಎಂದು ಹೆಸರು. (೬) ವಿಶೇಷ್ಯಪದದ ವಿರುದ್ಧರೂಪವನ್ನು (S') ವಿಶೇಷ್ಯವಾಗಿ ಇಟ್ಟುಕೊಂಡು ಮೂಲಪ್ರತಿಜ್ಞೆಗೆ ಸಂಗತವಾದ ಪ್ರತಿಜ್ಞೆಯನ್ನು ವಿಘಟಿಸಿದಾಗ 'ಕೆಲವು ಸ್ತನವಿಲ್ಲದ ಪ್ರಾಣಿಗಳು ಎಲುಬುಳ್ಳ ಪ್ರಾಣಿಗಳಾಗಿರುವುದಿಲ್ಲ' (S'oP) ಎಂದು ಆಗುತ್ತದೆ. ಈ ವಿಧವಾದ ವಿಘಟನೆಗೆ ಇನ್‌ವರ್ಷನ್ (Inversion) ಎಂದು ಹೆಸರು. (೭) ಕೊನೆಯದಾಗಿ, ವಿಶೇಷ್ಯ ಮತ್ತು ವಿಶೇಷಣಪದಗಳ ವಿರುದ್ಧರೂಪಗಳನ್ನು ವಿಶೇಷ್ಯ ವಿಶೇಷಣಗಳಾಗಿ ಇಟ್ಟುಕೊಂಡು ಮೂಲಪ್ರತಿಜ್ಞೆಯನ್ನು ವಿಘಟಿಸಿದಾಗ 'ಕೆಲವು ಸ್ತನಗಳಿಲ್ಲದ ಪ್ರಾಣಿಗಳು ಬೆನ್ನೆಲುಬಿಲ್ಲದ ಪ್ರಾಣಿಗಳಾಗಿರುತ್ತವೆ' (S'iP') ಎಂದು ಆಗುತ್ತದೆ. ಈ ವಿಘಟನೆಗೆ ಫುಲ್ ಇನ್‌ವರ್ಷನ್ (Full Inversion) ಎಂದು ಹೆಸರು. ಈ ವಿಘಟನೆಗಳಲ್ಲಿ ಆಬ್‌ವರ್ಷನ್ ಮತ್ತು ಕನ್‌ವರ್ಷನ್ ಮೂಲಭೂತವಾದುವು. ಇವುಗಳನ್ನು ವಿಧವಿಧವಾಗಿ ಸೇರಿಸಿಕೊಳ್ಳುವುದರಿಂದ ಇತರ ವಿಘಟನೆಗಳನ್ನು ಹೊಂದಬಹುದು. ಇವೊಂದೊಂದನ್ನೂ ವಿವರವಾಗಿ ಪರೀಕ್ಷಿಸೋಣ.

i **ಆಬ್‌ವರ್ಷನ್**—ಒಂದು ಅಸ್ತ್ಯರ್ಥಕ ಪ್ರತಿಜ್ಞೆಯನ್ನು ಅದಕ್ಕೆ ವ್ಯತಿರಿಕ್ತವಲ್ಲದೆ ಅಂದರೆ ಅದರ ಮೂಲ ಅರ್ಥಕ್ಕೆ ಲೋಪಬಾರದಂತೆ ನೇತ್ಯರ್ಥಕ ಪ್ರತಿಜ್ಞೆಯಾಗಿ ಬದಲಾಯಿಸುವುದಕ್ಕೆ ಅಥವಾ ಒಂದು ನೇತ್ಯರ್ಥಕ ಪ್ರತಿಜ್ಞೆಯನ್ನು ಅದಕ್ಕೆ ವ್ಯತಿರಿಕ್ತವಲ್ಲದ ಅಸ್ತ್ಯರ್ಥಕ ಪ್ರತಿಜ್ಞೆಯಾಗಿ ಬದಲಾಯಿಸುವುದಕ್ಕೆ ಆಬ್‌ವರ್ಷನ್ ಎಂದು ಹೆಸರು. ಒಂದೇ ಪ್ರತಿಜ್ಞೆಯ ಅರ್ಥವನ್ನು ಸಂದರ್ಭಾನುಸಾರ ಅಸ್ತ್ಯರ್ಥಕ ರೂಪದಲ್ಲಾದರೂ ಸೂಚಿಸಬಹುದು, ನೇತ್ಯರ್ಥಕ ರೂಪದಲ್ಲಾದರೂ ಸೂಚಿಸಬಹುದು. 'ಎಲ್ಲರೂ ತಪ್ಪು ಮಾಡುತ್ತಾರೆ' ಎಂದು ಒಂದು ಸಂದರ್ಭದಲ್ಲಿ ಹೇಳಬಹುದು. 'ಯಾರೂ ತಪ್ಪು ಮಾಡದವರಲ್ಲ' ಎಂದು ಇನ್ನೊಂದು ಸಂದರ್ಭದಲ್ಲಿ ಹೇಳಬಹುದು ಎರಡರ ಅರ್ಥವೂ ಒಂದೇ. 'ಬಸ್ಸಿನಲ್ಲಿದ್ದವರಲ್ಲಿ ಯಾರೂ ಉಳಿಯಲಿಲ್ಲ' ಎಂಬ ಪ್ರತಿಜ್ಞೆಯ ಅರ್ಥವೂ 'ಬಸ್ಸಿನಲ್ಲಿದ್ದವರೆಲ್ಲ ಸತ್ತರು' ಎಂಬ ಪ್ರತಿಜ್ಞೆಯ

---

[1] ಪಾಶ್ಚಾತ್ಯ ತರ್ಕಶಾಸ್ತ್ರದಲ್ಲಿ ಹೇಳಿರುವಂತೆ ಭಾರತೀಯ ತರ್ಕಶಾಸ್ತ್ರದಲ್ಲಿ ವಿಘಟನೆಯ ರೂಪಗಳನ್ನು ಹೇಳಿಲ್ಲ. ಇಲ್ಲಿ ಪಾಶ್ಚಾತ್ಯ ತರ್ಕದ ಪದಗಳನ್ನು ಭಾಷಾಂತರಗೊಳಿಸದೆ ಆ ಪದಗಳನ್ನೇ ಉಪಯೋಗಿಸಿದೆ.

ಅರ್ಥವೂ ಒಂದೇ. ಬೇರೆಯವರು ಹೇಳಿದುದನ್ನು ನಾವು ತಿರಸ್ಕರಿಸಬೇಕಾದ ಸಂದರ್ಭಗಳಲ್ಲಿ ನಾವು ನೇತ್ಯರ್ಥಕ ರೂಪವನ್ನು ಉಪಯೋಗಿಸುತ್ತೇವೆ. ಬಸ್ಸಿನಲ್ಲಿದ್ದವರಲ್ಲಿ ಕೆಲವರು ಸತ್ತಿಲ್ಲ ಎಂದು ಸೂಚಿಸುವಂತೆ ಒಬ್ಬನು ಮಾತನಾಡುತ್ತಿದ್ದಾಗ, ಆ ಸೂಚನೆಯನ್ನು ತಿರಸ್ಕರಿಸಲು, 'ಬಸ್ಸಲ್ಲಿ ಇದ್ದವರು ಯಾರೂ ಉಳಿಯಲಿಲ್ಲ' ಎಂದು ಹೇಳಿದರೆ ಬಸ್ಸಿನಲ್ಲಿದ್ದ ಎಲ್ಲರೂ ಸತ್ತರು ಎಂಬುದನ್ನು ದೃಢಪಡಿಸಿದಂತಾಗುತ್ತದೆ. ತಾವೇನೋ ತುಂಬ ಶ್ರೇಷ್ಠರು, ತಪ್ಪುಮಾಡುವರೆ ಅಲ್ಲ ಎಂಬ ಭಾವನೆಯಿಂದ ತಪ್ಪುಮಾಡಿದವರನ್ನು ಜರೆದು ಮಾತನಾಡುತ್ತಿದ್ದಾಗ, ತಪ್ಪುಮಾಡದವರು ಯಾರಿದ್ದಾರೆ? ಎಂದು ಹೇಳಿ ಅವರ ಬಾಯಿ ಮುಚ್ಚಿಸಬೇಕಾಗುತ್ತದೆ.

A. E. I. O. ಈ ನಾಲ್ಕು ವಿಧವಾದ ಪ್ರತಿಜ್ಞೆಗಳನ್ನೂ ಆಬ್‌ವರ್ಟ್ ಮಾಡಬಹುದು. 'ಎಲ್ಲ ಹಕ್ಕಿಗಳಿಗೂ ಪುಕ್ಕಗಳಿವೆ' (SaP) ಎಂಬ ಪ್ರತಿಜ್ಞೆಯನ್ನು ಆಬ್‌ವರ್ಟ್ ಮಾಡಿದಾಗ ಅದು 'ಯಾವ ಹಕ್ಕಿಯೂ ಪುಕ್ಕಗಳಿಲ್ಲದಿಲ್ಲ'(SeP') ಆಗುತ್ತದೆ. 'ಯಾವ ಮನುಷ್ಯನೂ ನ್ಯೂನತೆ ಇಲ್ಲದವನಲ್ಲ' (SeP) ಎಂಬ ಪ್ರತಿಜ್ಞೆಯನ್ನು ಆಬ್‌ವರ್ಟ್ ಮಾಡಿದಾಗ ಅದು 'ಎಲ್ಲ ಮನುಷ್ಯರೂ ನ್ಯೂನತೆಗಳುಳ್ಳವರು' (SaP') ಎಂದಾಗುತ್ತದೆ. 'ಕೆಲವು ಮನೆಗಳು ಅನುಕೂಲವಾಗಿರುತ್ತವೆ' (SiP) ಎಂಬ ಪ್ರತಿಜ್ಞೆಯನ್ನು ಆಬ್‌ವರ್ಟ್ ಮಾಡಿದಾಗ 'ಕೆಲವು ಮನೆಗಳು ಅನಾನುಕೂಲವಾಗಿ ಇರುವುದಿಲ್ಲ' (SoP') ಎಂದು ಆಗುತ್ತದೆ. 'ಕೆಲವು ಲೋಹಗಳು ಬೆಳ್ಳಗಿರುವುದಿಲ್ಲ' (SoP) ಎಂಬ ಪ್ರತಿಜ್ಞೆಯನ್ನು ಆಬ್‌ವರ್ಟ್ ಮಾಡಿದಾಗ 'ಕೆಲವು ಲೋಹಗಳು ಬೆಳ್ಳಗಿಲ್ಲದವಾಗಿರುತ್ತವೆ' (SiP') ಎಂದು ಆಗುತ್ತದೆ.

ii **ಕನ್ವರ್ಷನ್**—ಒಂದು ಪ್ರತಿಜ್ಞೆಯ ವಿಶೇಷ್ಯ ವಿಶೇಷಣ ಪದಗಳನ್ನು ಅದಲುಬದಲು ಮಾಡಿ ಮೂಲಪ್ರತಿಜ್ಞೆಯಲ್ಲಿ ಅಡಗಿರುವ ಅರ್ಥವನ್ನು ವಿಶದಪಡಿಸುವುದು ಕನ್ವರ್ಷನ್. 'ಯಾವ ಮನುಷ್ಯನೂ ಗಾಳಿ ಇಲ್ಲದೆ ಬದುಕಲಾರ.' (SeP) ಎಂಬ ಪ್ರತಿಜ್ಞೆಯನ್ನು ಕನ್ವರ್ಟ್ ಮಾಡಿದಾಗ ಗಾಳಿ ಇಲ್ಲದೆ ಯಾವ ಮನುಷ್ಯನೂ ಬದುಕಲಾರ (PeS) ಎಂದು ಆಗುತ್ತದೆ. ಇಲ್ಲಿ ಮೂಲಪ್ರತಿಜ್ಞೆಗೆ ಕನ್‌ವರ್ಟೆಂಡ್ ಎಂದು ಹೆಸರು. ಅದರ ವಿಪರ್ಯಯರೂಪಕ್ಕೆ ಕಾನ್‌ವರ್ಸ್ ಎಂದು ಹೆಸರು. ಹೀಗೆ ಒಂದು ಪ್ರತಿಜ್ಞೆಯ ವಿಶೇಷ್ಯ ವಿಶೇಷಣ ಪದಗಳನ್ನು ಅದಲುಬದಲು ಮಾಡುವಾಗ, ಸ್ಥಾನಬದಲಾವಣೆ ಮಾಡುವಾಗ ನಾವು ವಿಶೇಷಣಪದದ ನಿರ್ದೇಶನ ವ್ಯಾಪ್ತಿ ಪೂರ್ಣ (Distributed) ವಾಗಿದೆಯೆ

ಅಥವಾ ಅದು ಅಪೂರ್ಣವಾಗಿದೆಯೆ (Undistributed), ವಿಶೇಷಣಪದ ನಿರ್ದೇಶಿಸುವ ಪ್ರತಿಯೊಂದಕ್ಕೂ ಅನ್ವಯಿಸುತ್ತದೆಯೆ ಅಥವಾ ಕೆಲವಕ್ಕೆ ಮಾತ್ರ ಅನ್ವಯಿಸುತ್ತದೆಯೆ ಎಂಬುದನ್ನು ಗಮನಿಸಬೇಕು. ಕನ್ ವರ್ಟೆಂಡ್‌ನಲ್ಲಿ ವಿಶೇಷಣ ಪದದ ನಿರ್ದೇಶನ ಪೂರ್ಣವಾಗಿದ್ದ (Distributed) ಹೊರತು ಕಾನ್‌ವರ್ಸಿನಲ್ಲಿ ಅದನ್ನು ಪೂರ್ಣವಾದ ನಿರ್ದೇಶನ ಪಡೆದಿರುವಂತೆ ಉಪಯೋಗಿಸಬಾರದು. ಕನ್‌ವರ್ಟೆಂಡಿನಲ್ಲಿ ವಿಶೇಷಣಪದ ಪೂರ್ಣ ನಿರ್ದೇಶನ ಪಡೆಯದಿದ್ದರೆ ಕಾನ್‌ವರ್ಸಿನಲ್ಲಿ ಅದರ ನಿರ್ದೇಶನವನ್ನು ಮಿತ (Limit) ಗೊಳಿಸಬೇಕು. ಮೇಲಿನ ಉದಾಹರಣೆಯಲ್ಲಿ ಕನ್‌ವರ್ಟೆಂಡಿನ ವಿಶೇಷಣದ ನಿರ್ದೇಶನವ್ಯಾಪ್ತಿ ಪೂರ್ಣವಾಗಿದೆ. ಆದ್ದರಿಂದ ಅದನ್ನು ಯಾವ ರೀತಿಯಲ್ಲೂ ಮೊಟಕುಮಾಡದೆ, ಮಿತಗೊಳಿಸದೆ ಅದಲುಬದಲು ಮಾಡಿರುತ್ತದೆ. ಆದರೆ 'ಎಲ್ಲ ಗಿಡಗಳೂ ಹಸುರಾಗಿರುತ್ತವೆ' ಎಂಬ ಪ್ರತಿಜ್ಞೆಯ ವಿಶೇಷಣಪದವನ್ನು ಮೊಟಕುಮಾಡದೆ ಕನ್‌ವರ್ಟ್‌ಮಾಡುವಂತಿಲ್ಲ. ಏಕೆಂದರೆ ಈ ಪ್ರತಿಜ್ಞೆಯಲ್ಲಿ ಹಸುರಾಗಿರುತ್ತವೆ ಎಂಬ ವಿಶೇಷಣಪದದ ನಿರ್ದೇಶನವ್ಯಾಪ್ತಿ ಪೂರ್ಣವಾಗಿಲ್ಲ; ಹಸುರಾಗಿರುವ ಎಲ್ಲ ಪದಾರ್ಥಗಳನ್ನು ಅದು ನಿರ್ದೇಶಿಸುವುದಿಲ್ಲ. ಹಸುರು ಪದಾರ್ಥಗಳಲ್ಲಿ ಗಿಡಗಳಲ್ಲದೆ ಅನೇಕ ಪದಾರ್ಥಗಳು ಸೇರಿವೆ. ಇಲ್ಲಿ ವಿಶೇಷಣಪದ ಅವೆಲ್ಲವನ್ನೂ ನಿರ್ದೇಶಿಸುವುದಿಲ್ಲ. ಕೆಲವನ್ನು ಮಾತ್ರ ನಿರ್ದೇಶಿಸುತ್ತದೆ. ಆದ್ದರಿಂದ ಕಾನ್ ವರ್ಸಿನಲ್ಲಿ ವಿಶೇಷಣಪದದ ವ್ಯಾಪ್ತಿಯ ಮಿತಿಯನ್ನು ನಿರ್ಧರಿಸಿ ಉಪಯೋಗಿಸಬೇಕು. ಆಗ ಕಾನ್‌ವರ್ಸ್ "ಕೆಲವು ಹಸುರು ಪದಾರ್ಥಗಳು ಗಿಡಗಳಾಗಿರುತ್ತವೆ (PiS)" ಎಂದು ಆಗುತ್ತದೆ. ಅಸ್ತ್ಯರ್ಥಕ ಸಾಮಾನ್ಯಪ್ರತಿಜ್ಞೆಯ ವಿಶೇಷಣಪದದ ನಿರ್ದೇಶನವ್ಯಾಪ್ತಿಯ ಮಿತಿಯನ್ನು ನಿರ್ಧರಿಸದೆ ಅದನ್ನು ಅದಲುಬದಲು ಮಾಡುವುದು ಸಾಧುವಲ್ಲ. ಹಾಗೆ ಮಾಡಿದರೆ ಅದು ದೋಷವಾಗಿ, ಆಭಾಸವಾಗಿ ಪರಿಣಮಿಸುತ್ತದೆ. ಕೆಲವು ಅಸ್ತ್ಯರ್ಥಕ ಸಾಮಾನ್ಯ ಪ್ರತಿಜ್ಞೆಗಳಲ್ಲಿ ವಿಶೇಷಣಪದ ಪೂರ್ಣವಾದ ನಿರ್ದೇಶನವ್ಯಾಪ್ತಿ ಪಡೆದಿರುವಂತೆ ಉಪಯೋಗವಾಗಿರುತ್ತದೆ. 'ತ್ರಿಭುಜ ಮೂರು ನೇರವಾದ ಭುಜಗಳಿಂದ ಕೂಡಿದ ಆಕೃತಿ' ಎಂಬ ಪ್ರತಿಜ್ಞೆಯಲ್ಲಿ 'ನೇರವಾದ ಭುಜಗಳಿಂದ ಕೂಡಿದ ಆಕೃತಿ' ಎಂಬ ಪದದ ನಿರ್ದೇಶನವ್ಯಾಪ್ತಿ ಪೂರ್ಣವಾಗಿ ವಿಶೇಷ್ಯಪದಕ್ಕೆ ಅನ್ವಯವಾಗುತ್ತದೆ. ವಿಶೇಷ್ಯಪದದ ವ್ಯಾಪ್ತಿಯೂ ವಿಶೇಷಣಪದದ ವ್ಯಾಪ್ತಿಯೂ ಸಮನಾಗಿರುತ್ತದೆ. ಆದ್ದರಿಂದ ಇಲ್ಲಿ ವಿಶೇಷಣಪದದ ವ್ಯಾಪ್ತಿಯನ್ನು ಮೊಟಕುಮಾಡಿ ಉಪಯೋಗಿಸಬೇಕಾದ ಅವಶ್ಯಕತೆ ಇರುವುದಿಲ್ಲ. ನೇರವಾದ ಮೂರು ಭುಜಗಳಿಂದ ಕೂಡಿದ 'ಎಲ್ಲ ಆಕೃತಿಗಳು ತ್ರಿಭುಜಗಳಾಗಿರುತ್ತವೆ'

ಎಂದು ಸರಳವಾಗಿ ಕನ್ವರ್ಟ್ (Simple Conversion) ಮಾಡಬಹುದು. I ಪ್ರತಿಜ್ಞೆಯಲ್ಲಿ ವಿಶೇಷ್ಯ ವಿಶೇಷಣಪದಗಳೆರಡೂ ಪೂರ್ಣವಾದ ನಿರ್ದೇಶ ವ್ಯಾಪ್ತಿ ಪಡೆದಿರುವುದಿಲ್ಲ. ಆದ್ದರಿಂದ I ಪ್ರತಿಜ್ಞೆಯಲ್ಲಿ ವಿಶೇಷಣಪದ ವ್ಯಾಪ್ತಿ ಮಿತಿಗೊಳಿಸಬೇಕಾಗಿಲ್ಲ. ಅದನ್ನು ಸರಳವಾಗಿ ಕನ್ವರ್ಟ್ ಮಾಡಬಹುದು.

ನಾವು O ಪ್ರತಿಜ್ಞೆಯನ್ನು ಯಾವ ಪ್ರಕಾರವೂ ಕನ್ವರ್ಟ್ ಮಾಡಲು ಸಾಧ್ಯವಿಲ್ಲ. ಏಕೆಂದರೆ SoP ಪ್ರತಿಜ್ಞೆಯಲ್ಲಿ S ಎಂಬ ವಿಶೇಷ್ಯಪದದ ನಿರ್ದೇಶನವ್ಯಾಪ್ತಿ ಪೂರ್ಣವಾದುದಲ್ಲ. ಅದನ್ನು ಅದಲುಬದಲು ಮಾಡಿದಾಗ ಅದು ನೇತ್ಯರ್ಥಕ ಪ್ರತಿಜ್ಞೆಯ ವಿಶೇಷಣಪದವಾಗುತ್ತದೆ. ಎಲ್ಲ ನೇತ್ಯರ್ಥಕ ಪ್ರತಿಜ್ಞೆಗಳ ವಿಶೇಷಣ ಪದಗಳೂ ಪೂರ್ಣ ನಿರ್ದೇಶನವ್ಯಾಪ್ತಿ ಪಡೆದೇ ಇರಬೇಕಾಗಿರುವುದರಿಂದ ಮೂಲಪ್ರತಿಜ್ಞೆಯಾದ SoP ಯಲ್ಲಿ ಪೂರ್ಣ ನಿರ್ದೇಶನವ್ಯಾಪ್ತಿ ಪಡೆಯದ S, ಕಾನ್ವರ್ಸ್ ಆದ PoS ಪ್ರತಿಜ್ಞೆಯಲ್ಲಿ ಪೂರ್ಣ ನಿರ್ದೇಶನಪಡೆದಂತೆ ಉಪಯೋಗವಾಗುತ್ತದೆ. ಇದು ಸಾಧುವಲ್ಲ. A ಪ್ರತಿಜ್ಞೆಯನ್ನು ಕನ್ವರ್ಟ್ ಮಾಡುವಾಗ ವಿಶೇಷಣಪದದ ನಿರ್ದೇಶನ ವ್ಯಾಪ್ತಿಯನ್ನು ಕಡಮೆಮಾಡಿ ಕಾನ್ವರ್ಸಿನಲ್ಲಿ ಉಪಯೋಗಮಾಡುವಂತೆ O ಪ್ರತಿಜ್ಞೆಯನ್ನು ಕನ್ವರ್ಟ್ ಮಾಡುವಾಗ ವಿಶೇಷ್ಯಪದವನ್ನು ಅಪೂರ್ಣವಾದ ವ್ಯಾಪ್ತಿ ಪಡೆದಂತೆ ಏಕೆ ಉಪಯೋಗಿಸಬಾರದು ಎಂದು ಕೇಳಬಹುದು. ಅದು ಸಾಧ್ಯವಿಲ್ಲ. ಏಕೆಂದರೆ ನೇತ್ಯರ್ಥಕ ಪ್ರತಿಜ್ಞೆಗಳ ವಿಶೇಷಣಪದ ಯಾವಾಗಲೂ ಪೂರ್ಣ ನಿರ್ದೇಶನವ್ಯಾಪ್ತಿಯನ್ನು ಪಡೆದಿರುತ್ತದೆ.

ಕನ್ವರ್ಟ್ ಮಾಡುವಾಗ ನಾವು ಅನುಸರಿಸಬೇಕಾದ ನಿಯಮಗಳು ಎರಡು. ಅವು ಯಾವುವೆಂದರೆ:

(೧) ಕನ್ವರ್ಟೆಂಡಿನಲ್ಲಿ ಒಂದು ಪದ ಪೂರ್ಣ ನಿರ್ದೇಶನವ್ಯಾಪ್ತಿ ಪಡೆದ ವಿನಾ ಅದನ್ನು ಕಾನ್ವರ್ಸಿನಲ್ಲಿ ಪೂರ್ಣ ನಿರ್ದೇಶನವ್ಯಾಪ್ತಿಯನ್ನು ಪಡೆದಂತೆ ಉಪಯೋಗಿಸಬಾರದು.

(೨) ಕನ್ವರ್ಟೆಂಡ್ ಅಸ್ತ್ಯರ್ಥಕವಾಗಿದ್ದರೆ ಕಾನ್ವರ್ಸ್ ಕೂಡ ಅಸ್ತ್ಯರ್ಥಕವಾಗಿಯೇ ಇರಬೇಕು; ಕನ್ವರ್ಟೆಂಡ್ ನೇತ್ಯರ್ಥಕವಾಗಿದ್ದರೆ ಕಾನ್ವರ್ಸ್ ಕೂಡ ನೇತ್ಯರ್ಥಕವಾಗಿಯೇ ಇರಬೇಕು.

**iii ಕಾಂಟ್ರಪೊಸಿಷನ್**—ಮೂಲಪ್ರತಿಜ್ಞೆಯ ವಿಶೇಷಣಪದದ ವಿರುದ್ಧ (Contradictory) ರೂಪವನ್ನು ವಿಶೇಷ್ಯಪದವಾಗಿ ಮಾಡಿಕೊಂಡು ಮೂಲ ಪ್ರತಿಜ್ಞೆಗೆ ಸಂಗತವಾದ ಒಂದು ಪ್ರತಿಜ್ಞೆಯನ್ನು ರಚಿಸುವುದು ಕಾಂಟ್ರಪೊಸಿ

ಷನ್. ಮೂಲಪ್ರತಿಜ್ಞೆಯ S-P ರೂಪವನ್ನು ಕಾಂಟ್ರಪೋಸ್ ಮಾಡಿದಾಗ P-S′ ರೂಪ ಪಡೆಯುತ್ತದೆ. SaP, SoP, SePಗಳನ್ನು ಕಾಂಟ್ರಪೋಸ್ ಮಾಡಿದಾಗ ಅವು ಕ್ರಮವಾಗಿ P′eS, P′iS, P′eS ಆಗಿ ಪರಿವರ್ತನೆಯಾಗುತ್ತವೆ. SiP ಪ್ರತಿಜ್ಞೆಯನ್ನು ಕಾಂಟ್ರಪೋಸ್ ಮಾಡುವುದಕ್ಕಾಗುವುದಿಲ್ಲ. ಏಕೆಂದರೆ ಅದನ್ನು ಕಾಂಟ್ರಪೋಸ್ ಮಾಡಲು ಮೂಲಪ್ರತಿಜ್ಞೆಯನ್ನು ಮೊದಲು ಆಬ್‌ವರ್ಟ್ ಮಾಡಬೇಕು, ಅನಂತರ ಕನ್‌ವರ್ಟ್ ಮಾಡಬೇಕು. SiPಯನ್ನು ಆಬ್‌ವರ್ಟ್ ಮಾಡಿದಾಗ ಅದು SoP ಆಗುತ್ತದೆ. O ಪ್ರತಿಜ್ಞೆಯನ್ನು ನಾವು ಆಗಲೇ ತಿಳಿದಿರುವ ಕಾರಣಗಳಿಗಾಗಿ ಕನ್ವರ್ಟ್ ಮಾಡಲಾಗುವುದಿಲ್ಲ. ಆದ್ದರಿಂದ SiP ಗೆ ಕಾಂಟ್ರಪೊಸ್ಸಿಷನ್ ರೂಪವಿಲ್ಲ.

ಕಾಂಟ್ರಪೋಸ್ ಮಾಡಲು ನಾವು ಅನುಸರಿಸಬೇಕಾದ ಸೂತ್ರ ಹೀಗಿದೆ: (೧) ಮೊದಲು ಆಬ್‌ವರ್ಟ್ ಮಾಡು, (೨) ಅನಂತರ ಕನ್‌ವರ್ಟ್ ಮಾಡು. ಮೂಲಪ್ರತಿಜ್ಞೆಯ ವಿಶೇಷಣಪದದ ಪ್ರತಿರೂಪವುಳ್ಳ ಪ್ರತಿಜ್ಞೆಯನ್ನು ಪಡೆಯಲು ಮೊದಲು ನಾವು ಅದನ್ನು ಆಬ್‌ವರ್ಟ್ ಮಾಡಬೇಕು. ವಿಶೇಷಣ ಪದದ ಪ್ರತಿರೂಪವನ್ನು ವಿಶೇಷ್ಯವಾಗಿ ಉಳ್ಳ ಪ್ರತಿಜ್ಞೆಯನ್ನು ಪಡೆಯಲು ಆಬ್‌ವರ್ಟ್ ಮಾಡಿದ್ದನ್ನು ಕನ್ವರ್ಟ್ ಮಾಡಬೇಕು. ಈ ನಿಯಮವನ್ನು ಅನುಸರಿಸಿ ಕಾಂಟ್ರಾಪೋಸ್ ಮಾಡುವುದನ್ನು ಕೆಲವು ಉದಾಹರಣೆಗಳ ಸಹಾಯದಿಂದ ಸ್ಪಷ್ಟಪಡಿಸಬಹುದು.

'ಎಲ್ಲ ಪಕ್ಷಿಗಳಿಗೂ ರೆಕ್ಕೆಗಳಿವೆ' (SaP). ಇದನ್ನು ಕಾಂಟ್ರಾಪೋಸ್ ಮಾಡಲು (೧) SaP ಯನ್ನು ಆಬ್‌ವರ್ಟ್ ಮಾಡಬೇಕು. ಹಾಗೆ ಮಾಡಿದಾಗ ಅದು 'ಯಾವ ಪಕ್ಷಿಯೂ ರೆಕ್ಕೆಗಳಿಲ್ಲದೆ ಇಲ್ಲ' SeP ಆಗುತ್ತದೆ. (೨) ಅನಂತರ ಈ ಆಬ್‌ವರ್ಸ್ ರೂಪವನ್ನು ಕನ್ವರ್ಟ್ ಮಾಡಬೇಕು. ಹಾಗೆ ಮಾಡಿದಾಗ ಅದು 'ರೆಕ್ಕೆಗಳಿಲ್ಲದ ಯಾವ ಪ್ರಾಣಿಯೂ ಹಕ್ಕಿಯಲ್ಲ' (P′eS) ಆಗುತ್ತದೆ. 'ಯಾವ ಪಕ್ಷಿಯೂ ಸಸ್ತನಿಯಲ್ಲ' (SeP) ಎಂಬ ಪ್ರತಿಜ್ಞೆಯನ್ನು ಕಾಂಟ್ರಾಪೋಸ್ ಮಾಡಿದಾಗ ಮೊದಲನೆಯ ಘಟ್ಟದಲ್ಲಿ ಅದು 'ಎಲ್ಲ ಪಕ್ಷಿಗಳೂ ಸಸ್ತನಿಗಳಲ್ಲದುವು' SaP′ ಎಂಬ ಆಬ್ವರ್ಸ್ ರೂಪ ಪಡೆಯುತ್ತದೆ. ಎರಡನೆಯ ಘಟ್ಟದಲ್ಲಿ ಆಬ್ವರ್ಸ್ ರೂಪ ಕನ್ವರ್ಟಾಗಿ 'ಕೆಲವು ಸಸ್ತನಿಗಳಲ್ಲದ ಪ್ರಾಣಿಗಳು ಪಕ್ಷಿಗಳು' (P′iS) ಎಂದಾಗುತ್ತದೆ. 'ಕೆಲವು ಬೆಳ್ಳಗಿರುವ ಪದಾರ್ಥಗಳು ಹಾಲಲ್ಲ ಎಂಬ SoP ಪ್ರತಿಜ್ಞೆಯನ್ನು ಕಾಂಟ್ರಪೋಸ್ ಮಾಡಿದಾಗ ಮೊದಲನೆಯ ಹಂತದಲ್ಲಿ 'ಕೆಲವು ಬೆಳ್ಳಗಿರುವ ಪದಾರ್ಥಗಳು ಹಾಲಲ್ಲದುವು' (SiP′) ಎಂಬ ಆಬ್ವರ್ಸ್ ರೂಪ ಪಡೆಯು

ತ್ತದೆ. ಅನಂತರ ಅದು 'ಕೆಲವು ಹಾಲಲ್ಲದ ಪದಾರ್ಥಗಳು ಬೆಳ್ಳಗಿರುತ್ತವೆ' ಎಂಬ (P′iS) ಕನ್ವರ್ಟೆಡ್ ಆಬ್‌ವರ್ಸ್ ರೂಪ ಪಡೆಯುತ್ತದೆ. ಮೊದಲು ಆಬ್‌ವರ್ಟ್ ಮಾಡದೆ ಕನ್ವರ್ಟ್ ಮಾಡಿ ಅನಂತರ ಆಬ್‌ವರ್ಟ್ ಮಾಡಿದರೆ ಆಬ್ವರ್ಟೆಡ್ ಕಾನ್ವರ್ಸ್ ರೂಪ ಬರುತ್ತದೆ. O ಪ್ರತಿಜ್ಞೆ ವಿನಾ ಇತರ ಪ್ರತಿಜ್ಞೆಗಳಿಗೆ ಆಬ್ವರ್ಟೆಡ್ ಕಾನ್ವರ್ಸ್ ರೂಪವಿರುತ್ತದೆ.

ಕನ್ವರ್ಟೆಡ್ ಆಬ್‌ವರ್ಸನ್ನು ಪಾರ್ಷಿಯಲ್ ಕಾಂಟ್ರಾಪಾಸ್ಟಿಟಿವ್ ಎಂದು ಕರೆಯುವುದು ವಾಡಿಕೆ. ಈ ರೂಪವನ್ನು ಪುನಃ ಆಬ್ವರ್ಟ್ ಮಾಡಿದಾಗ ಬಂದ ರೂಪಕ್ಕೆ ಫುಲ್ ಕಾಂಟ್ರಪಾಸ್ಟಿಟಿವ್ ಎಂದು ಹೆಸರು. SaP, Sep, SoP ಗಳ ಪಾರ್ಷಿಯಲ್ ಕಾಂಟ್ರಪಾಸ್ಟಿಟಿವ್ ರೂಪಗಳು P′eS, P′iS, P′iS. ಇವುಗಳನ್ನು ಆಬ್ವರ್ಟ್ ಮಾಡಿದಾಗ ಅದೇ ಕ್ರಮದಲ್ಲಿ P′aS′, PoS′, PoS′ ಎಂಬ ಪೂರ್ಣ ಕಾಂಟ್ರಪಾಸ್ಟಿಟಿವ್‌ಗಳಾಗುತ್ತವೆ.

## ಇನ್ವರ್ಷನ್

ಪ್ರತಿಜ್ಞೆಗಳ ವಿಶೇಷ್ಯ ವಿಶೇಷಣ ಪದಗಳ ಸ್ಥಾನಬದಲಾವಣೆ ಮಾಡಿ, ಅಥವಾ ರೂಪಬದಲಾವಣೆ ಮಾಡಿ, ಅಥವಾ ಎರಡನ್ನೂ ಮಾಡಿ ಪ್ರತಿಜ್ಞೆಗಳನ್ನು ವಿಘಟಿಸುವ ವಿಧಾನಗಳಲ್ಲಿ ಇನ್ನೊಂದು ಉಳಿದಿದೆ. ಮೂಲಪ್ರತಿಜ್ಞೆಯ S-P ರೂಪ ಕಾನ್ವರ್ಸಿನಲ್ಲಿ P-S ಆಗುತ್ತದೆ, ಆಬ್ವರ್ಸಿನಲ್ಲಿ S-P′ ಆಗುತ್ತದೆ, ಅಪೂರ್ಣ ಮತ್ತು ಪೂರ್ಣ ಕಾಂಟ್ರಾಪಾಸಿಟಿವ್‌ಗಳಲ್ಲಿ P′-S′ P′-S′ ಆಗುತ್ತದೆ. ಇನ್ನು ಉಳಿದಿರುವ ರೂಪಗಳು S′-P, S′-P′ ಎಂಬುವು. ಇವುಗಳನ್ನು ಪಡೆಯುವ ವಿಧಾನಕ್ಕೆ ಇನ್‌ವರ್ಷನ್ ಎಂದು ಹೆಸರು. ಎಲ್ಲ ಪ್ರತಿಜ್ಞೆಗಳಿಗೂ ಇನ್ವರ್ಸ್ ರೂಪ ಸಾಧ್ಯವಿಲ್ಲ. ಸಾಮಾನ್ಯ (Universal Propositions) ಪ್ರತಿಜ್ಞೆಗಳಿಗೆ ಮಾತ್ರ ಈ ರೂಪ ಸಾಧ್ಯ. ಏಕೆಂದರೆ ಈ ರೂಪ ಪಡೆಯಲು ಆಬ್ವರ್ಷನ್ ಮತ್ತು ಕನ್ವರ್ಷನ್ ವಿಧಾನಗಳನ್ನು ಒಂದಕ್ಕಿಂತ ಹೆಚ್ಚು ಸಲ ಉಪಯೋಗಿಸ ಬೇಕಾಗುತ್ತದೆ. ಹೀಗೆ ಮಾಡುವಾಗ ಕನ್ವರ್ಟ್ ಮಾಡಲಾಗದ O ಪ್ರತಿಜ್ಞೆ ಮಧ್ಯೆ ತಡೆಯಾಗಿ ನಿಂತುಬಿಡುತ್ತದೆ. I ಯನ್ನು ಆಬ್‌ವರ್ಟ್ ಮಾಡಿದಾಗ ಅದು O ಆಗುತ್ತದೆ; ಇದನ್ನು ಕನ್ವರ್ಟ್ ಮಾಡಲು ಸಾಧ್ಯವಲ್ಲದ್ದರಿಂದ ಇನ್ವರ್ಷನ್ ವಿಧಾನಕ್ಕೆ ತಡೆಯುಂಟಾಯಿತು. ಹಾಗೆಯೇ O ಪ್ರತಿಜ್ಞೆ ಯನ್ನು ಆಬ್ವರ್ಟ್ ಮಾಡಿದಾಗ I ಆಗುತ್ತದೆ. ಅದನ್ನು ಕನ್ವರ್ಟ್ ಮಾಡಿದಾಗ I ಆಗುತ್ತದೆ, ಅದನ್ನು ಆಬ್‌ವರ್ಟ್ ಮಾಡಿದಾಗ ಅದು O ಆಗುತ್ತದೆ. ಈ O ಕನ್ವರ್ಟ್ ಆಗದ್ದರಿಂದ ಇನ್ವರ್ಷನ್ ವಿಧಾನಕ್ಕೆ ತಡೆಯುಂಟಾಯಿತು.

SaP ಮತ್ತು SeP ಪ್ರತಿಜ್ಞೆಗಳಿಗೆ ಈ ಅಡಚಣೆ ಇಲ್ಲ. SaP ಆಬ್ವರ್ಟ್ ಮಾಡಿದಾಗ SeP′ ಆಗುತ್ತದೆ, ಅದನ್ನು ಕನ್ವರ್ಟ್ ಮಾಡಿದಾಗ P′eS ಆಗುತ್ತದೆ. ಅದನ್ನು ಆಬ್ವರ್ಟ್ ಮಾಡಿದಾಗ P′aS′ ಆಗುತ್ತದೆ, ಅದನ್ನು ಕನ್ವರ್ಟ್ ಮಾಡಿದಾಗ $\bar{S}i\bar{P}$ ಆಗುತ್ತದೆ. ಆಗ ನಮಗೆ ಪೂರ್ಣ ಇನ್ವರ್ಸ್ (Full Inverse) ರೂಪ ದೊರೆಯುತ್ತದೆ. ಈ ರೂಪವನ್ನು ಆಬ್ವರ್ಟ್ ಮಾಡಿದರೆ SoP ಎಂಬ ಅಪೂರ್ಣ ಇನ್ವರ್ಸ್ (Partial Inverse) ರೂಪ ದೊರೆಯುತ್ತದೆ. S′eP ಪ್ರತಿಜ್ಞೆಯನ್ನು ಕನ್‌ವರ್ಟ್ ಮಾಡಿದಾಗ PeS ರೂಪ ದೊರೆಯುತ್ತದೆ. ಅದನ್ನು ಆಬ್ವರ್ಟ್ ಮಾಡಿದಾಗ PaS′ ರೂಪ ದೊರೆಯುತ್ತದೆ. ಅದನ್ನು ಕನ್ವರ್ಟ್ ಮಾಡಿದಾಗ S′iP ರೂಪ ದೊರೆಯುತ್ತದೆ. ಇದು SeP ಯ ಅಪೂರ್ಣ ಇನ್ವರ್ಸ್ ರೂಪ. ಇದನ್ನು ಅಬ್ವರ್ಟ್ ಮಾಡಿದಾಗ $\bar{S}$oP′ ಎಂಬ ಪೂರ್ಣ ಇನ್ವರ್ಸ್ ರೂಪ ದೊರೆಯುತ್ತದೆ.

ಎಲ್ಲ ವಿಧವಾದ ಪ್ರತಿಜ್ಞೆಗಳ ಬೇರೆ ಬೇರೆ ವಿಘಟನರೂಪಗಳು ನಮ್ಮ ಕಣ್ಣುಮುಂದೆ ಬಂದು ನಿಲ್ಲುವಂತೆ ಅವುಗಳನ್ನು ಈ ಕೆಳಗಿನ ಪಟ್ಟಿಯ ರೂಪದಲ್ಲಿ ಕ್ರೋಢೀಕರಿಸಬಹುದು :

| | ಮೂಲಪ್ರತಿಜ್ಞೆ | SAP | SEP | SIP | SOP |
|---|---|---|---|---|---|
| i | ಆಬ್ವರ್ಸ್ ... | SeP′ | SaP′ | SoP′ | SiP′ |
| ii | ಕಾನ್ವರ್ಸ್ ... | PiS | PeS | PiS | ... |
| iii | ಆಬ್ವರ್ಟೆಡ್ ಕಾನ್ವರ್ಸ್ ... | PoS′ | PaS′ | PoS′ | ... |
| iv | ಪಾರ್ಶಿಯಲ್ ಕಾಂಟ್ರಪಾಸಿಟಿವ್ ... | P′eS | P′iS | ... | P′iS |
| v | ಫುಲ್ ಕಾಂಟ್ರಾಪಾಸಿಟಿವ್ ... | P′aS′ | P′oS′ | ... | P′oS′ |
| vi | ಪಾರ್ಶಿಯಲ್ ಇನ್ವರ್ಸ್ ... | S′oP | S′iP | ... | ... |
| vii | ಫುಲ್ ಇನ್ವರ್ಸ್ ... | S′iP′ | S′oP′ | ... | ... |

## ೩. ಇತರ ಸಮಕ್ಷ ಅನುಮಾನರೂಪಗಳು

ಮೇಲೆ ಹೇಳಿದ ಸಮಕ್ಷ ಅನುಮಾನರೂಪಗಳನ್ನು ಸಾಮಾನ್ಯವಾಗಿ ಎಲ್ಲ ಪಾಶ್ಚಾತ್ಯ ತಾರ್ಕಿಕರೂ ಒಪ್ಪಿರುತ್ತಾರೆ. ಇವಲ್ಲದೆ ಇತರ ಸಮಕ್ಷ ತರ್ಕರೂಪಗಳನ್ನು ಕೆಲವು ಪಾಶ್ಚಾತ್ಯ ತಾರ್ಕಿಕರು ಮಾತ್ರ ವಿವರಿಸಿರುತ್ತಾರೆ. ಜವನ್ಸ್ ಎಂಬ ತಾರ್ಕಿಕನು ಇಮೀಡಿಯೆಟ್ ಇನ್‌ಫರೆನ್ಸ್ ಬೈ ಆ್ಯಡೆಡ್

ಡಿಟರ್ಮಿನಂಟ್ಸ್ (Immediate Inference by Added Determinants) ಮತ್ತು ಇಮೀಡಿಯೆಟ್ ಇನ್‌ಫರೆನ್ಸ್ ಬೈ ಕಾಂಪ್ಲೆಕ್ಸ್ ಕನ್‌ಸೆಪ್ಷನ್ (Immediate Inference by Complex Conception) ಎಂಬ ಎರಡು ರೂಪಗಳನ್ನು ಹೇಳಿರುತ್ತಾನೆ. ಕೆಯಿನ್ಸ್ ಎಂಬ ತಾರ್ಕಿಕನು ಇಮ್ಮೀಡಿ ಯೆಟ್ ಇನ್‌ಫರೆನ್ಸ್ ಬೈ ಕಾನ್ವರ್ಸ್ ರಿಲೇಷನ್ (Immediate Inference by Converse Relation) ಎಂಬ ಇನ್ನೊಂದು ಬಗೆಯಾದ ಸಮಕ್ಷ ತರ್ಕರೂಪ ವನ್ನು ವಿವರಿಸಿರುತ್ತಾನೆ. ಈ ಮೂರನ್ನೂ ಇಲ್ಲಿ ಸಂಗ್ರಹವಾಗಿ ಪರಿಚಯ ಮಾಡಿಕೊಡಲಾಗುವುದು.

(i) **'ಇಮೀಡಿಯೇಟ್ ಇನ್‌ಫರೆನ್ಸ್ ಬೈ ಆ್ಯಡೆಡ್ ಡಿಟರ್ಮಿನಂಟ್ಸ್'**—ಒಂದು ಪ್ರತಿಜ್ಞೆಯ ವಿಶೇಷ್ಯಪದಕ್ಕೆ ಒಂದು ವಿಶೇಷಣವನ್ನು ಸೇರಿಸಿದರೆ ಆ ವಿಶೇಷಣ ಆ ಪ್ರತಿಜ್ಞೆಯ ವಿಶೇಷಣಪದಕ್ಕೂ ಅನ್ವಯ ವಾಗುತ್ತದೆ. ಉದಾಹರಣೆಗಾಗಿ: 'ಎಲ್ಲ ತಮಿಳರೂ ಮನುಷ್ಯರು' ಎಂಬ ಪ್ರತಿಜ್ಞೆಯಲ್ಲಿ ವಿಶೇಷ್ಯಪದವಾದ 'ತಮಿಳರು' ಎಂಬುದಕ್ಕೆ 'ಪ್ರಾಮಾಣಿಕರು' ಎಂಬ ವಿಶೇಷಣ ಸೇರಿಸಿದರೆ, ಆ ವಿಶೇಷಣ ಆ ಪ್ರತಿಜ್ಞೆಯ ವಿಶೇಷಣಪದ ರಾದ ಮನುಷ್ಯರು ಎಂಬುದಕ್ಕೂ ಅನ್ವಯವಾಗುತ್ತದೆ. "ಎಲ್ಲ ತಮಿಳರೂ ಮನುಷ್ಯರು. ಆದ್ದರಿಂದ ಎಲ್ಲ ಪ್ರಾಮಾಣಿಕವಾದ ತಮಿಳರೂ ಪ್ರಾಮಾಣಿಕ ವಾದ ಮನುಷ್ಯರು." ಈ ವಿಧವಾದ ತರ್ಕ ಎಲ್ಲ ಸಂದರ್ಭಗಳಲ್ಲೂ ಸರಿ ಹೋಗುವುದಿಲ್ಲ. ಕೆಲವು ವೇಳೆ ಒಂದು ವಿಶೇಷಣವನ್ನು ವಿಶೇಷ್ಯಪದಕ್ಕೆ ಸೇರಿಸಿದಾಗ ಒಂದು ಅರ್ಥ ಬರುತ್ತದೆ. ವಿಶೇಷಣಪದಕ್ಕೆ ಸೇರಿಸಿದಾಗ ಬೇರೆಯ ಅರ್ಥ ಬರುತ್ತದೆ. 'ಬಡಗಿ ಮನುಷ್ಯ,' ಎಂಬ ಪ್ರತಿಜ್ಞೆಯ ವಿಶೇಷ್ಯ ವಿಶೇಷಣ ಪದಗಳಿಗೆ ಕೆಟ್ಟ ಎಂಬ ವಿಶೇಷಣವನ್ನು ಸೇರಿಸಿದಾಗ ವಿಶೇಷ್ಯದ ಅರ್ಥ ವಿಶೇಷಣದ ಅರ್ಥ ಬೇರೆಬೇರೆಯಾಗಿರುತ್ತದೆ. 'ಕೆಟ್ಟ ಬಡಗಿ' ಎಂದು ಹೇಳಿದಾಗ ಕೆಲಸ ಕೆಡಿಸುವ ಬಡಗಿ ಎಂದು ಅರ್ಥ. 'ಕೆಟ್ಟ ಮನುಷ್ಯ' ಎಂದು ಹೇಳಿದಾಗ ಅವನು ಸರಿಯಾದ ನಡತೆ ಇಲ್ಲದವನು, ಶೀಲವಿಲ್ಲದವನು ಎಂದು ಅರ್ಥ. ಕೆಟ್ಟ ಬಡಗಿ 'ಕೆಟ್ಟ' ಮನುಷ್ಯನಲ್ಲ. ಆದ್ದರಿಂದ ಇಮೀಡಿಯೆಟ್ ಇನ್‌ಫರೆನ್ಸ್ ಬೈ ಆ್ಯಡೆಡ್ ಡಿಟರ್ಮಿನಂಟ್ಸ್ ಎಲ್ಲ ಸಂದರ್ಭಗಳಲ್ಲೂ ಸಾಧುವಾದ ತರ್ಕವಲ್ಲ. ಸೇರಿಸಿದ ವಿಶೇಷಣ ವಿಶೇಷ್ಯ ವಿಶೇಷಣ ಪದಗಳೆರಡಕ್ಕೂ ಒಂದೇ ರೀತಿಯಲ್ಲಿ ಅನ್ವಯವಾದಾಗ ಮಾತ್ರ ಈ ವಿಧವಾದ ತರ್ಕ ಸಾಧುವಾಗಿರುತ್ತದೆ.

ii. **ಇಮೀಡಿಯೆಟ್ ಇನ್‌ಫರೆನ್ಸ್ ಬೈ ಕಾಂಪ್ಲೆಕ್ಸ್ ಕನ್‌ಸೆಪ್ಷನ್**—ಒಂದು ಪ್ರತಿಜ್ಞೆಯ ವಿಶೇಷ್ಯ ಪದಕ್ಕೆ ಒಂದು ವಿಶೇಷಣವನ್ನು ಸೇರಿಸಿ ಸಂಕೀರ್ಣ (Complex) ಗೊಳಿಸಿದಾಗ ವಿಶೇಷಣಪದವೂ ಕೂಡ ಅದೇ ರೀತಿಯಾಗಿ ಸಂಕೀರ್ಣವಾಗುತ್ತದೆ ಎಂದು ತರ್ಕಮಾಡುವುದು ಇನ್‌ಫರೆನ್ಸ್ ಬೈ ಕಾಂಪ್ಲೆಕ್ಸ್‌ಕನ್‌ಸೆಪ್ಷನ್. 'ದುಂಬಿಗಳು ಕೀಟಗಳು' ಎಂಬ ಪ್ರತಿಜ್ಞೆಯ ವಿಶೇಷ್ಯ ವಿಶೇಷ ಪದಗಳಿಗೆ ರೆಕ್ಕೆ ಎಂಬ ಸಮಾನ ಪದವನ್ನು ಸೇರಿಸಿ ಸಂಕೀರ್ಣಗೊಳಿಸಿ 'ದುಂಬಿಗಳ ರೆಕ್ಕೆ' 'ಕೀಟಗಳ ರೆಕ್ಕೆ' ಎಂದು ಹೇಳಬಹುದು. ಹೀಗೆ ಸಂಕೀರ್ಣಗೊಳಿಸಿದ ಭಾವಗಳೆರಡೂ ಸಮಾನ ವಾದುವು. ಈ ವಿಧವಾದ ವಾದವೂ ಕೂಡ ಎಲ್ಲ ಸಂದರ್ಭಗಳಲ್ಲೂ ಸರಿ ಹೋಗುವುದಿಲ್ಲ. 'ಇರುವೆ ಪ್ರಾಣಿ ಆದ್ದರಿಂದ ಒಂದು ದೊಡ್ಡ ಇರುವೆ ಒಂದು ದೊಡ್ಡ ಪ್ರಾಣಿ' ಎಂದು ವಾದಮಾಡುವುದು ನಗೆಗೀಡಾಗುತ್ತದೆ. ಇರುವೆ ಎಷ್ಟು ದೊಡ್ಡದಾದರೂ ದೊಡ್ಡ ಪ್ರಾಣಿಯೆಂದೆನ್ನಿಸಿಕೊಳ್ಳಲಾರದು. 'ಆಮೆ ಪ್ರಾಣಿ, ಆದ್ದರಿಂದ ವೇಗವಾಗಿ ನಡೆಯುವ ಆಮೆ ವೇಗವಾದ ಪ್ರಾಣಿ' ಎಂದು ವಾದಮಾಡಲಾಗದು. ಈ ವಿಧವಾದ ಸಮಕ್ಷ ತರ್ಕವೂ ನ್ಯೂನತೆ ಯಿಂದ ಕೂಡಿದ್ದು. ಒಂದು ಪ್ರತಿಜ್ಞೆಯ ವಿಶೇಷ್ಯ ವಿಶೇಷಣಗಳು ಸೇರಿ ಸಮೀಕರಣ (Equation) ವಾದ ಸಂದರ್ಭಗಳಲ್ಲಿ ಮಾತ್ರ ಈ ವಾದ ಸಾಧು ವಾಗುತ್ತದೆ. ಆದರೆ ಎಲ್ಲ ಪ್ರತಿಜ್ಞೆಗಳೂ ಸಮೀಕರಣಗಳಲ್ಲ.

iii. **ಇಮ್ಮಿಡಿಯೇಟ್ ಇನ್‌ಫರೆನ್ಸ್ ಬೈ ಕಾನ್ವರ್ಸ್ ರಿಲೇಷನ್**—ಇದು ಮೇಲೆ ವಿವರಿಸಿದ ಎರಡು ಸಮಕ್ಷತರ್ಕಗಳಿಗಿಂತಲೂ ಮುಖ್ಯ ವಾದುದು. ಈ ತರ್ಕವು ಸಂಬಂಧ ಸೂಚಕ ಪ್ರತಿಜ್ಞೆ (Relational-Propositions) ಗಳಿಗೆ ಅನ್ವಯಿಸುತ್ತದೆ. 'ಎಯು ಬಿಯ ತಂದೆ' 'ದಾವಣಗೆರೆ ಮೈಸೂರಿಗೆ ಉತ್ತರದಿಕ್ಕಿನಲ್ಲಿದೆ' 'ಬೆಂಗಳೂರು ಮೈಸೂರಿಗಿಂತ ದೊಡ್ಡ ನಗರ' ಇವು ಸಂಬಂಧ ಸೂಚಕ ಪ್ರತಿಜ್ಞೆಗಳು. ಇವುಗಳಿಂದ ನಾವು ನೇರವಾಗಿ ವಿಪರ್ಯ ಸಂಬಂಧವುಳ್ಳ ಪ್ರತಿಜ್ಞೆಗಳನ್ನು ಪಡೆಯಬಹುದು. 'ಏಯು ಬಿಯ ತಂದೆ' ಎಂಬ ಪ್ರತಿಜ್ಞೆಯಿಂದ 'ಬಿ ಯು ಏಯ ಮಗ' ಎಂಬ ಪ್ರತಿಜ್ಞೆಯನ್ನು ವಿಪರ್ಯ ಸಂಬಂಧದ ಮೂಲಕ ಪಡೆಯಬಹುದು. ಹಾಗೆಯೇ 'ಬೆಂಗಳೂರು ಮೈಸೂರಿಗಿಂತ ದೊಡ್ಡ ನಗರ' ಎಂಬ ಪ್ರತಿಜ್ಞೆಯಿಂದ 'ಮೈಸೂರು ನಗರ ಬೆಂಗಳೂರಿಗಿಂತ ಚಿಕ್ಕದು' ಎಂಬ ಪ್ರತಿಜ್ಞೆಯನ್ನು ನೇರವಾಗಿ ಪಡೆಯಬಹುದು.

## ಅಭ್ಯಾಸಗಳು (೯)

೧. 'ಸಮುಕ್ಷ ಅನುಮಾನವನ್ನು' ಅನುಮಾನವೆಂದು ಪರಿಗಣಿಸಬಹುದೆ? ವಿಮರ್ಶಿಸಿ.

೨. ಸಮುಕ್ಷ ಅನುಮಾನದ ಉಪಯೋಗವೇನು?

೩. 'ಪ್ರತಿಜ್ಞೆಗಳ ವಿರೋಧ' (Opposition of Proposition) ಎಂದರೇನು?

೪. 'ಮಿತವಿರೋಧ,' ಮತ್ತು 'ಅತ್ಯಂತ ವಿರೋಧ' ಇವುಗಳಿಗಿರುವ ವ್ಯತ್ಯಾಸವನ್ನು ಸ್ಪಷ್ಟಪಡಿಸಿ.

೫. (*a*) O ಸತ್ಯವಾದರೆ A, E ಮತ್ತು I ಗಳಲ್ಲಿ ಯಾವುದು ಸತ್ಯ ಅಥವಾ ಅಸತ್ಯ ಎಂದು ಹೇಳಬಹುದು?

(*b*) A ಸತ್ಯವಾದರೆ E, I ಮತ್ತು O ಗಳಲ್ಲಿ ಯಾವುದು ಸತ್ಯ ಅಥವಾ ಅಸತ್ಯ ಎಂದು ಹೇಳಬಹುದು?

(*c*) I ಸತ್ಯವಾದರೆ E. O. ಮತ್ತು A ಗಳಲ್ಲಿ ಯಾವುದು ಸತ್ಯ ಅಥವಾ ಅಸತ್ಯ ಎಂದು ಹೇಳಬಹುದು?

೬. ಈ ಕೆಳಗೆ ಕೊಟ್ಟಿರುವ ಪ್ರತಿಜ್ಞೆಗಳಿಗೆ ಅಸಂಗತವಾದ ಪ್ರತಿಜ್ಞೆಗಳು ಯಾವುವು?

(*a*) ಮಾನವರೆಲ್ಲರೂ ಸುಖ ಬಯಸುತ್ತಾರೆ.
(*b*) ವಿವೇಕಿಗಳು ಮಾತ್ರ ಮಿತವ್ಯಯ ಮಾಡುತ್ತಾರೆ.
(*c*) ಸರ್ವನಾಶವಾಗಿಲ್ಲ.

೭. ವಿಘಟನೆ ಎಂದರೆ ಏನು? 'ಮಹಾತ್ಮ ಗಾಂಧಿಯವರು ಆದರ್ಶಪುರುಷರು.' ಈ ಪ್ರತಿಜ್ಞೆಗೆ ಸಂಗತವಾದ ವಿಘಟನರೂಪಗಳು ಯಾವುವು?

೮. ಕೆಳಗೆ ಕೊಟ್ಟಿರುವ ಮೊದಲನೆಯ ಪ್ರತಿಜ್ಞೆ ಸತ್ಯವಾದರೆ ಉಳಿದ ಪ್ರತಿಜ್ಞೆಗಳು ಸತ್ಯವೆ, ಅಸತ್ಯವೆ?

(i) ಸತ್ಯವಾದದ್ದು ಯಾವುದೂ ಉಪಯೋಗವಿಲ್ಲದ್ದಲ್ಲ.
(ii) ಉಪಯೋಗವಿಲ್ಲದ್ದು ಯಾವುದೂ ಸತ್ಯವಲ್ಲ.
(iii) ಸತ್ಯವಾದದ್ದೆಲ್ಲ ಉಪಯೋಗವಿಲ್ಲದ್ದಲ್ಲ.
(iv) ಸತ್ಯವಾದದ್ದೆಲ್ಲ ಉಪಯೋಗವುಳ್ಳದ್ದು.
(v) ಉಪಯೋಗವಿಲ್ಲದ್ದು ಯಾವುದೂ ಸತ್ಯವಲ್ಲ.
(vi) ಉಪಯೋಗವಾದವುಗಳಲ್ಲಿ ಕೆಲವು ಸತ್ಯವಲ್ಲ.
(vii) ಸತ್ಯವಲ್ಲದ್ದೆಲ್ಲ ಉಪಯೋಗವಿಲ್ಲದ್ದು.

೯. 'ಉಷ್ಣವು ಪದಾರ್ಥಗಳನ್ನು ಉಬ್ಬಿಸುತ್ತದೆ' ಎಂಬ ಪ್ರತಿಜ್ಞೆಯನ್ನು ಆಧಾರವಾಗಿ ಇಟ್ಟುಕೊಂಡು 'ತಂಪು ಪದಾರ್ಥಗಳನ್ನು ಕುಗ್ಗಿಸುತ್ತದೆ' ಎಂಬ ನಿರ್ಣಯವನ್ನು ಸಾಧಿಸಬಹುದೆ?

೧೦. ಮೊದಲನೆಯ ಪ್ರತಿಜ್ಞೆಯಿಂದ, ತದನಂತರ ಬರುವ ಪ್ರತಿಜ್ಞೆಗಳನ್ನು ಯಾವ ರೀತಿಯ ವಿಘಟನೆಯ ಮೂಲಕ ಪಡೆಯುತ್ತೇವೆ ?

(i) ಎಲ್ಲ ಹಕ್ಕಿಗಳೂ ರೆಕ್ಕೆಗಳನ್ನು ಪಡೆದಿವೆ.
(ii) ಯಾವ ಹಕ್ಕಿಗಳೂ ರೆಕ್ಕೆ ಇಲ್ಲದವುಗಳಲ್ಲ.
(iii) ರೆಕ್ಕೆ ಇಲ್ಲದ ಯಾವುದೂ ಪಕ್ಷಿಯಲ್ಲ.
(iv) ರೆಕ್ಕೆ ಇಲ್ಲದುವೆಲ್ಲ ಪಕ್ಷಿಯಲ್ಲದುವು.
(v) ಕೆಲವು ರೆಕ್ಕೆ ಇರುವ ಪ್ರಾಣಿಗಳು ಪಕ್ಷಿಗಳು.

೧೧. 'ಶಾಬ್ದಬೋಧವನ್ನು' ಅನುಮಾನವಾಗಿ ಎಣಿಸಬಹುದೆ ? ಕಾರಣಸಹಿತವಾಗಿ ಉತ್ತರ ಕೊಡಿ.

೧೨. ಒಂದು ಪ್ರತಿಜ್ಞೆಯ ವಿಶೇಷ್ಯ ಪದಕ್ಕೆ ಒಂದು ವಿಶೇಷಣವನ್ನು ಸೇರಿಸಿದಾಗ, ಆ ಪ್ರತಿಜ್ಞೆಯ ವಿಶೇಷಣಪದಕ್ಕೂ ಅದೇ ವಿಶೇಷಣ ಸೇರಿಸಿದಂತೆ ನಿರ್ಧರಿಸಬಹುದೆ ? ಉದಾಹರಣೆಗಳನ್ನು ಕೊಟ್ಟು ವಾದಿಸಿ.

೧೩. 'ಇನ್‌ಫರೆನ್ಸ್ ಬೈ ಆ್ಯಡೆಡ್ ಡಿಟರ್ಮಿನಂಟ್ಸ್,' 'ಇನ್‌ಫರೆನ್ಸ್ ಬೈ ಕಾಂಪ್ಲೆಕ್ಸ್ ಕನ್‌ಸೆಪ್ಷನ್' ಮತ್ತು 'ಇನ್‌ಫರೆನ್ಸ್ ಬೈ ಕಾನ್ವರ್ಸ್ ರಿಲೇಷನ್.' ಇವುಗಳ ಸ್ವರೂಪವೇನು ? ಒಂದೊಂದಕ್ಕೂ ಉದಾಹರಣೆ ಕೊಡಿ.

೧೪. ಈ ತರ್ಕಗಳನ್ನು ಪರೀಕ್ಷಿಸಿ :

ಚಿತ್ರಗಾರ ಮನುಷ್ಯ, ಆದ್ದರಿಂದ ಕೆಟ್ಟ ಚಿತ್ರಗಾರ ಕೆಟ್ಟ ಮನುಷ್ಯ.
ಬಸವನ ಹುಳು ಪ್ರಾಣಿ, ಆದ್ದರಿಂದ ವೇಗವಾದ ಬಸವನ ಹುಳು ವೇಗವಾದ ಪ್ರಾಣಿ.
ಇಲಿ ಒಂದು ಪ್ರಾಣಿ. ಆದ್ದರಿಂದ ಒಂದು ದೊಡ್ಡ ಇಲಿ ಒಂದು ದೊಡ್ಡ ಪ್ರಾಣಿ.

# ೧೦. ಸಮಧ್ಯಮ ಅನುಮಾನ

## (Mediate Inference)

ಹಿಂದಿನ ಅಧ್ಯಾಯದಲ್ಲಿ ಒಂದು ಪ್ರತಿಜ್ಞೆಯಿಂದ ಬೇರೊಂದು ಪ್ರತಿಜ್ಞೆಯ ಸಹಾಯವಿಲ್ಲದೆ, ಮಧ್ಯಸ್ತಿಕೆ ಇಲ್ಲದೆ ನೇರವಾಗಿ ಒಂದು ನಿರ್ಣಯವನ್ನು ಪಡೆಯುವ ಸಮಕ್ಷ ಅನುಮಾನವಿಧಾನವನ್ನು ತಿಳಿದುದಾಯಿತು. ಈ ವಿಧವಾದ ಅನುಮಾನವು ತಾನು ಪಡೆದ ನಿರ್ಣಯಕ್ಕೆ ಆಧಾರವೇನು ಕಾರಣವೇನು ಎಂಬುದನ್ನು ತಿಳಿಯಪಡಿಸುವುದಿಲ್ಲ. ಒಂದು ಅಸ್ತ್ಯರ್ಥಕ ಪ್ರತಿಜ್ಞೆಯನ್ನಾಗಲಿ ನೇತ್ಯರ್ಥಕ ಪ್ರತಿಜ್ಞೆಯನ್ನಾಗಲಿ ನಾವು ಮಾಡಿದಾಗ ಒಂದು ವಿಷಯವನ್ನು ಕುರಿತ ಅದು ಒಂದು ವಿಶೇಷಣವನ್ನು ಪಡೆದಿದೆ ಅಥವಾ ಇಲ್ಲ ಎಂಬುದನ್ನು ಪ್ರತಿಪಾದಿಸುತ್ತೇವೆ, (Assert) ದೃಢವಾಗಿ ಹೇಳುತ್ತೇವೆ. ಹೀಗೆ ಹೇಳಿದಾಗ ನಾವು ಒಂದು ವಿಷಯವನ್ನು ಪ್ರಕಟಿಸಿದಂತಾಯಿತೇ ಹೊರತು, ಅದಕ್ಕೆ ಕಾರಣ ಹೇಳಿ ಸಾಧಿಸಿದಂತಾಗಲಿಲ್ಲ. ಹಾಗೆ ಕಾರಣ ಹೇಳದ ಪ್ರತಿಜ್ಞೆ ಮೂಢಪ್ರತಿಜ್ಞೆ. ತರ್ಕಶಾಸ್ತ್ರದಲ್ಲಿ ಇಂಥ ಪ್ರತಿಜ್ಞೆಗೆ ಬೆಲೆ ಇಲ್ಲ. ತರ್ಕಶಾಸ್ತ್ರದಲ್ಲಿ ಪ್ರತಿಜ್ಞೆ ಎಂದರೆ ಸಾಧಿಸಬಹುದಾದ ಪ್ರತಿಜ್ಞೆ. ಕಾರಣ ಕೊಟ್ಟು ಸಮರ್ಥಿಸಬಹುದಾದ ಪ್ರತಿಜ್ಞೆಯೇ ತರ್ಕಶಾಸ್ತ್ರದಲ್ಲಿ ಪ್ರತಿಜ್ಞೆ ಎಂದು ಕರೆಯಿಸಿಕೊಳ್ಳಲು ಯೋಗ್ಯವಾದುದು. ಪ್ರತಿಜ್ಞೆಮಾಡಿ ಹೇಳಿದ್ದು ಎಂದರೆ ಸಮರ್ಥನೆಗೆ ಸಿದ್ಧವಾಗಿ ನಿಂತಿರುವ ನಂಬಿಕೆ. ಆದ್ದರಿಂದ ತರ್ಕಶಾಸ್ತ್ರದಲ್ಲಿ ಯಾವ ಒಂದು ಪ್ರತಿಜ್ಞೆಯೂ ತನ್ನಷ್ಟಕ್ಕೆ ತಾನು ಹೊರಚ್ಚಾಗಿ ನಿರಾಧಾರವಾಗಿ ಇರಲು ಸಾಧ್ಯವಿಲ್ಲ; ಅದರ ಸಮರ್ಥನೆಗೆ ಸಾಧಕವಾದ ಇತರ ಪ್ರತಿಜ್ಞೆಗಳ ಆಧಾರದ ಮೇಲೆ ನಿಂತಿದೆ. ಅದರ ಸಮರ್ಥನೆಗೆ ಸಾಧಕವಾದ ಇತರ ಪ್ರತಿಜ್ಞೆಗಳೊಡನೆ ನಿಯುತ ಸಂಬಂಧ ಪಡೆದಿರುತ್ತದೆ, ನಿಕಟ ಸಂಬಂಧ ಪಡೆದಿರುತ್ತದೆ. ಒಂದು ಪ್ರತಿಜ್ಞೆಯನ್ನು ಸಮರ್ಥಿಸಲು ಅಗತ್ಯವಾದ ಕಾರಣಕ್ಕೆ ಪಾಶ್ಚಾತ್ಯ ತಾರ್ಕಿಕರು 'ರೀಸನ್' ಎಂದು ಹೆಸರು ಕೊಟ್ಟಿರುತ್ತಾರೆ. ಭಾರತೀಯರು ಅದಕ್ಕೆ 'ಹೇತು' ಎಂದು ಹೆಸರು ಕೊಟ್ಟಿರುತ್ತಾರೆ. ಆದುದರಿಂದಲೇ ತರ್ಕಶಾಸ್ತ್ರವನ್ನು ಪಾಶ್ಚಾತ್ಯರು 'ಸಯನ್ಸ್ ಆಫ್ ರೀಸನಿಂಗ್' ಎಂದೂ ಭಾರತೀಯರು 'ಹೇತುವಿದ್ಯೆ' ಎಂದೂ ಕರೆದಿರುವುದು. ಒಂದು ವಿಷಯವನ್ನು ಸಾಧಿಸಲು ಅಗತ್ಯವಾದ ಕಾರಣ ಹೇತು. ಹೇತುವು ಒಂದು ಪ್ರತಿಜ್ಞೆಯನ್ನು ಸಾಧಿಸಲು ಅವಶ್ಯಕವಾದ ಅಂಶ

ವಾದುದರಿಂದ ಅದನ್ನು 'ಸಾಧನ' ಎಂದೂ, 'ಲಿಂಗ' ಎಂದೂ ಭಾರತೀಯ ತಾರ್ಕಿಕರು ಹೇಳುವುದುಂಟು. 'ಬೆಟ್ಟದಲ್ಲಿ ಬೆಂಕಿ ಇದೆ' ಎಂದು ನಾವು ಪ್ರತಿಜ್ಞೆಮಾಡಿ ಹೇಳಿದಾಗ ಅದು ಹೇಗೆ ಎಂಬ ಪ್ರಶ್ನೆ ಹುಟ್ಟುತ್ತದೆ. ಆ ಪ್ರಶ್ನೆಗೆ ನಾವು ಉತ್ತರ ಕೊಡಬೇಕು. ಅದಕ್ಕೆ ಉತ್ತರವಾಗಿ ನಾವು 'ಬೆಟ್ಟದಲ್ಲಿ ಹೊಗೆ ಇರುವುದರಿಂದ' ಎಂದು ಹೇಳಬಹುದು. ಅಷ್ಟು ಹೇಳಿದ ಮಾತ್ರಕ್ಕೇ ನಾವು ಬೆಟ್ಟದಲ್ಲಿ ಬೆಂಕಿ ಇದೆ ಎಂಬುದನ್ನು ಸಮರ್ಥಿಸಿದಂತಾಗುವುದಿಲ್ಲ. ಹೊಗೆಗೂ ಬೆಂಕಿಗೂ ಅಗತ್ಯಸಂಬಂಧವಿದೆ, ಎಲ್ಲೆಲ್ಲಿ ಹೊಗೆ ಇದೆಯೋ ಅಲ್ಲೆಲ್ಲ ಬೆಂಕಿ ಇರುತ್ತದೆ ಎಂದು ಹೇಳಿದಾಗ ನಾವು ಬೆಟ್ಟದಲ್ಲಿ ಬೆಂಕಿ ಇದೆ ಎಂಬುದನ್ನು ತರ್ಕಬದ್ಧವಾಗಿ ಸಮರ್ಥಿಸಿದಂತಾಗುತ್ತದೆ.

ಮೇಲಿನ ತರ್ಕದಲ್ಲಿ ನಾವು ಹೊಗೆಗೂ ಬೆಂಕಿಗೂ ಇರುವ ಅವಶ್ಯ ಸಂಬಂಧದ ಮೂಲಕ ಬೆಟ್ಟದಲ್ಲಿ ಬೆಂಕಿ ಇದೆ ಎಂಬ ನಿರ್ಣಯವನ್ನು ಸಾಧಿಸುತ್ತೇವೆ. ಈ ಅವಶ್ಯಸಂಬಂಧ ಬೆಟ್ಟಕ್ಕೂ ಬೆಂಕಿಗೂ ಮಧ್ಯವರ್ತಿಯಾಗಿರುತ್ತದೆ. ಹೀಗೆ ಮಧ್ಯವರ್ತಿಯಾದ ಹೇತು ಹೊಗೆ. ಮಧ್ಯವರ್ತಿಯಾದ ಹೇತುವಿನ ಮೂಲಕ ಒಂದು ನಿರ್ಣಯವನ್ನು ಸಾಧಿಸುವ ಕ್ರಿಯೆಗೆ ಪಾಶ್ಚಾತ್ಯ ತಾರ್ಕಿಕರು ಮೀಡಿಯೆಟ್ ಇನ್‌ಫರೆನ್ಸ್ ಎಂದು ಹೆಸರು ಕೊಟ್ಟಿರುತ್ತಾರೆ. ಮೀಡಿಯೆಟ್ ಇನ್‌ಫರೆನ್ಸ್ ಎಂಬ ಪದವನ್ನು ನಾವು ಸಮಧ್ಯಮ ಅನುಮಾನ ಅಥವಾ ಲಿಂಗಾನುಮಾನ ಎಂದು ಕರೆಯಬಹುದು.

ಈ ಅನುಮಾನಕ್ರಿಯೆಯನ್ನು ಸ್ಪಷ್ಟವಾಗಿ ಪ್ರತಿಜ್ಞೆಗಳ ಮೂಲಕ ತಿಳಿಸುವ ತಾರ್ಕಿಕರೂಪಕ್ಕೆ ಪಾಶ್ಚಾತ್ಯ ತಾರ್ಕಿಕರು "ಸಿಲಜಿಸಂ" ಎಂದು ಹೆಸರು ಕೊಟ್ಟಿರುತ್ತಾರೆ. ಪ್ರತಿಜ್ಞೆಗಳ ರೂಪದಲ್ಲಿ ಹೇಳಿದಾಗ ಅದು ಈ ರೀತಿ ಇರುತ್ತದೆ:

ಎಲ್ಲ ಮಾನವರೂ ಮರ್ತ್ಯರು
ಸಾಕ್ರೆಟೀಸ್ ಮಾನವನಾಗಿದ್ದಾನೆ
∴ ಸಾಕ್ರೆಟೀಸ್ ಮರ್ತ್ಯನಾಗಿರುತ್ತಾನೆ.

ಸಿಲಜಿಸಂ ಮೂರು ಪ್ರತಿಜ್ಞೆಗಳನ್ನು ಒಳಗೊಂಡ ತರ್ಕ. ಮೊದಲನೆಯ ಪ್ರತಿಜ್ಞೆಗೆ ಮೇಜರ್ ಪ್ರೆಮಿಸ್ ಎಂದೂ, ಎರಡನೆಯದಕ್ಕೆ ಮೈನರ್ ಪ್ರೆಮಿಸ್ ಎಂದೂ, ಮೂರನೆಯದಕ್ಕೆ ಕನ್‌ಕ್ಲೂಷನ್ (ನಿರ್ಣಯ) ಎಂದೂ ಹೆಸರು. ಈ ಮೂರೂ ಸಿಲಜಿಸ್ಟಂನ ಮೂರು ಅವಯವಗಳು. ಕೊನೆಯ ಪ್ರತಿಜ್ಞೆಯಾದ

ನಿರ್ಣಯ ಅಥವಾ ಅನುಮಿತಿಯ ವಿಶೇಷ್ಯಪದಕ್ಕೆ ಮೈನರ್ ಟರ್ಮ್ (ಪಕ್ಷಪದ) ಎಂದೂ, ಅದರ ವಿಶೇಷಣಪದಕ್ಕೆ ಮೇಜರ್ ಟರ್ಮ್ (ಸಾಧ್ಯಪದ) ಎಂದೂ ಹೆಸರು. ಇವೆರಡಕ್ಕೂ ಸಂಬಂಧವೇರ್ಪಡಿಸುವ, ಅಂದರೆ ಮಧ್ಯವರ್ತಿಯಾದ ಪದ 'ಮಿಡಲ್ ಟರ್ಮ್' ಈ ಮಧ್ಯವರ್ತಿಪದ ಅನುಮಾನಕ್ರಿಯೆಯ ಕೀಲು, ಮೂಲಾಧಾರ. ಆದುದರಿಂದಲೇ ಈ ಅನುಮಾನಕ್ರಿಯೆಗೆ ಮೀಡಿಯೆಟ್ ಇನ್‌ಫರೆನ್ಸ್ ಎಂದು ಪಾಶ್ಚಾತ್ಯ ತಾರ್ಕಿಕರು ಹೆಸರು ಕೊಟ್ಟಿರುವುದು.

ಒಂದು ವಿಶೇಷ್ಯ ಒಂದು ವಿಶೇಷಣವನ್ನು ಪಡೆದಿದ್ದರೆ ಆ ವಿಶೇಷಣದ ವಿಚಾರವಾಗಿ ನಾವು ಏನು ಹೇಳಿದರೂ ಅದು ವಿಶೇಷ್ಯಕ್ಕೂ ಅನ್ವಯಿಸುತ್ತದೆ. "When one thing is predicated of another as subject, whatsoever things are said of the thing predicated will also be said of the subject." "ಒಂದು ವಿಶೇಷಣದ ವಿಚಾರವಾಗಿ ನಾವು ಅಸ್ತ್ಯರ್ಥಕವಾಗಿ ಆಗಲಿ ನೇತ್ಯರ್ಥಕವಾಗಿ ಆಗಲಿ ಯಾವ ವಿಶೇಷಣವನ್ನು ಉಪಯೋಗಿಸಿದರೂ, ಆ ವಿಶೇಷಣವು ಅದೇ ರೀತಿಯಲ್ಲಿ ವಿಶೇಷ್ಯಕ್ಕೂ ಅನ್ವಯವಾಗುತ್ತದೆ." 'ಎಲ್ಲ ಮಾನವರೂ ಮರ್ತ್ಯರು, ಸಾಕ್ರೆಟೀಸ್ ಮಾನವ: ಸಾಕ್ರೆಟೀಸ್ ಮರ್ತ್ಯ' ಎಂಬ ಅನುಮಾನವಾಕ್ಯದಲ್ಲಿ ಸಾಕ್ರೆಟೀಸ್ ಎಂಬ ಪದ ವಿಶೇಷ್ಯ, ಮಾನವ ಎಂಬುದು ವಿಶೇಷಣ. ಮಾನವ ಎಂಬ ವಿಶೇಷಣದ ವಿಚಾರವಾಗಿ ಅಸ್ತ್ಯರ್ಥಕವಾಗಿ ಹೇಳಿದ ಮರ್ತ್ಯ ಎಂಬ ವಿಶೇಷಣ ವಿಶೇಷ್ಯವಾದ ಸಾಕ್ರೆಟೀಸ್‌ಗೂ ಅನ್ವಯವಾಗುತ್ತದೆ. ಇದು ಸಮಧ್ಯಮ ಅನುಮಾನಕ್ಕೆ ಆಧಾರವಾದ ತತ್ತ್ವ. ಈ ತತ್ತ್ವವನ್ನು ಸ್ಪಷ್ಟಪಡಿಸಿದವನು ಅರಿಸ್ಟಾಟಲ್. ಈ ತತ್ತ್ವಕ್ಕೆ ಈಚಿನ ತಾರ್ಕಿಕರು 'ಡಿಕ್ಟಂ' (Dictum) ಎಂದು ಹೆಸರುಕೊಟ್ಟಿರುತ್ತಾರೆ. ಒಂದು ವರ್ಗ (Class) ಕ್ಕೆ ಸೇರಿದ ಎಲ್ಲದರ ವಿಚಾರವಾಗಿ ಏನು ನಿಜವಾದರೂ ಅದು ಆ ವರ್ಗದ ಪ್ರತಿಯೊಂದರ ವಿಚಾರದಲ್ಲೂ ಪ್ರತ್ಯೇಕ ಪ್ರತ್ಯೇಕವಾಗಿ ನಿಜ; ಒಂದು ವರ್ಗಕ್ಕೆ ಸೇರಿದ ಯಾವುದರ ವಿಚಾರವಾಗಿಯೂ ನಿಜವಲ್ಲದ್ದು, ಬೇರೆಬೇರೆಯಾಗಿ ಪ್ರತಿಯೊಂದರ ವಿಚಾರವಾಗಿಯೂ ನಿಜವಲ್ಲವೆಂದು ಹೇಳಬಹುದು.* ಸಮಧ್ಯಮ ಅನುಮಾನಕ್ಕೆ ತಳಹದಿಯಾದ ಈ ತತ್ತ್ವಕ್ಕೆ ಈಗಾಗಲೇ ನಾವು ತಿಳಿಸಿರುವ ಆಲೋಚನೆಯ ಮೂಲತತ್ತ್ವ (Laws of Thought) ಗಳು ಆಧಾರ.

---

* "What is true of all the members of a class (or things to which a term refers) is true of each separately, and what is true of none can be denied of each separately."

ಸಮರ್ಥ್ಯವು ಅನುಮಾನ ಸರಿಯಾಗಿರಬೇಕಾದರೆ ಅದು ಕೆಲವು ನಿಯಮಗಳಿಗೆ ಅನುಸಾರವಾಗಿ ಇರಬೇಕು. ಪಾಶ್ಚಾತ್ಯ ತಾರ್ಕಿಕರು ಅವುಗಳನ್ನು ಸೂತ್ರರೂಪದಲ್ಲಿ ವಿವರಿಸುವುದು ವಾಡಿಕೆ.

(೧) **ಪ್ರತಿಯೊಂದು ಸಮರ್ಥ್ಯವು ಅನುಮಾನದಲ್ಲೂ ಮೂರೇ ಪದ (Terms) ಗಳಿರಬೇಕು**—ಮೂರಕ್ಕಿಂತ ಹೆಚ್ಚಾಗಿಯೂ ಇರಕೂಡದು ಕಡಮೆಯಾಗಿಯೂ ಇರಕೂಡದು. ಈ ಪದಗಳು ಒಂದೇ ಅರ್ಥದಲ್ಲಿ ಉಪಯೋಗವಾಗಿರಬೇಕು. ಈ ಮೂರು ಪದಗಳು: (೧) ಸಾಧ್ಯಪದ (Major term), (೨) ಲಿಂಗ, ಹೇತು, ಸಾಧನ ಅಥವಾ ಮಧ್ಯವರ್ತಿಪದ (Middle-term) ಮತ್ತು (೩) ಪಕ್ಷಪದ (Minor term).

(೨) **ಪ್ರತಿಯೊಂದು ಸಮರ್ಥ್ಯವು ಅನುಮಾನದಲ್ಲೂ ಮೂರೇ ಪ್ರತಿಜ್ಞೆ (Propositions) ಗಳಿರಬೇಕು**—ಅವು (೧) ಸಾಧ್ಯಪ್ರತಿಜ್ಞೆ (Major Premiss), (೨) ಪಕ್ಷಪ್ರತಿಜ್ಞೆ (Minor Premiss), ಮತ್ತು ನಿರ್ಣಯ ಅಥವಾ ಅನುಮಿತಿ (Conclusion).

(೩) ಲಿಂಗ, ಹೇತು ಸಾಧನಪದ, ಅಥವಾ **ಮಧ್ಯವರ್ತಿಪದ ಒಂದು ಪ್ರತಿಜ್ಞೆಯಲ್ಲಾದರೂ ಪೂರ್ಣವ್ಯಾಪನೆ (Distributed) ಪಡೆದಿರಬೇಕು**—ಅಂದರೆ ಆ ಪದವು ನಿರ್ದೇಶಿಸುವ ವ್ಯಕ್ತಿಗೆ ಅಥವಾ ವರ್ಗಕ್ಕೆ ಪೂರ್ಣವಾಗಿ ಅನ್ವಯವಾಗಬೇಕು; ಆ ವ್ಯಕ್ತಿಯನ್ನು ಅಥವಾ ವರ್ಗವನ್ನು ಪೂರ್ಣವಾಗಿ ವ್ಯಾಪಿಸಿರಬೇಕು.

(೪) **ಆಧಾರ ಪ್ರತಿಜ್ಞೆಗಳಲ್ಲಿ ಒಂದು ಪದ ಪೂರ್ಣವ್ಯಾಪನೆ ಪಡೆಯದಿದ್ದಲ್ಲಿ ಅದು ನಿರ್ಣಯ ಅಥವಾ ಅನುಮಿತಿಯಲ್ಲಿ ಪೂರ್ಣವ್ಯಾಪನೆ ಪಡೆದಿರಕೂಡದು.**

(೫) **ಎರಡು ನೇತ್ಯರ್ಥಕ ಆಧಾರಪ್ರತಿಜ್ಞೆ (Negative Premises) ಗಳಿಂದ ಯಾವ ನಿರ್ಣಯವನ್ನೂ ಅಥವಾ ಅನುಮಿತಿಯನ್ನೂ ಪಡೆಯಲು ಸಾಧ್ಯವಿಲ್ಲ.**

(೬) **ಒಂದು ಆಧಾರವಾಕ್ಯ ನೇತ್ಯರ್ಥಕವಾಗಿದ್ದರೆ, ನಿರ್ಣಯವೂ ನೇತ್ಯರ್ಥಕವಾಗಿರಬೇಕು; ನಿರ್ಣಯವು ನೇತ್ಯರ್ಥಕವಾಗಿದ್ದರೆ ಆಧಾರವಾಕ್ಯಗಳಲ್ಲಿ ಒಂದು ನೇತ್ಯರ್ಥಕವಾಗಿರಬೇಕು**—ಅಂದರೆ ನೇತ್ಯರ್ಥಕ ನಿರ್ಣಯವನ್ನು ಸಮರ್ಥನೆ ಮಾಡಬೇಕಾದರೆ ಆಧಾರವಾಕ್ಯಗಳಲ್ಲಿ ಒಂದು ನೇತ್ಯರ್ಥಕವಾಗಿರಲೇಬೇಕು.

ಮೇಲಿನ ಆರು ಮೂಲಸೂತ್ರಗಳಿಂದ ಎರಡು ಉಪಸೂತ್ರ (Subsidiary Rules) ಗಳನ್ನು ಪಡೆಯಬಹುದು. ಅವು ಈ ರೀತಿ ಇವೆ:

**(೭) ಎರಡು ಅಸಾಮಾನ್ಯ ಆಧಾರ ಪ್ರತಿಜ್ಞೆ (Particular Premises) ಗಳಿಂದ ಯಾವ ನಿರ್ಣಯವನ್ನೂ ಪಡೆಯಲು ಸಾಧ್ಯವಿಲ್ಲ.**

**(೮) ಆಧಾರಪ್ರತಿಜ್ಞೆಗಳಲ್ಲಿ ಒಂದು ಅಸಾಮಾನ್ಯ ಪ್ರತಿಜ್ಞೆಯಾದರೆ, ನಿರ್ಣಯಪ್ರತಿಜ್ಞೆಯೂ ಅಸಾಮಾನ್ಯಪ್ರತಿಜ್ಞೆಯಾಗಿರಬೇಕು.**

ಮೇಲೆ ಹೇಳಿದ ಒಂದೊಂದು ಸೂತ್ರವನ್ನೂ ನಾವು ಏಕೆ ಪರಿಪಾಲಿಸಬೇಕು, ಅವು ಏಕೆ ಅಗತ್ಯ ಎಂಬುದನ್ನೂ ಸ್ವಲ್ಪ ವಿಚಾರಮಾಡೋಣ.

೧. ಸಮಧ್ಯಮ ಅನುಮಾನದ ರಚನೆಯನ್ನು ನಾವು ಪರಿಶೀಲಿಸಿದರೆ ಮೊದಲನೆಯ ಎರಡು ನಿಯಮಗಳು ಸ್ಪಷ್ಟಪಡುತ್ತವೆ. ಸಮಧ್ಯಮ ಅನುಮಾನದಲ್ಲಿ ನಾವು ಎರಡು ಬೇರೆಬೇರೆ ಅಂಶಗಳನ್ನು ಅವೆರಡಕ್ಕೂ ಸಮಾನವಾದ, ಅಥವಾ ಮಧ್ಯವರ್ತಿಯಾದ ಮೂರನೆಯ ಅಂಶಕ್ಕೆ ಹೋಲಿಸುತ್ತೇವೆ. ಆ ಮಧ್ಯವರ್ತಿಪದ ಒಂದೇ ಆಗದಿದ್ದಲ್ಲಿ ಒಂದೇ ಅರ್ಥದಲ್ಲಿ ಉಪಯೋಗವಾಗದಿದ್ದಲ್ಲಿ ಹೋಲಿಕೆ ಸಾಧ್ಯವಿಲ್ಲ. ಆದ್ದರಿಂದ ಅನುಮಾನ ಸಿದ್ಧಿಸುವುದಿಲ್ಲ. ಮಧ್ಯವರ್ತಿ ಪದ ದ್ವಂದ್ವಾರ್ಥಗಳುಳ್ಳದ್ದಾಗಿದ್ದರೆ ಅಥವಾ ಅನಿಶ್ಚಿತ ಅರ್ಥವುಳ್ಳದ್ದಾಗಿದ್ದರೆ ನಮ್ಮ ವಾದ ತಪ್ಪಾಗುತ್ತದೆ, ಅಪವಾದವಾಗುತ್ತದೆ. ಅಂಥ ಅಪವಾದಕ್ಕೆ ನಾಲ್ಕು ಪದಗಳ ಅಪವಾದ (Fallacy of Four Terms) ವೆಂದು ಹೆಸರು.

ಸರಿಯಾದ ನಿಯಮ ಆಚರಿಸಲು ಯೋಗ್ಯವಾದದ್ದು
ಗುರುತ್ವಾಕರ್ಷಣನಿಯಮ ಸರಿಯಾದ ನಿಯಮ
∴ ಗುರುತ್ವಾಕರ್ಷಣನಿಯಮ ಆಚರಿಸಲು ಯೋಗ್ಯವಾದದ್ದು

ಮೊದಲನೆಯ ಆಧಾರಪ್ರತಿಜ್ಞೆಯಾದ ಸಾಧ್ಯಪ್ರತಿಜ್ಞೆಯಲ್ಲಿ 'ಸರಿಯಾದ ನಿಯಮ' ಎಂಬ ಪದ ನಮ್ಮ ನಡವಳಿಕೆಗೆ ಸಂಬಂಧಪಟ್ಟದ್ದು. ಸರಿಯಾದದ್ದು ಎಂಬುದಕ್ಕೆ ವಿಧಾಯಕವಾದದ್ದು ಎಂದು ಅರ್ಥ. ಪಕ್ಷಪ್ರತಿಜ್ಞೆಯಲ್ಲಿ, 'ಸರಿಯಾದ ನಿಯಮ' ಎಂಬ ಪದ ಬೇರೆ ಅರ್ಥದಲ್ಲಿ ಉಪಯೋಗವಾಗಿದೆ. ಅಲ್ಲಿ 'ಸರಿಯಾದ' ಎಂದರೆ ಯಥಾರ್ಥವಾದ ನಿಯಮ ಎಂದು ಅರ್ಥ. ಮೊದಲನೆಯ ಆಧಾರವಾಕ್ಯದ ನಿಯಮ ಧರ್ಮಶಾಸ್ತ್ರದ ನಿಯಮ, ಎರಡನೆಯ ಆಧಾರವಾಕ್ಯದ ನಿಯಮ ಭೌತಶಾಸ್ತ್ರದ ನಿಯಮ.

೨. ಎರಡನೆಯ ನಿಬಂಧನೆ ಮೊದಲನೆಯದನ್ನು ನೇರವಾಗಿ ಅನುಸರಿಸುತ್ತದೆ. ಸಮಧ್ಯಮ ಅನುಮಾನದಲ್ಲಿ ಮೂರೇ ಪದಗಳಿರಬೇಕಾಗಿರುವುದರಿಂದ, ಆ ಪದಗಳನ್ನು ಒಳಗೊಂಡ ಪ್ರತಿಜ್ಞೆಗಳೂ ಮೂರೇ ಆಗಿರಬೇಕು. ಸಮಧ್ಯಮ ಅನುಮಾನದಲ್ಲಿ ನಿರ್ಣಯ ಪ್ರತಿಜ್ಞೆ ಅಂದರೆ ಅನುಮಿತಿ ಒಂದು. ಇದು ಎರಡು ಪದ (Terms) ಗಳುಳ್ಳದ್ದಾಗಿರುತ್ತದೆ; ಇವು ಪಕ್ಷಪದ ಮತ್ತು ಸಾಧ್ಯಪದ. ಈ ಎರಡು ಪದಗಳುಳ್ಳ ಅನುಮಿತಿ ಸಾಧ್ಯವಾಗಬೇಕಾದರೆ, ಒಂದೊಂದು ಪದದ ವಿಚಾರವಾಗಿಯೂ ಒಂದೊಂದು ಪ್ರತಿಜ್ಞೆ ಇರಬೇಕು. ಪಕ್ಷಪದ (Minor Term) ಉಳ್ಳ ಆಧಾರಪ್ರತಿಜ್ಞೆ ಪಕ್ಷಪ್ರತಿಜ್ಞೆ (Minor Premise). ಸಾಧ್ಯಪದ (Major Term) ಉಳ್ಳ ಆಧಾರಪ್ರತಿಜ್ಞೆ ಸಾಧ್ಯಪ್ರತಿಜ್ಞೆ (Major Premise). ಈ ಎರಡು ಪ್ರತಿಜ್ಞೆಗಳು ಮೂರನೆಯದಾದ ನಿರ್ಣಯಪ್ರತಿಜ್ಞೆಗೆ ಆಧಾರರೂಪವಾದ ಪ್ರತಿಜ್ಞೆಗಳು. ಈ ಮೂರು ಪ್ರತಿಜ್ಞೆಗಳೂ ಅತ್ಯಾವಶ್ಯಕ. ಇವುಗಳಲ್ಲಿ ಯಾವುದು ಇಲ್ಲದಿದ್ದರೂ ಅನುಮಾನ ಸಿದ್ಧಿಸುವುದಿಲ್ಲ. ನಿರ್ಣಯವನ್ನು ಸಮರ್ಥಿಸುವುದೇ ಸಮಧ್ಯಮ ಅನುಮಾನದ ಉದ್ದೇಶವಾಗಿರುವುದರಿಂದ, ನಿರ್ಣಯ ಪ್ರತಿಜ್ಞೆ ಇದ್ದೇ ಇರಬೇಕು. ಆ ನಿರ್ಣಯವನ್ನು ಸಮರ್ಥಿಸಬೇಕಾದರೆ ಅದರ ವಿಶೇಷ್ಯಪದ (Subject) ವನ್ನು ಒಳಗೊಂಡ ಆಧಾರ ಪ್ರತಿಜ್ಞೆ ಅಂದರೆ ಪಕ್ಷಪ್ರತಿಜ್ಞೆಯೂ, ಅದರ ವಿಶೇಷಣಪದ (Predicate) ವನ್ನೊಳಗೊಂಡ ಆಧಾರಪ್ರತಿಜ್ಞೆ ಅಂದರೆ ಸಾಧ್ಯಪ್ರತಿಜ್ಞೆ (Major Premise) ಯೂ ಇರಬೇಕು. ಇವುಗಳಲ್ಲಿ ಯಾವುದು ಇಲ್ಲದಿದ್ದರೂ ನಿರ್ಣಯಕ್ಕೆ ಅವಕಾಶವಿಲ್ಲ.

೩. ಮಧ್ಯಮಪದ (ಲಿಂಗ, ಹೇತು, ಸಾಧನ) ಒಂದುಸಲವಾದರೂ ಪೂರ್ಣ ನಿರ್ದೇಶನವ್ಯಾಪ್ತಿ ಪಡೆದಿರುವಂತೆ ಆಧಾರಪ್ರತಿಜ್ಞೆಗಳಲ್ಲಿ ಉಪಯೋಗ ವಾಗಿರಬೇಕು ಎಂಬ ನಿಬಂಧನೆ ಅತ್ಯಂತ ಮುಖ್ಯವಾದದ್ದು. ಮಧ್ಯಮಪದ ಸಿಲೊಜಿಸಂನ ಮೂಲಾಧಾರ. ಆದ್ದರಿಂದ ಅದು ನಿರ್ದೇಶಿಸುವ ವಿಷಯ ವೆಲ್ಲಕ್ಕೂ ಸಂಪೂರ್ಣವಾಗಿ ಅನ್ವಯವಾದಂತೆ ಉಪಯೋಗವಾಗಬೇಕು. ಹಾಗೆ ಉಪಯೋಗವಾಗದಿದ್ದರೆ ಪಕ್ಷಪದ ಮಧ್ಯಮಪದದ ಒಂದು ಭಾಗಕ್ಕೂ, ಸಾಧ್ಯಪದ ಮಧ್ಯಮಪದದ ಬೇರೊಂದು ಭಾಗಕ್ಕೂ ಅನ್ವಯ ವಾಗಿ, ಪಕ್ಷಪದಕ್ಕೂ ಸಾಧ್ಯಪದಕ್ಕೂ ಸಮಾನತಳ (Common Ground) ಇಲ್ಲದೆ ಒಂದನ್ನು ಇನ್ನೊಂದಕ್ಕೆ ಹೋಲಿಸಲು ಅಸಾಧ್ಯವಾಗುತ್ತದೆ. ಈ ಕೆಳಗೆ ಕೊಟ್ಟಿರುವ ಉದಾಹರಣೆಯಲ್ಲಿ ಪಕ್ಷಪದಕ್ಕೂ ಸಾಧ್ಯಪದಕ್ಕೂ ಸಮಾನತಳವಿರುವುದಿಲ್ಲ.

ಕೆಲವು ಮಾನವರು ಬುದ್ಧಿಹೀನರು
ಮಾದ ಮಾನವ
∴ ಮಾದ ಬುದ್ಧಿಹೀನ

ಇಲ್ಲಿ ಬುದ್ಧಿಹೀನ ಎಂಬ ಪದ ಅಸ್ತ್ಯರ್ಥಕಪ್ರತಿಜ್ಞೆಯ ವಿಶೇಷಣಪದವಾದ್ದರಿಂದ ಅದರ ನಿರ್ದೇಶನವ್ಯಾಪ್ತಿ ಸಾಧ್ಯಪ್ರತಿಜ್ಞೆಯಲ್ಲೂ ಪಕ್ಷಪ್ರತಿಜ್ಞೆಯಲ್ಲೂ ಅಪೂರ್ಣವಾಗಿರುತ್ತದೆ. ಆದ್ದರಿಂದ, ಪಕ್ಷಪದ ಮಧ್ಯಮಪದದ ಒಂದು ಭಾಗದಲ್ಲಿ ಸೇರಿರುತ್ತದೆ, ಸಾಧ್ಯಪದ ಮಧ್ಯಮಪದದ ಬೇರೊಂದು ಭಾಗದಲ್ಲಿ ಸೇರುತ್ತದೆ. ಅವೆರಡಕ್ಕೂ ಸಮಾನವಾದ ತಳವಿಲ್ಲವಾದ್ದರಿಂದ ಅವೆರಡನ್ನೂ ಸೇರಿಸಲು ಸಾಧ್ಯವಿಲ್ಲ. ಸಾಧ್ಯದಿಂದ ಪಕ್ಷಕ್ಕೆ ಹಾಯಲು ಅವೆರಡನ್ನೂ ಸೇರಿಸುವ ಸೇತುವೆ ಇಲ್ಲದಂತಾಗುತ್ತದೆ. ಇವೆರಡನ್ನೂ ಸೇರಿಸುವ ಸೇತುವೆ ಇಲ್ಲದಾಗ ಒಂದರಿಂದ ಇನ್ನೊಂದಕ್ಕೆ ಹಾಯಲು ಪ್ರಯತ್ನಿಸಿದರೆ ಪತನ ಖಂಡಿತ. ಇಂಥ ಅನುಮಾನ ದೋಷಯುತವಾದದ್ದು, ಆಭಾಸಕರವಾದದ್ದು. ಈ ದೋಷವನ್ನು ಹೇತುವಿನ ಅವ್ಯಾಪ್ತಿದೋಷ ಅಥವಾ ಹೇತ್ವಾಭಾಸ (Fallacy of undistributed Middle) ಎಂದು ಕರೆಯುವುದು ವಾಡಿಕೆ. ಈ ದೋಷವನ್ನು ಪಾಶ್ಚಾತ್ಯ ತಾರ್ಕಿಕರು ಚಿತ್ರರೂಪದಲ್ಲಿ ಹೀಗೆ ತೋರಿಸುವುದುಂಟು:



೪. ಆಧಾರಪ್ರತಿಜ್ಞೆಗಳಲ್ಲಿ ಪೂರ್ಣ ನಿರ್ದೇಶನವ್ಯಾಪ್ತಿ ಪಡೆಯದ ಪದ, ನಿರ್ಣಯದಲ್ಲಿ ಪೂರ್ಣ ನಿರ್ದೇಶನವ್ಯಾಪ್ತಿ ಪಡೆದಂತೆ ಉಪಯೋಗವಾಗ ಕೂಡದು. ಏಕೆಂದರೆ ಸಂಕುಚಿತವಾದ ನಿರ್ದೇಶನ ಪಡೆದಿರುವುದರಿಂದ ಅದಕ್ಕಿಂತ ಹೆಚ್ಚಾದ ಪೂರ್ಣ ನಿರ್ದೇಶನವನ್ನು ಪಡೆಯಲು ಸಾಧ್ಯವಿಲ್ಲ. ಹಾಗೆ ಅಸಂಪೂರ್ಣವಾದುದರಿಂದ ಪೂರ್ಣವಾದುದನ್ನು ಪಡೆಯಲು ಪ್ರಯತ್ನಿಸು ವುದು ದೋಷಯುತವಾದದ್ದು. ಈ ದೋಷ ಎರಡುಬಗೆಯಾಗಿರಬಹುದು. ಸಾಧ್ಯಪ್ರತಿಜ್ಞೆಯಲ್ಲಿ ಸಾಧ್ಯಪದದ ನಿರ್ದೇಶನವ್ಯಾಪ್ತಿ ಅಪೂರ್ಣವಾಗಿದ್ದರೂ ನಿರ್ಣಯದಲ್ಲಿ ಅದರ ನಿರ್ದೇಶನವ್ಯಾಪ್ತಿ ಪೂರ್ಣವಾಗಿರುವಂತೆ ಎಣಿಸುವುದು ಒಂದು. ಪಕ್ಷಪ್ರತಿಜ್ಞೆಯಲ್ಲಿ ಪಕ್ಷಪದದ ನಿರ್ದೇಶನವ್ಯಾಪ್ತಿ ಅಪೂರ್ಣವಾಗಿದ್ದು ನಿರ್ಣಯದಲ್ಲಿ ಅದರ ವ್ಯಾಪ್ತಿ ಪೂರ್ಣವಾಗಿರುವಂತೆ ಎಣಿಸುವುದು ಎರಡ ನೆಯದು. ಈ ದೋಷಕ್ಕೆ ಪಾಶ್ಚಾತ್ಯ ತರ್ಕಶಾಸ್ತ್ರದಲ್ಲಿ ಇಲ್ಲಿಸಿಟ್ ಪ್ರೋಸೆಸ್ (Illicit Process) ಎಂದು ಹೆಸರು ಕೊಟ್ಟಿದೆ. ಇದು ಸಾಧ್ಯದಲ್ಲಿ ಕಂಡು ಬಂದಾಗ ಅದು ಸಾಧ್ಯಪದದ ದೋಷ, ಇಲ್ಲಿಸಿಟ್ ಮೇಜರ್ (Illicit Major) ಆಗುತ್ತದೆ. ಪಕ್ಷದಲ್ಲಿ ಕಂಡುಬಂದಾಗ ಪಕ್ಷಪದದ ದೋಷ, ಇಲ್ಲಿಸಿಟ್ ಮೈನರ್ (Illicit Minor) ಆಗುತ್ತದೆ. ಈ ಒಂದೊಂದು ದೋಷಕ್ಕೂ ಒಂದು ಉದಾಹರಣೆಯನ್ನು ಕೊಟ್ಟು ವಿಷಯವನ್ನೂ ವಿಶದಪಡಿಸಬಹುದು.

ಕ್ರೂರಿಗಳು ಹೇಡಿಗಳು
ಉಪಾಧ್ಯಾಯರು ಕ್ರೂರಿಗಳಲ್ಲ
∴ ಉಪಾಧ್ಯಾಯರು ಹೇಡಿಗಳಲ್ಲ

ಮೇಲಿನ ಉದಾಹರಣೆಯಲ್ಲಿ ಸಾಧ್ಯಪ್ರತಿಜ್ಞೆ ಅಸ್ತ್ಯರ್ಥಕ ಸಾಮಾನ್ಯ ಪ್ರತಿಜ್ಞೆಯಾದುದರಿಂದ ಹೇಡಿಗಳು ಎಂಬ ವಿಶೇಷಣಪದದ ನಿರ್ದೇಶನವ್ಯಾಪ್ತಿ ಅಪೂರ್ಣವಾಗಿರುತ್ತದೆ. ಆದರೆ ನೇತ್ಯರ್ಥಕ ಪ್ರತಿಜ್ಞೆಯಾದ ನಿರ್ಣಯದಲ್ಲಿ ಅದರ ನಿರ್ದೇಶನವ್ಯಾಪ್ತಿ ಪೂರ್ಣವಾಗಿರುತ್ತದೆ. ಆದ್ದರಿಂದ ಈ ವಾದ ಇಲ್ಲಿಸಿಟ್ ಮೇಜರ್ ದೋಷಕ್ಕೆ ಈಡಾಗಿರುತ್ತದೆ.

ಇಲ್ಲಿಸಿಟ್ ಮೈನರ್ ದೋಷವನ್ನು ಗುರುತಿಸುವುದು ಇನ್ನೂ ಸುಲಭ.

ಸದ್ಬ್ರಾಹ್ಮಣರೆಲ್ಲರೂ ಸಂಧ್ಯಾವಂದನೆ ಮಾಡುತ್ತಾರೆ
ಸದ್ಬ್ರಾಹ್ಮಣರೆಲ್ಲರೂ ದಯೆಯುಳ್ಳವರಾಗಿರುತ್ತಾರೆ
∴ ದಯೆಯುಳ್ಳವರೆಲ್ಲರೂ ಸಂಧ್ಯಾವಂದನೆ ಮಾಡುತ್ತಾರೆ

ಪಕ್ಷವಾಕ್ಯದಲ್ಲಿ "ದಯೆಯುಳ್ಳವರಾಗಿರುತ್ತಾರೆ" ಎಂಬ ಪಕ್ಷಪದದ ನಿರ್ದೇಶನವ್ಯಾಪನೆ ಸಂಕುಚಿತವಾಗಿದೆ, ಅಪೂರ್ಣವಾಗಿದೆ, ಆದರೆ ನಿರ್ಣಯದಲ್ಲಿ ಅದರ ವ್ಯಾಪನೆ ವಿಶಾಲವಾಗಿದೆ, ಪೂರ್ಣವಾಗಿದೆ. ಆದ್ದರಿಂದ ವಾದ ದೋಷಯುತವಾಗಿದೆ.

೫. ಎರಡು ನೇತ್ಯರ್ಥಕ ವಾಕ್ಯಗಳಿಂದ ಯಾವ ನಿರ್ಣಯವೂ ಸಾಧ್ಯವಿಲ್ಲ ಎಂಬುದು ಸ್ಪಷ್ಟ. ಎರಡು ಆಧಾರವಾಕ್ಯಗಳೂ ನೇತ್ಯರ್ಥಕವಾಗಿದ್ದಾಗ, ಪಕ್ಷಪದ (S) ಮತ್ತು ಸಾಧ್ಯಪದ (P) ಎರಡೂ ಮಧ್ಯಮಪದದಿಂದ ಹೊರತಾಗಿರುತ್ತವೆ. ಆದ್ದರಿಂದ ಪಕ್ಷಕ್ಕೂ ಸಾಧ್ಯಕ್ಕೂ ಸಂಬಂಧವೇರ್ಪಡದೆ ಯಾವ ನಿರ್ಣಯಕ್ಕೂ ಅವಕಾಶವಿಲ್ಲ. P ಯಾವುದೂ M ಆಗಿರುವುದಿಲ್ಲ, S ಯಾವುದೂ M ಆಗಿರುವುದಿಲ್ಲ ಎಂಬ ಎರಡು ನೇತ್ಯರ್ಥಕ ಪ್ರತಿಜ್ಞೆಗಳಿಂದ ಯಾವ ನಿರ್ಣಯವೂ ಸಾಧ್ಯವಿಲ್ಲ ಎಂಬುದನ್ನು ಚಿತ್ರರೂಪದಲ್ಲಿ ತೋರಿಸಿದಾಗ ತುಂಬ ಸ್ಪಷ್ಟವಾಗುತ್ತದೆ.



ಮಧ್ಯವರ್ತಿ ಪದವನ್ನು ಸೂಚಿಸುವ ವರ್ತುಳಕ್ಕೂ ಸಾಧ್ಯ ಮತ್ತು ಪಕ್ಷ ಪದಗಳನ್ನು ಸೂಚಿಸುವ ವರ್ತುಳಗಳಿಗೂ ಸಂಬಂಧವೇ ಇಲ್ಲ. ಕೆಲವು ವೇಳೆ ನೇತ್ಯರ್ಥಕ ಆಧಾರವಾಕ್ಯಗಳು ಹೊರದೃಷ್ಟಿಗೆ ನೇತ್ಯರ್ಥಕವಾಗಿ ತೋರಿದರೂ ಅವುಗಳಿಂದ ಸರಿಯಾದ ನಿರ್ಣಯ ಸಾಧ್ಯವಾಗಬಹುದು. ಅವುಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ ಅವುಗಳಲ್ಲಿ ಒಂದು ನಿಜವಾಗಿ ಅಸ್ತ್ಯರ್ಥಕವಾಗಿರುತ್ತದೆ. ಉದಾಹರಣೆಗಾಗಿ ಈ ತರ್ಕವನ್ನು ತೆಗೆದುಕೊಳ್ಳೋಣ.

ಪೂರ್ಣವಾಗಿ ಪ್ರಾಮಾಣಿಕನಲ್ಲದವನು ಸಂಬಲರ್ಹನಲ್ಲದ ಮನುಷ್ಯನಾಗಿರುತ್ತಾನೆ.

ಈ ಮನುಷ್ಯ ಪೂರ್ಣವಾಗಿ ಪ್ರಾಮಾಣಿಕನಲ್ಲದ ಮನುಷ್ಯನಾಗಿರುತ್ತಾನೆ.

∴ ಈ ಮನುಷ್ಯನನ್ನು ನಂಬಕೂಡದು.

ಈ ತರ್ಕದಲ್ಲಿ ಎರಡು ಆಧಾರಪ್ರತಿಜ್ಞೆಗಳೂ ನೇತ್ಯರ್ಥಕವಾಗಿ ಕಾಣುತ್ತವೆಯಾದರೂ ಪಕ್ಷಪ್ರತಿಜ್ಞೆ ನಿಜವಾಗಿಯೂ ಅಸ್ತ್ಯರ್ಥ ಪಡೆದಿದೆ. ಇದರಲ್ಲಿ 'ಅಲ್ಲದ' ಎಂಬ ನೇತ್ಯರ್ಥಕಪದವು ಕಾಪ್ಯುಲಾಕ್ಕೆ ಅಂದರೆ ಆಗಿದ್ದಾನೆ ಎಂಬ ಕ್ರಿಯಾಪದಕ್ಕೆ ಸೇರುವುದಿಲ್ಲ. ಅದು ಪಕ್ಷಪ್ರತಿಜ್ಞೆಯ ವಿಶೇಷಣಪದಕ್ಕೆ ಸೇರಿರುತ್ತದೆ. ಈ ತರ್ಕವನ್ನು ಸಂಜ್ಞಾರೂಪಕ್ಕೆ ಇಳಿಸಿದಾಗ ಇದು ಸ್ಪಷ್ಟವಾಗುತ್ತದೆ. ಇಲ್ಲಿ ಪೂರ್ಣವಾಗಿ ಪ್ರಾಮಾಣಿಕನಲ್ಲದವನು ಎಂಬ ಪದವನ್ನು $\bar{M}$ ಎಂಬ ಸಂಜ್ಞೆಯಿಂದಲೂ ನಂಬಲರ್ಹನಲ್ಲದ ಮನುಷ್ಯ ಎಂಬುದನ್ನು $\bar{P}$ ಎಂಬ ಸಂಜ್ಞೆಯಿಂದಲೂ ಸೂಚಿಸಬೇಕು. ಆಗ ಈ ತರ್ಕದ ಪ್ರತಿಜ್ಞೆಗಳು ಹೀಗಿರುತ್ತವೆ.

| | |
|---|---|
| All $\bar{M}$ is $\bar{P}$ | ಎಲ್ಲ $\bar{M}$ ಗಳೂ $\bar{P}$ ಆಗಿರುತ್ತವೆ |
| S is $\bar{M}$ | S ಎಂಬುದು $\bar{M}$ ಆಗಿರುತ್ತದೆ |
| ∴ S is $\bar{P}$ | ∴ S ಎಂಬುದು $\bar{P}$ ಆಗಿರುತ್ತದೆ |

೬. ಒಂದು ತರ್ಕದಲ್ಲಿ ಆಧಾರವಾಕ್ಯಗಳಲ್ಲೊಂದು ನೇತ್ಯರ್ಥಕವಾಗಿದ್ದು, ಇನ್ನೊಂದು ಅಸ್ತ್ಯರ್ಥಕವಾಗಿದ್ದಾಗ ಅವುಗಳಿಂದ ಹೊರಬೀಳುವ ನಿರ್ಣಯವು ನೇತ್ಯರ್ಥಕವಾಗಿರಬೇಕು; ನೇತ್ಯರ್ಥಕವಾದ ನಿರ್ಣಯವನ್ನು ಸಮರ್ಥಿಸಬೇಕಾದಾಗ ಆಧಾರಪ್ರತಿಜ್ಞೆಗಳಲ್ಲಿ ಒಂದು ನೇತ್ಯರ್ಥಕವಾಗಿದ್ದೇ ಇರಬೇಕು.

ಒಂದು ತರ್ಕದಲ್ಲಿ ಒಂದು ಆಧಾರವಾಕ್ಯ ಅಸ್ತ್ಯರ್ಥವಾಗಿದ್ದು ಇನ್ನೊಂದು ನೇತ್ಯರ್ಥಕವಾಗಿದ್ದರೆ, ಆ ಆಧಾರವಾಕ್ಯಗಳಲ್ಲಿ ಪಕ್ಷಪದ ಅಥವಾ ಸಾಧ್ಯಪದ ಹೋಲಿಕೆಗೆ ಆಧಾರವಾದ ಮಧ್ಯವರ್ತಿ ಪದದಿಂದ ಹೊರತಾಗಿರುವುದರಿಂದ, ಅವು ಒಂದಕ್ಕೊಂದು ಹೊಂದಿಕೊಂಡಿರಲು ಸಾಧ್ಯವಿಲ್ಲ. ಅವು ಒಂದಕ್ಕೊಂದು ಹೊರತಾಗಿಯೇ ಇರಬೇಕು; ಒಂದನ್ನೊಂದು ತಿರಸ್ಕರಿಸಲೇಬೇಕು. ಆದ್ದರಿಂದ ನಿರ್ಣಯವು ನೇತ್ಯರ್ಥಕವಾಗಿಯೇ ಇರಬೇಕು. ಒಂದು ತರ್ಕದಲ್ಲಿ ನಿರ್ಣಯವು ನೇತ್ಯರ್ಥಕವಾಗಿದ್ದರೆ, ಪಕ್ಷಪದ ಮತ್ತು ಸಾಧ್ಯಪದ—ಇವು ಒಂದನ್ನೊಂದು ಬಹಿಷ್ಕರಿಸುತ್ತವೆ. ಆದ್ದರಿಂದ ಅವುಗಳಲ್ಲೊಂದು ಮಧ್ಯವರ್ತಿ ಪದವನ್ನು ಬಹಿಷ್ಕರಿಸಲೇಬೇಕು. ಹೀಗೆ ಅವುಗಳಲ್ಲೊಂದು ಮಧ್ಯವರ್ತಿ ಪದವನ್ನು ಬಹಿಷ್ಕರಿಸಲೇಬೇಕಾದುದರಿಂದ ಅವುಗಳಲ್ಲೊಂದು ನೇತ್ಯರ್ಥಕವಾಗಿರಬೇಕು.

೭-೮. ಏಳು ಮತ್ತು ಎಂಟನೆಯ ನಿಬಂಧನೆಗಳು ಉಪನಿಬಂಧನೆಗಳು. ಇವು ಮೂರು ಮತ್ತು ನಾಲ್ಕನೆಯ ನಿಬಂಧನೆಯಲ್ಲಿ ವಿಧಿಸಿರುವ ನಿರ್ದೇಶನ ವ್ಯಾಪ್ತಿಸೂತ್ರಕ್ಕೆ ಅನುಸಾರವಾಗಿ ಏರ್ಪಟ್ಟವು. ಎರಡು ಅಸಾಮಾನ್ಯ ಆಧಾರಪ್ರತಿಜ್ಞೆಗಳಿಂದ (Particular Premises) ಯಾವ ನಿರ್ಣಯವೂ ಸಾಧ್ಯವಲ್ಲ. ಏಕೆಂದರೆ ಎರಡು ಆಧಾರವಾಕ್ಯಗಳೂ ಅಸಮಾನ್ಯ ಪ್ರತಿಜ್ಞೆಗಳಾದರೆ ಅವು ನಿರ್ದೇಶನವ್ಯಾಪ್ತಿ ನಿಯಮವನ್ನು ಉಲ್ಲಂಘಿಸುತ್ತವೆ. ಅಸಮಾನ್ಯ ಆಧಾರವಾಕ್ಯಗಳೆರಡೂ ಅಸ್ತ್ಯರ್ಥಕವಾಗಿರಬಹುದು; ಅಥವಾ ಅವುಗಳಲ್ಲೊಂದು ಮಾತ್ರ ನೇತ್ಯರ್ಥಕವಾಗಿರಬಹುದು. ಆರನೆಯ ನಿಬಂಧನೆಯ ಪ್ರಕಾರ ಎರಡೂ ನೇತ್ಯರ್ಥಕವಾಗಿರಕೂಡದು. ಎರಡು ಅಸ್ತ್ಯರ್ಥಕ ಅಸಮಾನ್ಯ ಪ್ರತಿಜ್ಞೆಗಳಲ್ಲಿ ಯಾವ ಪದದ ನಿರ್ದೇಶನವ್ಯಾಪ್ತಿಯೂ ಪೂರ್ಣವಾಗಿರುವುದಿಲ್ಲ. ಮಧ್ಯವರ್ತಿ ಪದವು ಆಧಾರವಾಕ್ಯಗಳಲ್ಲಿ ಒಂದು ಸಾರಿಯೂ ಕೂಡ ಪೂರ್ಣ ನಿರ್ದೇಶನವ್ಯಾಪ್ತಿಯನ್ನು ಪಡೆಯದೆ ಇರುವುದರಿಂದ ಮೂರನೆಯ ನಿಬಂಧನೆಯ ಪ್ರಕಾರ ಯಾವ ಅನುಮಿತಿಯೂ ಸಾಧ್ಯವಿಲ್ಲ. ಒಂದು ವೇಳೆ ಆಧಾರವಾಕ್ಯಗಳಲ್ಲಿ ಒಂದು ನೇತ್ಯರ್ಥಕವಾಗಿದ್ದು ಆ ನೇತ್ಯರ್ಥಕ ಪ್ರತಿಜ್ಞೆಯಲ್ಲಿ ಮಧ್ಯಮಪದ ಪೂರ್ಣವ್ಯಾಪ್ತಿ ಪಡೆದಿದ್ದರೂ, ಅನುಮಿತಿ ಸಾಧ್ಯವಿಲ್ಲ. ಏಕೆಂದರೆ ಒಂದು ಆಧಾರವಾಕ್ಯ ನೇತ್ಯರ್ಥಕವಾಗಿದ್ದರೆ ನಿರ್ಣಯವೂ ನೇತ್ಯರ್ಥಕವಾಗಿರಬೇಕು. ಆ ನೇತ್ಯರ್ಥಕ ನಿರ್ಣಯದಲ್ಲಿ ಸಾಧ್ಯಪದದ ನಿರ್ದೇಶನವಾಪ್ತಿ ಪೂರ್ಣವಾಗಿರುತ್ತದೆ. ಆದರೆ ಅದು ಆಧಾರ ಪ್ರತಿಜ್ಞೆಗಳಲ್ಲಿ ಅಪೂರ್ಣವಾಗಿರುವುದರಿಂದ ಆ ತರ್ಕ ನಾಲ್ಕನೆಯ ನಿಬಂಧನೆಯನ್ನು ಉಲ್ಲಂಘಿ

ಸುತ್ತದೆ; ಸಾಧ್ಯಪದದ ದೋಷ (ಇಲ್ಲಿಸಿಟ್ ಮೇಜರ್) ಪ್ರಾಪ್ತ ವಾಗುತ್ತದೆ.

ಒಂದು ಆಧಾರವಾಕ್ಯ ಅಸಾಮಾನ್ಯ ಪ್ರತಿಜ್ಞೆಯಾಗಿದ್ದರೆ, ನಿರ್ಣಯವೂ ಅಸಮಾನ್ಯ ಪ್ರತಿಜ್ಞೆಯಾಗಿಯೇ ಇರಬೇಕು. ಆಧಾರವಾಕ್ಯಗಳಲ್ಲಿ ಒಂದು ಅಸಮಾನ್ಯವಾದದ್ದಾದರೆ, AI, IA, EI, AO, OA—ಈ ಆರು ರೂಪಗಳು ಮಾತ್ರ ಸಾಧ್ಯ . . . AI, IA ಗಳಲ್ಲಿ ಒಂದು ಪದ ಮಾತ್ರ ಪೂರ್ಣ ನಿರ್ದೇಶನ ವ್ಯಾಪ್ತಿಯನ್ನು ಪಡೆಯಲು ಸಾಧ್ಯ. ಅದು ಮಧ್ಯವರ್ತಿ ಪದವಾದರೆ ಪಕ್ಷಪದ ಅಪೂರ್ಣವ್ಯಾಪ್ತಿಯುಳ್ಳದ್ದಾಗಿರುತ್ತದೆ. ಆದ್ದರಿಂದ ಅದು ನಿರ್ಣಯದಲ್ಲಿ ಅಪೂರ್ಣವಾಗಿರಬೇಕು. ಅಂದರೆ ನಿರ್ಣಯಪ್ರತಿಜ್ಞೆ ಅಸಮಾನ್ಯಪ್ರತಿಜ್ಞೆ ಯಾಗಿರಬೇಕು. ಹಾಗಿಲ್ಲದೆ ಆಧಾರವಾಕ್ಯಗಳಲ್ಲಿ ಪಕ್ಷಪದ ಪೂರ್ಣವ್ಯಾಪ್ತಿ ಪಡೆದುದಾದರೆ ಮಧ್ಯವರ್ತಿ ಪದದ ವ್ಯಾಪ್ತಿ ಅಪೂರ್ಣವಾಗಿರುತ್ತದೆ. ಹಾಗಾದಾಗ ಆ ವಾದ ಮೂರನೆಯ ನಿಬಂಧನೆಯನ್ನು ಉಲ್ಲಂಘಿಸಿದಂತಾಗು ತ್ತದೆ. ಆಧಾರವಾಕ್ಯಗಳು EI ಆದರೆ ಆಧಾರವಾಕ್ಯಗಳಲ್ಲಿ ಎರಡು ಪದಗಳು ಮಾತ್ರ ಪೂರ್ಣವ್ಯಾಪ್ತಿ ಪಡೆಯಲು ಸಾಧ್ಯ. ಅವುಗಳಲ್ಲಿ ಒಂದು ಮಧ್ಯವರ್ತಿ ಪದವಾಗಿರಬೇಕು. ಇನ್ನೊಂದು ಸಾಧ್ಯಪದವಾಗಿರಬೇಕು. ಏಕೆಂದರೆ ಆಧಾರ ವಾಕ್ಯಗಳಲ್ಲಿ ಒಂದು ನೇತ್ಯರ್ಥಕವಾದುದರಿಂದ ನಿರ್ಣಯವೂ ನೇತ್ಯರ್ಥಕ ವಾಗಿರಬೇಕಾಗುತ್ತದೆ. ಅದರ ವಿಶೇಷಣ ಪದವಾದ ಸಾಧ್ಯಪದ ಪೂರ್ಣ ವ್ಯಾಪ್ತಿ ಪಡೆದಿರುತ್ತದೆ. ಅದು ಆಧಾರವಾಕ್ಯದಲ್ಲೂ ಪೂರ್ಣವ್ಯಾಪನೆ ಉಳ್ಳದ್ದಾಗಿಯೇ ಇರಬೇಕು. ಆದ್ದರಿಂದ ಪಕ್ಷಪದ ಪೂರ್ಣವ್ಯಾಪ್ತಿ ಪಡೆಯಲು ಅವಕಾಶವೇ ಇಲ್ಲದೆ, ನಿರ್ಣಯದಲ್ಲೂ ಅದು ಅಪೂರ್ಣವಾಗಿಯೇ ಇರಬೇಕಾ ಗುತ್ತದೆ. ಆಧಾರವಾಕ್ಯಗಳು OA ಅಥವಾ AO ಆದಾಗಲೂ ಎರಡೇ ಪದಗಳು ಪೂರ್ಣವ್ಯಾಪನೆ ಪಡೆದಿರುತ್ತವೆ. ಅವುಗಳಲ್ಲಿ ಒಂದು ಮಧ್ಯವರ್ತಿಪದವೂ ಇನ್ನೊಂದು ಸಾಧ್ಯಪದವೂ ಆಗಬೇಕು; ಇಲ್ಲೂ ಕೂಡ ಪಕ್ಷಪದ ಪೂರ್ಣ ವ್ಯಾಪನೆ ಪಡೆಯಲು ಅವಕಾಶವೇ ಇಲ್ಲ. ಆದ್ದರಿಂದ ನಿರ್ಣಯ ಅಸಮಾನ್ಯ ಪ್ರತಿಜ್ಞೆಯೇ ಆಗಿರಬೇಕು.

## (i) ಸಮಧ್ಯಮ ಅನುಮಾನದ ನಾಲ್ಕು ಆಕೃತಿಗಳು

### (Figures of the Syllogism)

ಲಿಂಗಾನುಮಾನ ಅಥವಾ ಸಮಧ್ಯಮ ಅನುಮಾನದಲ್ಲಿ ಲಿಂಗಪದದ ಅಥವಾ ಮಧ್ಯವರ್ತಿ ಪದದ ಪಾತ್ರ ಅತ್ಯಂತ ಮುಖ್ಯವಾದದ್ದು. ವಾದವು

ತಿರುಗುವುದು ಕೀಲಿನ ಹಾಗಿರುವ ಆ ಮಧ್ಯವರ್ತಿ ಪದದ ಆಧಾರದ ಮೇಲೆ. ಮಧ್ಯವರ್ತಿ ಪದ ಪಕ್ಷಪದ ಮತ್ತು ಸಾಧ್ಯಪದಗಳನ್ನು ಸೇರಿಸುವ ಕೊಂಡಿ. ಈ ಮಧ್ಯವರ್ತಿ ಪದ ಆಧಾರವಾಕ್ಯಗಳ ವಿಶೇಷ್ಯವಾಗಿರಬಹುದು ಅಥವಾ ವಿಶೇಷಣವಾಗಿರಬಹುದು. ಆಧಾರವಾಕ್ಯಗಳಲ್ಲಿ ಅದು ತೆಗೆದುಕೊಳ್ಳಬಹುದಾದ ಸ್ಥಾನ ಅನುಮಾನದ ಆಕೃತಿಯನ್ನು (Figure) ನಿರ್ಧರಿಸುತ್ತದೆ.

ಆಧಾರವಾಕ್ಯಗಳಲ್ಲಿ ಮಧ್ಯವರ್ತಿ ಪದ ನಾಲ್ಕು ಬೇರೆ ಬೇರೆ ಸ್ಥಾನಗಳನ್ನು ಪಡೆಯಬಹುದು. (೧) ಸಾಧ್ಯಪ್ರತಿಜ್ಞೆಯಲ್ಲಿ ವಿಶೇಷ್ಯಸ್ಥಾನವನ್ನೂ ಪಕ್ಷ ಪ್ರತಿಜ್ಞೆಯಲ್ಲಿ ವಿಶೇಷಣಸ್ಥಾನವನ್ನು ಪಡೆಯಬಹುದು. ಇದು ಸಿಲಜಿಸಂನ ಮೊದಲನೆಯ ಆಕೃತಿ. ಅಥವಾ (೨) ಅದು ಎರಡು ಆಧಾರವಾಕ್ಯಗಳಲ್ಲೂ ವಿಶೇಷಣ ಪದವಾಗಿ ಇರಬಹುದು. ಇದು ಸಿಲಜಿಸಂನ ಎರಡನೆಯ ಆಕೃತಿ. ಅಥವಾ (೩) ಅದು ಎರಡು ಆಧಾರವಾಕ್ಯಗಳಲ್ಲೂ ವಿಶೇಷ್ಯಪದವಾಗಿ ಇರಬಹುದು. ಇದು ಸಿಲಜಿಸಂನ ಮೂರನೆಯ ಆಕೃತಿ. ಕೊನೆಯದಾಗಿ, (೪) ಸಾಧ್ಯಪ್ರತಿಜ್ಞೆಯಲ್ಲಿ ಅದು ವಿಶೇಷಣಪದವಾಗಿಯೂ ಪಕ್ಷಪ್ರತಿಜ್ಞೆಯಲ್ಲಿ ವಿಶೇಷ್ಯಪದವಾಗಿಯೂ ಇರಬಹುದು. ಇದು ಸಿಲಜಿಸಂನ ನಾಲ್ಕನೆಯ ಆಕೃತಿ. ಈ ಆಕೃತಿಗಳನ್ನು ಈ ಕೆಳಗೆ ತೋರಿಸಿರುವಂತೆ ಸಂಜ್ಞಾರೂಪವಾಗಿ ತಿಳಿಸುವುದು ವಾಡಿಕೆ.

ಮೊದಲನೆಯ ಆಕೃತಿ

M—P

S—M

∴ S—P

ಎರಡನೆಯ ಆಕೃತಿ

P–M

S–M

∴ S P

ಮೂರನೆಯ ಆಕೃತಿ

M–P

M–S

∴ S–P

ನಾಲ್ಕನೆಯ ಆಕೃತಿ

P–M

M–S

∴ S–P

**(ii) ಸಮಧ್ಯಮ ಅನುಮಾನದ ಆಕೃತಿಗಳ ರೂಪಭೇದಗಳು (Moods)**

ಈ ಒಂದೊಂದು ಆಕೃತಿಯಲ್ಲೂ ಒಳಭೇದಗಳು ಸಾಧ್ಯ. ಒಂದು ಆಕೃತಿಯಲ್ಲಿ ಸಾಧ್ಯವಾಕ್ಯ, ಪಕ್ಷವಾಕ್ಯ, ಮತ್ತು ನಿರ್ಣಯ—ಈ ಮೂರೂ ಅಸ್ತ್ಯರ್ಥಕವಾಗಿರಬಹುದು ಅಥವಾ ಅವುಗಳಲ್ಲಿ ಎರಡು ನೇತ್ಯರ್ಥಕವಾಗಿರಬಹುದು. ಅವು ಮೂರೂ ಸಾಮಾನ್ಯ ಪ್ರತಿಜ್ಞೆಗಳಾಗಿರಬಹುದು ಅಥವಾ ಅವುಗಳಲ್ಲಿ ಎರಡು ಅಸಮಾನ್ಯವಾದ ಪ್ರತಿಜ್ಞೆಗಳಾಗಿರಬಹುದು. ಅಂದರೆ ಸಿಲಜಿಸಂನ ಒಂದೊಂದು ಅವಯವವೂ A. E. I. O ಎಂಬ ನಾಲ್ಕು ವಿಧವಾದ ಪ್ರತಿಜ್ಞೆಗಳಲ್ಲಿ ಯಾವುದಾದರೂ ಒಂದು ಆಗಬಹುದು. ಈ ನಾಲ್ಕು ಬಗೆಯ ಪ್ರತಿಜ್ಞೆಗಳನ್ನು ಆಧಾರಪ್ರತಿಜ್ಞೆಗಳಾಗಿ ಹದಿನಾರು ವಿಧದಲ್ಲಿ ಜೋಡಿಸಬಹುದು. ಹಾಗೆ ಜೋಡಿಸಿದ ಒಂದೊಂದು ರೂಪಕ್ಕೂ ಮೂಡ್ (Mood) ಎಂದು ಹೆಸರು.

ಆ ಹದಿನಾರು ರೂಪಗಳು ಇವು:

| | | | |
|---|---|---|---|
| AA | EA | IA | OA |
| AE | EE | IE | OE |
| AI | EI | II | OI |
| AO | EO | OO | OO |

ಆದರೆ ಈ ಎಲ್ಲ ರೂಪಗಳೂ ಸಾಧುವಾದ ನಿರ್ಣಯವನ್ನು ಕೊಡುವುದಿಲ್ಲ. ಆಧಾರವಾಕ್ಯಗಳೆರಡೂ ನೇತ್ಯರ್ಥಕ ಪ್ರತಿಜ್ಞೆಗಳಾಗಿ ಅಥವಾ ಅಸಾಮಾನ್ಯ ಪ್ರತಿಜ್ಞೆಗಳಾಗಿರುವುದು ತರ್ಕದ ನಿಯಮಗಳಿಗೆ ವ್ಯತಿರಿಕ್ತವಾದುದು. ಹೀಗೆ ನಿಯಮಗಳಿಗೆ ವ್ಯತಿರಿಕ್ತವಾದ EE, EO, OE, OO ಗಳನ್ನೂ I I, IO, OI, ಗಳನ್ನೂ ತೆಗೆದುಹಾಕಿದರೆ ಈ ಒಂಬತ್ತು ಮಾತ್ರ ಉಳಿಯುತ್ತವೆ.

| | | | |
|---|---|---|---|
| AA | EA | IA | OA |
| AE | – | IE | – |
| AI | EI | – | – |
| AO | – | – | – |

ಈ ಒಂಬತ್ತು ರೂಪಗಳೂ ಕೂಡ ಎಲ್ಲ ಆಕೃತಿಗಳಲ್ಲೂ ಸಾಧ್ಯವಿಲ್ಲ. ಮಧ್ಯಮಪದ, ಸಾಧ್ಯಪದ ಮತ್ತು ಪಕ್ಷಪದ—ಇವುಗಳ ಸ್ಥಾನ ಒಂದೊಂದು ಆಕೃತಿಯಲ್ಲೂ ಬೇರೆ ಬೇರೆಯಾಗಿರುವುದರಿಂದ ಆ ಸ್ಥಾನಭೇದಗಳು ಆಯಾ ಪದದ ನಿರ್ದೇಶನವ್ಯಾಪ್ತಿಯನ್ನು ನಿರ್ಧರಿಸುತ್ತವೆ. ಮೊದಲನೆಯ ಆಕೃತಿಯಲ್ಲಿ AA ಗಳು ಕ್ರಮವಾಗಿ ಸಾಧ್ಯ ಮತ್ತು ಪಕ್ಷಪ್ರತಿಜ್ಞೆಗಳಾಗಿದ್ದಾಗ, ಸಾಧ್ಯ ಪ್ರತಿಜ್ಞೆಯಲ್ಲಿ ಮಧ್ಯವರ್ತಿಪದವೂ ಪಕ್ಷಪ್ರತಿಜ್ಞೆಯಲ್ಲಿ ಪಕ್ಷಪದವೂ ಪೂರ್ಣ ನಿರ್ದೇಶನವ್ಯಾಪ್ತಿಯನ್ನು ಪಡೆದಿರುತ್ತವೆ. ಆದರೆ ಎರಡನೆಯ ಆಕೃತಿಯಲ್ಲಾದರೂ ಸಾಧ್ಯವಾಕ್ಯದಲ್ಲಾಗಲಿ ಪಕ್ಷವಾಕ್ಯದಲ್ಲಾಗಲಿ ಮಧ್ಯವರ್ತಿಪದ ಪೂರ್ಣ ನಿರ್ದೇಶನವ್ಯಾಪ್ತಿಯನ್ನು ಪಡೆದಿರುವುದಿಲ್ಲ. ಆದ್ದರಿಂದ AA ಪ್ರತಿಜ್ಞೆಗಳು ಎರಡನೆಯ ಆಕೃತಿಯಲ್ಲಿ ಸಾಧುವಾದ ನಿರ್ಣಯವನ್ನು ಕೊಡಲಾರವು. ಹಾಗೆಯೇ AI, IA, IE, OA ಗಳೂ ಎರಡನೆಯ ಆಕೃತಿಯಲ್ಲಿ ಸಾಧುವಾದ ನಿರ್ಣಯವನ್ನು ಕೊಡಲಾರವು. ಮಧ್ಯಮಪದ, ಸಾಧ್ಯಪದ, ಪಕ್ಷಪದ ಇವುಗಳ ಸ್ಥಾನಭೇದಗಳ ಸಲುವಾಗಿ ಮೇಲೆ ಹೇಳಿದ ಒಂಬತ್ತು ರೂಪಗಳಲ್ಲಿ ಕೆಲವು ಮಾತ್ರ ಒಂದೊಂದು ಆಕೃತಿಯಲ್ಲಿ ಸಾಧ್ಯವಾಗಬಹುದು. ಒಂದು, ಎರಡು, ಮೂರು ಮತ್ತು ನಾಲ್ಕನೆಯ ಆಕೃತಿಗಳಲ್ಲಿ ಸಾಧುವಾದ ತರ್ಕರೂಪಗಳು ಯಾವುವು ಎಂಬುದನ್ನು ನಿರ್ಧರಿಸಲು ಪ್ರತಿಯೊಂದು ಆಕೃತಿಗೂ ಸಂಬಂಧಿಸಿದಂತೆ ಕೆಲವು ಸೂತ್ರಗಳನ್ನು ವಿಧಾಯಕಮಾಡುತ್ತಾರೆ.

ಮೊದಲನೆಯ ಆಕೃತಿಯಲ್ಲಿ (೧) ಪಕ್ಷಪ್ರತಿಜ್ಞೆ ಅಸ್ತ್ಯರ್ಥಕವಾಗಿರಬೇಕು ಮತ್ತು (೨) ಸಾಧ್ಯಪ್ರತಿಜ್ಞೆ ಸಾಮಾನ್ಯ (Universal) ಪ್ರತಿಜ್ಞೆಯಾಗಿರಬೇಕು.

ಮೊದಲನೆಯ ಆಕೃತಿಯ ಸಂಜ್ಞಾರೂಪ ಹೀಗಿದೆ

M—P
S—M
∴ S. P

(೧) ಒಂದನೆಯ ಆಕೃತಿಯಲ್ಲಿ ಪಕ್ಷಪ್ರತಿಜ್ಞೆ ಅಸ್ತ್ಯರ್ಥಕವಾಗಿರಬೇಕು. ಹಾಗಿಲ್ಲದೆ ಅದು ನೇತ್ಯರ್ಥಕವಾಗಿದ್ದರೆ, ನಿರ್ಣಯವೂ ನೇತ್ಯರ್ಥಕವಾಗಿರಬೇಕು. ನಿರ್ಣಯವು ನೇತ್ಯರ್ಥಕವಾಗಿದ್ದರೆ ಅದರ ವಿಶೇಷಣಪದವಾದ ಸಾಧ್ಯಪದದ ನಿರ್ದೇಶನವ್ಯಾಪ್ತಿ ಪೂರ್ಣವಾಗಿರುತ್ತದೆ. ಸಾಧ್ಯಪ್ರತಿಜ್ಞೆಯಲ್ಲೂ ಅದರ ನಿರ್ದೇಶನವ್ಯಾಪ್ತಿ ಪೂರ್ಣವಾಗಿದ್ದ ಹೊರತು ಅದು ನಿರ್ಣಯ ವಾಕ್ಯದಲ್ಲಿ

ಪೂರ್ಣವ್ಯಾಪ್ತಿ ಪಡೆದಿರಕೂಡದು. ಅದು ಸಾಧ್ಯವಾಕ್ಯದಲ್ಲಿ ವಿಶೇಷಣಪದವಾಗಿರುವುದರಿಂದ ಆ ವಾಕ್ಯ ನೇತ್ಯರ್ಥಕವಾಗಿದ್ದ ವಿನಾ ಸಾಧ್ಯಪದ ಪೂರ್ಣವ್ಯಾಪ್ತಿ ಪಡೆಯಲಾರದು. ಆದರೆ ಪಕ್ಷಪ್ರತಿಜ್ಞೆ, ಸಾಧ್ಯಪ್ರತಿಜ್ಞೆ ಎರಡೂ ನೇತ್ಯರ್ಥಕವಾಗಿರಕೂಡದು. ಅದು ಐದನೆಯ ನಿಬಂಧನೆಗೆ ವ್ಯತಿರಿಕ್ತ. ಪಕ್ಷವಾಕ್ಯ ನೇತ್ಯರ್ಥಕವಾಗಿದ್ದರೆ ಅದು ಐದನೆಯ ನಿಯಮವನ್ನು ಮುರಿಯುವ ಪ್ರಸಂಗ ಒದಗುವುದರಿಂದ ಅದು ಅಸ್ತ್ಯರ್ಥಕವಾಗಿಯೇ ಇರಬೇಕು.

(೨) ಪಕ್ಷವಾಕ್ಯ ಅಸ್ತ್ಯರ್ಥಕವಾಗಿರಬೇಕಾಗಿರುವುದರಿಂದ, ಅದರಲ್ಲಿ ವಿಶೇಷಣಪದವಾದ ಮಧ್ಯವರ್ತಿಪದ—M ಪೂರ್ಣವ್ಯಾಪ್ತಿ ಪಡೆದಿರುವುದಿಲ್ಲ. ಆಧಾರವಾಕ್ಯಗಳಲ್ಲಿ ಅದು ಒಂದು ಸಲವಾದರೂ ಪೂರ್ಣವ್ಯಾಪ್ತಿಪಡೆದಿರಬೇಕು. ಆದ್ದರಿಂದ ಅದು ಸಾಧ್ಯವಾಕ್ಯದಲ್ಲಿ ಪೂರ್ಣವ್ಯಾಪನೆ ಪಡೆದಿರಬೇಕು. ಸಾಧ್ಯವಾಕ್ಯದಲ್ಲಿ ಅದು ವಿಶೇಷ್ಯಪದವಾದ್ದರಿಂದ ಅದು ಪೂರ್ಣವ್ಯಾಪ್ತಿ ಪಡೆಯಬೇಕಾದರೆ ಸಾಧ್ಯವಾಕ್ಯ ಸಾಮಾನ್ಯ ಪ್ರತಿಜ್ಞೆಯಾಗಿರಬೇಕು. ವಿಶೇಷ್ಯ ಪದ ಸಾಮಾನ್ಯ ಪ್ರತಿಜ್ಞೆಗಳಲ್ಲಿ ಮಾತ್ರ ಪೂರ್ಣವ್ಯಾಪ್ತಿ ಪಡೆಯಬಲ್ಲದು.

ಈ ಸೂತ್ರಗಳನ್ನು ಮೇಲೆ ಹೇಳಿದ ಒಂಬತ್ತು ರೂಪಗಳಿಗೆ ಅನ್ವಯಿಸಿದರೆ ಅವುಗಳಲ್ಲಿ AE, AO, IA, IA, OA ರೂಪಗಳು ಅಸಾಧುವಾಗುತ್ತವೆ. ಇವುಗಳನ್ನು ತೆಗೆದುಹಾಕಿದರೆ ಮೊದಲನೆ ಆಕೃತಿಯಲ್ಲಿ AAA, EAE, AII, EIO ರೂಪಗಳು ಮಾತ್ರ ಸಾಧುರೂಪಗಳಾಗಿ ಉಳಿಯುತ್ತವೆ.

ಎರಡನೆಯ ಆಕೃತಿಯಲ್ಲಿ (೧) ಒಂದು ಆಧಾರಪ್ರತಿಜ್ಞೆ ನೇತ್ಯರ್ಥಕವಾಗಿಯೇ ಇರಬೇಕು. ಆದ್ದರಿಂದ ನಿರ್ಣಯುವೂ ನೇತ್ಯರ್ಥವಾಗಿಯೇ ಇರಬೇಕು. (೨) ಸಾಧ್ಯಪ್ರತಿಜ್ಞೆ ಸಾಮಾನ್ಯಪ್ರತಿಜ್ಞೆಯಾಗಿರಬೇಕು.

ಎರಡನೆಯ ಆಕೃತಿಯ ಸಂಜ್ಞಾರೂಪ ಹೀಗಿದೆ.

P. M
S. M
———
S. P

(೧) ಈ ಆಕೃತಿಯನ್ನು ಗಮನವಿಟ್ಟು ನೋಡಿದರೆ ಎರಡು ಆಧಾರವಾಕ್ಯಗಳಲ್ಲೂ ಮಧ್ಯವರ್ತಿ ಪದ M ವಿಶೇಷಣವಾಗಿರುತ್ತದೆ. ಅದು ಒಂದರಲ್ಲಾದರೂ ಪೂರ್ಣವ್ಯಾಪ್ತಿ ಪಡೆದಿರಬೇಕಾದರೆ ಒಂದು ಆಧಾರವಾಕ್ಯವಾದರೂ ನೇತ್ಯರ್ಥಕವಾಗಿರಬೇಕು. ಏಕೆಂದರೆ ನೇತ್ಯರ್ಥಕ ವಾಕ್ಯಗಳಲ್ಲಿ ಮಾತ್ರ ವಿಶೇಷಣಪದ ಪೂರ್ಣವ್ಯಾಪ್ತಿ ಪಡೆಯಬಲ್ಲದು. ಆರನೆಯ ನಿಬಂಧನೆಯ ಪ್ರಕಾರ ಒಂದು

ಆಧಾರವಾಕ್ಯ ನೇತ್ಯರ್ಥಕವಾಗಿದ್ದರೆ ನಿರ್ಣಯವೂ ನೇತ್ಯರ್ಥಕವಾಗಿರಬೇಕು.

(೨) ಎರಡನೆಯ ಆಕೃತಿಯಲ್ಲಿ ನಿರ್ಣಯ ನೇತ್ಯರ್ಥಕವಾಗಿರಬೇಕಾದುದರಿಂದ, ಅದರ ವಿಶೇಷಣಪದವಾದ ಸಾಧ್ಯಪದ ಪೂರ್ಣವ್ಯಾಪ್ತಿ ಪಡೆದಿರುತ್ತದೆ. ಆದ್ದರಿಂದ ಅದು ಸಾಧ್ಯಪ್ರತಿಜ್ಞೆಯಲ್ಲೂ ಪೂರ್ಣವ್ಯಾಪ್ತಿ ಪಡೆದಿರಬೇಕು. ಸಾಧ್ಯಪ್ರತಿಜ್ಞೆಯಲ್ಲಿ ಅದು ವಿಶೇಷ್ಯಪದವಾಗಿದೆ. ವಿಶೇಷ್ಯಪದವು ಪೂರ್ಣವ್ಯಾಪ್ತಿ ಪಡೆದಿರಬೇಕಾದರೆ ಅದು ಸಾಮಾನ್ಯ ಪ್ರತಿಜ್ಞೆಯಾಗಿರಬೇಕು. ಈ ಸೂತ್ರಗಳನ್ನು ಮೇಲೆ ಹೇಳಿದ ಒಂಬತ್ತು ರೂಪಗಳಿಗೆ ಅನ್ವಯಿಸಿದಾಗ ಅವುಗಳಲ್ಲಿ AA, AI, IA, IE, OA ರೂಪಗಳು ಅಸಾಧುವಾಗುತ್ತವೆ. ಅವುಗಳನ್ನು ತೆಗೆದುಹಾಕಿದರೆ ಉಳಿದ ಸಾಧುವಾದ ರೂಪಗಳು ನಾಲ್ಕು EAE, AEE, EIO, AOO. ಈ ರೂಪಗಳನ್ನು ಗಮನವಿಟ್ಟು ನೋಡಿದಾಗ ಒಂದು ವಿಷಯ ಸ್ಪಷ್ಟವಾಗಿ ಕಾಣುತ್ತದೆ. ಎರಡನೆಯ ಆಕೃತಿಯಲ್ಲಿ ನೇತ್ಯರ್ಥಕ ನಿರ್ಣಯಗಳು ಮಾತ್ರ ಸಮರ್ಥಿಸಲು ಸಾಧ್ಯ.

ಮೂರನೆಯ ಆಕೃತಿಯಲ್ಲಿ ಪಕ್ಷಪ್ರತಿಜ್ಞೆ ಅಸ್ತ್ಯರ್ಥಕವಾಗಿರಬೇಕು ಮತ್ತು ನಿರ್ಣಯ ಅಥವಾ ಅನುಮಿತಿ ಅಸಾಮಾನ್ಯ ಪ್ರತಿಜ್ಞೆಯಾಗಿರಬೇಕು.

ಮೂರನೆಯ ಆಕೃತಿಯ ಸಂಜ್ಞಾನಿರೂಪಣೆ ಹೀಗಿದೆ.

M. P
M. S
———
∴ S. P

(೧) ಪಕ್ಷಪ್ರತಿಜ್ಞೆ ಅಸ್ತ್ಯರ್ಥಕವಾಗಿರದೆ ನೇತ್ಯರ್ಥಕವಾಗಿದ್ದರೆ, ನಿರ್ಣಯವು ನೇತ್ಯರ್ಥಕವಾಗಿರಬೇಕಾಗುವುದು; ನಿರ್ಣಯದ ವಿಶೇಷಣಪದವಾದ ಸಾಧ್ಯಪದ P ಪೂರ್ಣವ್ಯಾಪ್ತಿ ಪಡೆದಿರಬೇಕಾಗುತ್ತದೆ. ಆಗ ಅದು ಸಾಧ್ಯಪ್ರತಿಜ್ಞೆಯಲ್ಲೂ ಪೂರ್ಣವ್ಯಾಪ್ತಿ ಪಡೆಯಬೇಕಾಗುತ್ತದೆ. ಸಾಧ್ಯವಾಕ್ಯ ನೇತ್ಯರ್ಥಕವಾಗಿದ್ದರೆ ಮಾತ್ರ ವಿಶೇಷಣಪದವಾದ P ಪೂರ್ಣವ್ಯಾಪ್ತಿ ಪಡೆಯಬಲ್ಲದು. ಆದರೆ ಆಧಾರವಾಕ್ಯಗಳೆರಡೂ ನೇತ್ಯರ್ಥಕವಾಗಿರುವುದು ಅಸಾಧು. ಆದ್ದರಿಂದ ಪಕ್ಷಪ್ರತಿಜ್ಞೆ ಅಸ್ತ್ಯರ್ಥಕವಾಗಿಯೇ ಇರಬೇಕು.

(೨) ಮೂರನೆಯ ಆಕೃತಿಯಲ್ಲಿ ಪಕ್ಷವಾಕ್ಯ ಅಸ್ತ್ಯರ್ಥಕವಾಗಿರಬೇಕೆಂದು ಸ್ಥಿರಪಟ್ಟುದರಿಂದ ಪಕ್ಷವಾಕ್ಯದಲ್ಲಿ ವಿಶೇಷಣಪದವಾದ S ಪೂರ್ಣವ್ಯಾಪ್ತಿ ಪಡೆದಿರುವುದಿಲ್ಲ. ಆದ್ದರಿಂದ ನಿರ್ಣಯ ಪ್ರತಿಜ್ಞೆಯಲ್ಲಿ ಅದರ ವ್ಯಾಪ್ತಿ

ಅಪೂರ್ಣವಾಗಿರಬೇಕು. ಅಂದರೆ ಆ ಪ್ರತಿಜ್ಞೆ ಅಸಾಮಾನ್ಯ ಪ್ರತಿಜ್ಞೆಯಾಗಿರಬೇಕು.

ಈ ಸೂತ್ರಗಳನ್ನು ಮೇಲೆ ಹೇಳಿದ ಒಂಬತ್ತು ರೂಪಗಳಿಗೆ ಅನ್ವಯಿಸಿದಾಗ ಅವುಗಳಲ್ಲಿ AE, AO, IE, ಎಂಬ ಮೂರು ರೂಪಗಳು ಅಸಾಧುವಾಗುತ್ತವೆ. ಉಳಿದ ಸಾಧುವಾದ ರೂಪಗಳು AAI, IAI, AII, EAO. OAO. EIO. ಮೂರನೆಯ ಆಕೃತಿಯ ರೂಪಗಳನ್ನು ಪರಿಶೀಲಿಸಿದರೆ ಅವುಗಳಲ್ಲಿ ಅಸಾಮಾನ್ಯ ನಿರ್ಣಯಗಳು ಮಾತ್ರ ಸಾಧ್ಯ ಎಂಬುದು ಸ್ಪಷ್ಟವಾಗುತ್ತದೆ.

ನಾಲ್ಕನೆಯ ಆಕೃತಿಯಲ್ಲಿ (೧) ಆಧಾರಪ್ರತಿಜ್ಞೆಗಳಲ್ಲಿ ಯಾವುದಾದರೂ ಒಂದು ನೇತ್ಯರ್ಥಕವಾಗಿದ್ದರೆ, ಸಾಧ್ಯಪ್ರತಿಜ್ಞೆ ಸಾಮಾನ್ಯ ಪ್ರತಿಜ್ಞೆಯಾಗಿಯೇ ಇರಬೇಕು. (೨) ಸಾಧ್ಯಪ್ರತಿಜ್ಞೆ ಅಸ್ತ್ಯರ್ಥಕವಾಗಿದ್ದರೆ, ಪಕ್ಷಪ್ರತಿಜ್ಞೆ ಸಾಮಾನ್ಯ ಪ್ರತಿಜ್ಞೆಯಾಗಿರಬೇಕು. (೩) ಪಕ್ಷಪ್ರತಿಜ್ಞೆ ಅಸ್ತ್ಯರ್ಥಕವಾಗಿದ್ದರೆ, ನಿರ್ಣಯ ಅಸಾಮಾನ್ಯ ಪ್ರತಿಜ್ಞೆಯಾಗಿರಬೇಕು.

ನಾಲ್ಕನೆಯ ಆಕೃತಿಯ ಸಂಜ್ಞಾರೂಪ ಹೀಗಿರುತ್ತದೆ.

P—M
M—S
———
∴ S—P

(೧) ಆಧಾರವಾಕ್ಯಗಳಲ್ಲಿ ಯಾವುದಾದರೂ ನೇತ್ಯರ್ಥಕವಾಗಿದ್ದರೆ, ನಿರ್ಣಯವು ನೇತ್ಯರ್ಥಕವಾಗಿರಬೇಕು. ಆಗ ಅದರ ವಿಶೇಷಣಪದ ಪೂರ್ಣವ್ಯಾಪನೆಯುಳ್ಳದ್ದಾಗಿರುತ್ತದೆ. ನಿರ್ಣಯದಲ್ಲಿ ಅದರ ವ್ಯಾಪ್ತಿ ಪೂರ್ಣವಾಗಿದ್ದರೆ, ಸಾಧ್ಯಪ್ರತಿಜ್ಞೆಯಲ್ಲೂ ಅದು ಪೂರ್ಣವಾಗಿರಬೇಕು. ಸಾಧ್ಯಪ್ರತಿಜ್ಞೆಯಲ್ಲಿ ಅದು ವಿಶೇಷ್ಯಪದವಾದುದರಿಂದ ಅದು ಪೂರ್ಣವ್ಯಾಪನೆ ಪಡೆಯಬೇಕಾದರೆ ಆ ಪ್ರತಿಜ್ಞೆ ಸಾಮಾನ್ಯ ಪ್ರತಿಜ್ಞೆಯಾಗಿರಲೇಬೇಕು.

(೨) ಸಾಧ್ಯಪ್ರತಿಜ್ಞೆ ಅಸ್ತ್ಯರ್ಥಕವಾಗಿದ್ದರೆ ಅದರಲ್ಲಿ ವಿಶೇಷಣಪದವಾದ ಮಧ್ಯವರ್ತಿಪದವು ಪೂರ್ಣವ್ಯಾಪ್ತಿ ಪಡೆಯಲು ಸಾಧ್ಯವಿಲ್ಲ. ಅದು ಆಧಾರವಾಕ್ಯಗಳಲ್ಲೊಂದರಲ್ಲಾದರೂ ಪೂರ್ಣವ್ಯಾಪ್ತಿ ಪಡೆದಿರಬೇಕಾದುದರಿಂದ ಅದು ಪಕ್ಷಪದದಲ್ಲಿ ಪೂರ್ಣವ್ಯಾಪ್ತಿ ಪಡೆದಿರಬೇಕು. ಅದು ಪಕ್ಷಪ್ರತಿಜ್ಞೆಯಲ್ಲಿ ವಿಶೇಷ್ಯಪದವಾಗಿದೆ. ಸಾಮಾನ್ಯ ಪ್ರತಿಜ್ಞೆಯಲ್ಲಿ ಮಾತ್ರ ವಿಶೇಷ್ಯಪದ ಪೂರ್ಣವ್ಯಾಪ್ತಿ ಪಡೆಯಬಹುದು. ಆದ್ದರಿಂದ ಪಕ್ಷಪ್ರತಿಜ್ಞೆ ಸಾಮಾನ್ಯ ಪ್ರತಿಜ್ಞೆಯಾಗಿರಬೇಕು.

(೩) ಪಕ್ಷಪ್ರತಿಜ್ಞೆ ಅಸ್ತ್ಯರ್ಥಕವಾಗಿದ್ದರೆ, ಅದರ ವಿಶೇಷಣಪದವಾದ ಪಕ್ಷಪದ S ಪೂರ್ಣವ್ಯಾಪನೆ ಪಡೆದಿರುವುದಿಲ್ಲ. ಆದ್ದರಿಂದ ನಿರ್ಣಯದಲ್ಲೂ ಅದರ ವ್ಯಾಪ್ತಿ ಅಪೂರ್ಣವಾಗಿರಬೇಕು. ನಿರ್ಣಯವಾಕ್ಯದಲ್ಲಿ ಅದು ವಿಶೇಷ್ಯ ಪದವಾದುದರಿಂದ ಅದರ ವ್ಯಾಪ್ತಿ ಅಪೂರ್ಣವಾಗಿರಬೇಕಾದರೆ ಅದು ಅಸಾಮಾನ್ಯ ಪ್ರತಿಜ್ಞೆಯಾಗಿರಬೇಕು.

ಈ ಸೂತ್ರಗಳನ್ನು ಮೇಲೆ ಹೇಳಿದ ಒಂಬತ್ತು ರೂಪಗಳಿಗೆ ಅನ್ವಯಿಸಿದಾಗ AI, AO, IE, OA ರೂಪಗಳು ನಾಲ್ಕನೆಯ ಆಕೃತಿಯಲ್ಲಿ ಅಸಾಧುವಾಗುತ್ತವೆ. ಇವುಗಳನ್ನು ತೆಗೆದುಬಿಟ್ಟರೆ ಉಳಿಯುವ ಸಾಧುರೂಪಗಳು AAI, AEE, IAI, EAO, EIO. ಈ ರೂಪಗಳನ್ನು ಗಮನವಿಟ್ಟು ಪರಿಶೀಲಿಸಿದರೆ ನಾಲ್ಕನೆಯ ಆಕೃತಿಯ ರೂಪಗಳಲ್ಲಿ ಅಸ್ತ್ಯರ್ಥಕ ಸಾಮಾನ್ಯ ನಿರ್ಣಯ ಅಸಾಧ್ಯವೆಂದು ಗೋಚರವಾಗುತ್ತದೆ.

ಅಸ್ತ್ಯರ್ಥಕ ಸಾಮಾನ್ಯ ನಿರ್ಣಯವು ಮೊದಲನೆಯ ಆಕೃತಿಯಲ್ಲಿ ಮಾತ್ರ ಸಾಧ್ಯ. ಅಷ್ಟೇ ಅಲ್ಲ, ಮೊದಲನೆಯ ಆಕೃತಿಯಲ್ಲಿ A. E. I. O.—ಈ ಎಲ್ಲ ಬಗೆಯ ನಿರ್ಣಯಗಳೂ ಸಾಧ್ಯ. ಆದ್ದರಿಂದ ಅದನ್ನು ಪರಿಪೂರ್ಣ (Perfect) ವಾದ ಆಕೃತಿ ಎಂದು ಅರಿಸ್ಟಾಟಲ್ ಕರೆದಿರುತ್ತಾನೆ.

ನಾಲ್ಕು ಆಕೃತಿಗಳ ಸಾಧುರೂಪಗಳು ಒಟ್ಟಿಗೆ ಸೇರಿ ೧೯ ಆಗುತ್ತವೆ. ಅವುಗಳನ್ನು ಸುಲಭವಾಗಿ ಜ್ಞಾಪಕದಲ್ಲಿಟ್ಟುಕೊಳ್ಳುವಂತೆ ಪಾಶ್ಚಾತ್ಯ ತರ್ಕಶಾಸ್ತ್ರದ ಪಠ್ಯಪುಸ್ತಕಗಳಲ್ಲಿ ಈ ರೀತಿ ಲ್ಯಾಟಿನ್ ಭಾಷೆಯಲ್ಲಿ ನಿರೂಪಿಸಿದೆ.

*Barbara*, *Celarent*, *Darii Ferioque* Prioris
*Cesare*, *Camestres*, *Festino*, *Baroko*, Secundae
Tertia, *Darapti*, *Datisi*, *Felapton*,
*Bokardo*, *Ferison*, habet; Quanta insuper addit
*Bramantip*, *Camencs*, *Dimaris*, *Fesapo*, *Fresison*

ಇಟ್ಯಾಲಿಕ್ ಅಕ್ಷರಗಳಲ್ಲಿರುವ ಮಾತುಗಳಲ್ಲಿ ಕಾಣಬರುವ A. E. I. O ಸ್ವರಗಳು ಕ್ರಮವಾಗಿ ಅಸ್ತ್ಯರ್ಥಕ ಸಾಮಾನ್ಯ ಪ್ರತಿಜ್ಞೆಯನ್ನೂ, ನೇತ್ಯರ್ಥಕ ಸಾಮಾನ್ಯ ಪ್ರತಿಜ್ಞೆಯನ್ನೂ, ಅಸ್ತ್ಯರ್ಥಕ ಅಸಾಮಾನ್ಯ ಪ್ರತಿಜ್ಞೆಯನ್ನೂ ನೇತ್ಯರ್ಥಕ ಅಸಾಮಾನ್ಯ ಪ್ರತಿಜ್ಞೆಯನ್ನೂ ಸೂಚಿಸುತ್ತವೆ. Barbara ರೂಪ, AAA ಪ್ರತಿಜ್ಞೆಗಳಿಂದ ಕೂಡಿದ ರೂಪ. Cesare, EAE ಪ್ರತಿಜ್ಞೆಗಳಿಂದ ಕೂಡಿದ ರೂಪ. Darapti AAI ಪ್ರತಿಜ್ಞೆಗಳಿಂದ ಕೂಡಿದ ರೂಪ, Fesapo, EAO ಗಳಿಂದ ಕೂಡಿದ ರೂಪ.

ಇಟ್ಯಾಲಿಕ್ ಪದಗಳಲ್ಲಿ ಸ್ವರಗಳಲ್ಲದೆ ಕೆಲವು ವ್ಯಂಜನಗಳೂ ಸಂಕೇತಾರ್ಥ ಪಡೆದಿವೆ. ಎರಡನೆಯ ಮೂರನೆಯ ಆಕೃತಿಯ ರೂಪಗಳನ್ನು ಮೊದಲನೆ ಆಕೃತಿಯ ರೂಪಗಳಾಗಿ ಬದಲಾಯಿಸಲು ಅಥವಾ ಪರಿವರ್ತಿಸಲು ಅನುಕೂಲ ವಾದ ಸೂಚನೆಗಳನ್ನು ಕೆಲವು ವ್ಯಂಜನಗಳು ತಿಳಿಸುತ್ತವೆ. ಇವು ಯಾವುವು ಎಂಬುದನ್ನು ಮುಂದೆ ರೂಪಪರಿವರ್ತನೆಯನ್ನು ಕುರಿತು ವಿಚಾರಮಾಡುವ ಸಂದರ್ಭದಲ್ಲಿ ತಿಳಿಸಲಾಗುವುದು.

## (iii) ರೂಪಪರಿವರ್ತನೆ (Reduction)

ಅರಿಸ್ಟಾಟಲ್ ಮೊದಲನೆಯ ಆಕೃತಿ ಪರಿಪೂರ್ಣವಾದದ್ದು ಎಂದೂ ಎರಡನೆಯ ಮತ್ತು ಮೂರನೆಯ ಆಕೃತಿಗಳು ಅಪರಿಪೂರ್ಣ ಆಕೃತಿಗಳೆಂದೂ ಕರೆದಿರುತ್ತಾನೆ. ಮೊದಲನೆಯ ಆಕೃತಿಯಲ್ಲಿ ತರ್ಕ ಸ್ವಾಭಾವಿಕವಾಗಿರುತ್ತದೆ ಮತ್ತು ಸುಲಭವಾಗಿ ನಂಬಿಕೆ ಹುಟ್ಟಿಸುತ್ತದೆ. ಎರಡನೆಯ ಮತ್ತು ಮೂರನೆಯ ಆಕೃತಿಗಳಲ್ಲಿ ತರ್ಕ ಮೊದಲನೆಯ ಆಕೃತಿಯಲ್ಲಿರುವಷ್ಟು ಸ್ವಾಭಾವಿಕವಾಗಿಯೂ ಸುಲಭವಾಗಿ ನಂಬಿಕೆ ಹುಟ್ಟಿಸುವಂಥದಾಗಿಯೂ ಇರುವುದಿಲ್ಲ. ಅರಿಸ್ಟಾಟಲ್ ನಾಲ್ಕನೆಯ ಆಕೃತಿಯನ್ನು ತಿಳಿಸಿಲ್ಲ. ಅದನ್ನು ಅರಿಸ್ಟಾಟಲ್ ತರುವಾಯ ಗೇಲೆನ್ ಎಂಬ ವೈದ್ಯಶಾಸ್ತ್ರಜ್ಞನು ಸೇರಿಸಿದನೆಂದು ಐತಿಹ್ಯವಿದೆ. ಅರಿಸ್ಟಾಟಲ್ ಈ ನಾಲ್ಕನೆಯ ಆಕೃತಿಯನ್ನು ತಿಳಿಸದಿದ್ದುದಕ್ಕೆ ಅದರಲ್ಲಿ ಕಾಣುವ ತರ್ಕ ಅಸಹಜವಾಗಿ, ಕೃತಕವಾಗಿ ಇರುವುದೇ ಕಾರಣ. ಈ ತರ್ಕವನ್ನು ತೆಗೆದುಕೊಳ್ಳಿ.

ಎಲ್ಲ ಆನೆಗಳೂ ಸಸ್ತನಿಗಳು
ಎಲ್ಲ ಸಸ್ತನಿಗಳೂ ಬೆನ್ನೆಲುಬುಳ್ಳವು
∴ ಕೆಲವು ಬೆನ್ನೆಲುಬುಳ್ಳ ಪ್ರಾಣಿಗಳು ಆನೆಗಳು

ಸಾಮಾನ್ಯವಾಗಿ ವಿಶೇಷಣಪದ ವಿಶೇಷ್ಯಪದಕ್ಕಿಂತ ವಿಸ್ತಾರವಾದ ನಿರ್ದೇಶನ ಪಡೆದಿರಬೇಕು. ಇದು ಸ್ವಾಭಾವಿಕ. ಆದರೆ ನಿರ್ಣಯವಾಕ್ಯದಲ್ಲಿ ವಿಶೇಷಣಪದ ವಿಶೇಷ್ಯಪದಕ್ಕಿಂತ ಸಂಕುಚಿತ ನಿರ್ದೇಶನ ಪಡೆದಿದೆ. ಇದು ಅಸ್ವಾಭಾವಿಕ. ಅಲ್ಲದೆ ಮೇಲಿನ ತರ್ಕದಲ್ಲಿ ಸಾಧ್ಯವಾಗಬೇಕಾದ ಪದವನ್ನು ಪಕ್ಷಪದವಾಗಿ ಉಪಯೋಗಿಸಿರುತ್ತದೆ. ನ್ಯಾಯವಾಗಿ ಮೇಲಿನ ತರ್ಕ ದಲ್ಲಿರುವ ಆಧಾರಪ್ರತಿಜ್ಞೆಗಳು ಎಲ್ಲ ಆನೆಗಳೂ ಬೆನ್ನೆಲುಬುಳ್ಳವು ಎಂಬ ನಿರ್ಣಯವನ್ನು ಸಾಧಿಸಬೇಕು.

ಎಲ್ಲ ಸಸ್ತನಿಗಳೂ ಬೆನ್ನೆಲುಬುಳ್ಳವು
ಎಲ್ಲ ಆನೆಗಳೂ ಸಸ್ತನಿಗಳು

∴ ಎಲ್ಲ ಆನೆಗಳು ಬೆನ್ನೆಲುಬುಳ್ಳ ಪ್ರಾಣಿಗಳು

ಇದು ಸ್ವಾಭಾವಿಕವಾದ ತರ್ಕ. ಸ್ವಾಭಾವಿಕವಾಗಿ ಬೆನ್ನೆಲುಬುಳ್ಳ ಪ್ರಾಣಿಗಳು ಎಂಬುದು ಸಾಧ್ಯಪದವಾಗಿರಬೇಕು. ಮೊದಲನೆಯ ಆಕೃತಿಯಲ್ಲಿ ಹಾಗಿರುತ್ತದೆ. ನಾಲ್ಕನೆಯ ಆಕೃತಿಯಲ್ಲಿ ಅದು ಪಕ್ಷಪದವಾಗಿರುತ್ತದೆ. ಇದು ಅಸ್ವಾಭಾವಿಕ. ನಾಲ್ಕನೆಯ ಆಕೃತಿಯಲ್ಲಿರುವ ವಾದವನ್ನು ಮೊದಲನೆಯ ಆಕೃತಿಗೆ ಇಳಿಸಿದಾಗ ಅದು ಹೆಚ್ಚು ಬಲಯುತವಾಗಿಯೂ ಸ್ವಾಭಾವಿಕ ವಾಗಿಯೂ ಕಾಣುತ್ತದೆ. ಆದರೆ ಕಾಲಕ್ರಮದಲ್ಲಿ ನಾಲ್ಕನೆಯ ಆಕೃತಿಯ ರೂಪಗಳನ್ನಲ್ಲದೆ ಎರಡು ಮತ್ತು ಮೂರನೆಯ ಆಕೃತಿಯ ರೂಪಗಳನ್ನೂ ಮೊದ ಲನೆಯ ಆಕೃತಿ ರೂಪಕ್ಕೆ ಇಳಿಸುವ ಸದ್ಧತಿ ಪ್ರಾರಂಭವಾಯಿತು. ಹೀಗೆ ಇತರ ಆಕೃತಿಗಳ ರೂಪಗಳನ್ನು ಮೊದಲನೆಯ ಆಕೃತಿಯ ರೂಪಗಳಾಗಿ ಪರಿವರ್ತಿಸು ವುದಕ್ಕೆ ರಿಡಕ್ಷನ್ (Reduction) ಎಂದು ಪಾಶ್ಚಾತ್ಯ ತಾರ್ಕಿಕರು ಹೆಸರು ಕೊಟ್ಟಿರುತ್ತಾರೆ.

ಹೀಗೆ ರೂಪಪರಿವರ್ತನೆಗೆ ಸಹಾಯಕವಾಗಿ ಕೆಲವು ವ್ಯಂಜನಗಳಿಗೆ ಸಂಕೇತಾರ್ಥ ಕೊಟ್ಟಿರುತ್ತದೆ. S ಎಂಬ ವ್ಯಂಜನವು ಅದರ ಹಿಂದಿನ ಸ್ವರ ಸೂಚಿ ಸುವ ಪ್ರತಿಜ್ಞೆಯು ಸರಳವಾದ ರೀತಿಯಲ್ಲಿ ಕನ್ವರ್ಟ್ ಆಗಬೇಕೆಂದು ತಿಳಿಸು ತ್ತದೆ. ಎರಡನೆಯ ಆಕೃತಿಯ ರೂಪವಾದ Festinoದಲ್ಲಿರುವ S ಎಂಬ ವ್ಯಂಜನ ಅದರ ಹಿಂದೆ ಇರುವ ಸ್ವರ ಸೂಚಿಸುವ ನೇತ್ಯರ್ಥಕ ಸಾಮಾನ್ಯ ಪ್ರತಿಜ್ಞೆಯನ್ನು ಸರಳರೀತಿಯಲ್ಲಿ ಕನ್ವರ್ಟ್ ಮಾಡಬೇಕು ಎಂದು ತಿಳಿಸುತ್ತದೆ. ಹಾಗೆ ಕನ್ವರ್ಟ್ ಮಾಡಿದಾಗ ಅದು ಮೊದಲನೆಯ ಆಕೃತಿಯ ರೂಪವಾದ Ferioque ಆಗು ತ್ತದೆ. ಹಾಗೆಯೇ ನಾಲ್ಕನೆಯ ಆಕೃತಿಯ ರೂಪವಾದ Fresison ನಲ್ಲಿ ಎರಡು S ಗಳಿವೆ. ಅವುಗಳ ಹಿಂದಿನ ಸ್ವರಗಳು ಸೂಚಿಸುವ ನೇತ್ಯರ್ಥಕ ಸಾಮಾನ್ಯಪ್ರತಿಜ್ಞೆ (E) ಯೂ ಅಸ್ತ್ಯರ್ಥಕ ಅಸಮಾನ್ಯಪ್ರತಿಜ್ಞೆ (I) ಯೂ ಸರಳವಾಗಿ ಕನ್ವರ್ಟ್ ಆಗಬೇಕೆಂದು ಅವು ಸೂಚಿಸುತ್ತವೆ. ಹಾಗೆ ಕನ್ವರ್ಟ್ ಮಾಡಿದಾಗ ಮೊದಲನೆ ಆಕೃತಿಯ Ferioque ರೂಪ ಹುಟ್ಟುತ್ತದೆ. ಎರಡು, ಮೂರು ಮತ್ತು ನಾಲ್ಕನೆಯ ಆಕೃತಿಗಳ ರೂಪಗಳಲ್ಲಿ ಎಲ್ಲಿ S ಬಂದರೂ ಅದರ ಹಿಂದಿನ ಸ್ವರ ಸೂಚಿಸುವ ಪ್ರತಿಜ್ಞೆಯನ್ನು ಕನ್ವರ್ಟ್ ಮಾಡಬೇಕು.

ಎರಡು, ಮೂರು ಮತ್ತು ನಾಲ್ಕನೆಯ ಆಕೃತಿಯ ರೂಪಗಳಲ್ಲಿ P ವ್ಯಂಜನ ಬಂದಾಗ ಅದರ ಹಿಂದಿನ ಸ್ವರ ಸೂಚಿಸುವ ಪ್ರತಿಜ್ಞೆಯನ್ನು ಕನ್‌ವರ್ಷನ್ ಬೈ ಲಿಮಿಟೇಷನ್ ಎಂಬ ಕ್ರಮಕ್ಕನುಸಾರವಾಗಿ ವಿಪರ್ಯಯಗೊಳಿಸಬೇಕು. ಮೂರನೆಯ ಆಕೃತಿರೂಪವಾದ Darapti ಎಂಬುದರಲ್ಲಿ P ಅದರ ಹಿಂದಿನ ಸ್ವರವಾದ A ಸೂಚಿಸುವ ಅಸ್ತ್ಯರ್ಥಕ ಸಾಮಾನ್ಯ ಪ್ರತಿಜ್ಞೆಯನ್ನು I ಆಗಿ ವಿಪರ್ಯಯಗೊಳಿಸಬೇಕು ಎಂದು ತಿಳಿಸುತ್ತದೆ. ಹಾಗೆ ಮಾಡಿದಾಗ ಅದು ಮೊದಲನೆಯ ಆಕೃತಿಯ Darii ರೂಪ ಪಡೆಯುತ್ತದೆ. ಹಾಗೆಯೇ ರೂಪ ಪರಿವರ್ತನೆಯಿಂದ Felapton ಮತ್ತು Fesapo ಗಳು Ferioque ಆಗುತ್ತವೆ.

ಎರಡು ಮೂರು ಮತ್ತು ನಾಲ್ಕನೆಯ ಆಕೃತಿರೂಪಗಳಲ್ಲಿ M ವ್ಯಂಜನ ಅದರ ಹಿಂದಿನ ಮತ್ತು ಮುಂದಿನ ಸ್ವರಗಳು ಸೂಚಿಸುವ ಪ್ರತಿಜ್ಞೆಗಳನ್ನು ಎಂದರೆ ಸಾಧ್ಯಪ್ರತಿಜ್ಞೆಯನ್ನು ಪಕ್ಷಪ್ರತಿಜ್ಞೆಯಾಗಿಯೂ ಪಕ್ಷಪ್ರತಿಜ್ಞೆಯನ್ನು ಸಾಧ್ಯ ಪ್ರತಿಜ್ಞೆಯಾಗಿಯೂ ಅದಲು ಬದಲು ಮಾಡಬೇಕು ಎಂದು ತಿಳಿಸುತ್ತದೆ. Bramantip ಮತ್ತು Dimaris, Camestres ಎಂಬ ರೂಪಗಳು ಇಂಥ ಪರಿವರ್ತನೆಯಿಂದ ಕ್ರಮವಾಗಿ ಮೊದಲನೆಯ ಆಕೃತಿಯ Barbara, Darii ಮತ್ತು Celarent ರೂಪಗಳಾಗುತ್ತವೆ.

ಎರಡನೆಯ ಮತ್ತು ಮೂರನೆಯ ಆಕೃತಿಗಳ ರೂಪಗಳಾದ Baroko ಮತ್ತು Bokardoಗಳಲ್ಲಿ ಬರುವ K ವ್ಯಂಜನ ಆ ರೂಪಗಳನ್ನು ನೇರವಾಗಿ ಪರಿವರ್ತಿಸುವುದಕ್ಕಾವುದಿಲ್ಲ, ಅವುಗಳನ್ನು ಬಳಸುಕ್ರಮದಲ್ಲಿ ಪರಿವರ್ತಿಸಬೇಕು ಎಂದು ತಿಳಿಸುತ್ತದೆ.

ಎರಡು ಮೂರು ಮತ್ತು ನಾಲ್ಕನೆಯ ಆಕೃತಿಯ ರೂಪಗಳ ಮೊದಲನೆಯ ವ್ಯಂಜನ ಅದು ಪರಿವರ್ತಿತವಾದಾಗ ಮೊದಲನೆಯ ಆಕೃತಿಯ ಯಾವ ರೂಪವಾಗುತ್ತದೆ ಎಂಬುದನ್ನು ತಿಳಿಸುತ್ತದೆ. Cesare, Camestres, Camenes ಗಳ ಮೊದಲನೆಯ ವ್ಯಂಜನವಾದ C, ಅವು ಪರಿವರ್ತನೆಹೊಂದಿದಾಗ ಅದೇ ಅಕ್ಷರದಿಂದ ಪ್ರಾರಂಭವಾಗುವ ಮೊದಲನೆಯ ಆಕೃತಿಯ Celerent ಆಗುತ್ತದೆ. ಹಾಗೆಯೇ F ಎಂಬ ಅಕ್ಷರದಿಂದ ಪ್ರಾರಂಭವಾಗುವ Festino, Felapton, Ferison, Fesapo, Fresisonಗಳು ರೂಪಪರಿವರ್ತನೆ ಹೊಂದಿದಾಗ ಅವು ಅದೇ ಅಕ್ಷರದಿಂದ ಪ್ರಾರಂಭವಾಗುವ ಮೊದಲನೆಯ ಆಕೃತಿಯ Ferioque ರೂಪ ಪಡೆಯುತ್ತವೆ.

ಹೀಗೆ ಇತರ ಆಕೃತಿಗಳ ರೂಪಗಳನ್ನು ಮೊದಲನೆಯ ಆಕೃತಿಯ ರೂಪಗಳಾಗಿ ಪರಿವರ್ತಿಸುವುದನ್ನು ಕೆಲವು ಉದಾಹರಣೆಗಳ ಮೂಲಕ ಸ್ಪಷ್ಟಪಡಿಸ

ಬಹುದು. ಎರಡನೆಯ ಆಕೃತಿಯ ಸೀಸರೀ (Cesare) ರೂಪವನ್ನು ಮೊದಲನೆಯ ಆಕೃತಿಯ (Celarent) ರೂಪಕ್ಕೆ ತಿರುಗಿಸಬಹುದು.

| II ಸೀಸರೀ (Cesare) | I ಸೀಲರೆಂಟ್ (Celarent) |
|---|---|
| E. ಯಾವ P ಯೂ M ಆಗಿರುವುದಿಲ್ಲ | E. ಯಾವ M ಕೂಡ P ಆಗಿರುವುದಿಲ್ಲ (ಕಾನ್ವರ್ಸ್) |
| A. ಎಲ್ಲ S ಗಳೂ M ಆಗಿರುತ್ತವೆ | A. ಎಲ್ಲ S ಗಳೂ M ಆಗಿರುತ್ತವೆ |
| E. ∴ ಯಾವ S ಕೂಡ P ಆಗಿರುವುದಿಲ್ಲ | E. ∴ ಯಾವ S ಕೂಡ P ಆಗಿರುವುದಿಲ್ಲ. |

ಸೀಸರೀ ರೂಪದ ಮೊದಲನೆಯ ವ್ಯಂಜನ C ಅದೇ ಅಕ್ಷರದಿಂದ ಪ್ರಾರಂಭವಾಗುವ ಮೊದಲನೆಯ ಆಕೃತಿಯ Celarent ಆಗಿ ಪರಿವರ್ತನೆಯಾಗಬೇಕೆಂದು ತಿಳಿಸುತ್ತದೆ. Cesare ಯಲ್ಲಿರುವ S ಅದರ ಹಿಂದಿನ ಸ್ವರ ಸೂಚಿಸುವ E ಪ್ರತಿಜ್ಞೆಯನ್ನು ಸರಳವಾದ ರೀತಿಯಲ್ಲಿ ಕನ್ವರ್ಟ್ ಮಾಡಬೇಕೆಂದು ತಿಳಿಸುತ್ತದೆ. ಯಾವ P ಯೂ M ಆಗಿರುವುದಿಲ್ಲ ಎಂಬ ಪ್ರತಿಜ್ಞೆಯನ್ನು ಸರಳರೀತಿಯಲ್ಲಿ ಕನ್ವರ್ಟ್ ಮಾಡಿದಾಗ ಅದು ಯಾವ M ಕೂಡ P ಆಗಿರುವುದಿಲ್ಲ ಎಂದಾಗುತ್ತದೆ. ಹೀಗೆ ಕನ್ವರ್ಟಾದ ಪ್ರತಿಜ್ಞೆಯೂ ಪಕ್ಷ ಪ್ರತಿಜ್ಞೆಯೂ ಸೇರಿ Celarent ರೂಪವಾಗುತ್ತದೆ.

ಮೂರನೆ ಆಕೃತಿಯ ಡಿಸಮಿಸ್ ಮೊದಲನೆಯ ಆಕೃತಿಯ ಡೇರಿಯೈ ಆಗಿ ಪರಿವರ್ತನೆಯಾಗುತ್ತದೆ.

| III ಡಿಸಮಿಸ್ (Disamis) | I ಡೇರಿಯೈ (Darii) |
|---|---|
| I. ಕೆಲವು M ಗಳು P ಆಗಿರುತ್ತವೆ | A. ಎಲ್ಲ M ಗಳು S ಆಗಿರುತ್ತವೆ |
| A. ಎಲ್ಲ M ಗಳೂ S ಆಗಿರುತ್ತವೆ | I. ಕೆಲವು P ಗಳು M ಆಗಿರುತ್ತವೆ (ಕಾನ್ವರ್ಸ್) |
| I. ∴ ಕೆಲವು S ಗಳು P ಆಗಿರುತ್ತವೆ | I. ∴ ಕೆಲವು P ಗಳು S ಆಗಿರುತ್ತವೆ<br>∴ ಕೆಲವು S ಗಳು P ಆಗಿರುತ್ತವೆ (ಕಾನ್ವರ್ಸ್) |

ಡಿಸಮಿಸ್ ರೂಪದ ಮೊದಲನೆಯ ವ್ಯಂಜನ D. ಅದು ಮೊದಲನೆಯ ಆಕೃತಿಯ ಡೇರಿಯೈ ಆಗಬೇಕೆಂದು ತಿಳಿಸುತ್ತದೆ. Disamis ನಲ್ಲಿರುವ

ಮೊದಲನೆ S ಅದರ ಹಿಂದಿನ ಸ್ವರ ಸೂಚಿಸುವ I ಪ್ರತಿಜ್ಞೆಯನ್ನು ಸರಳ ರೀತಿಯಲ್ಲಿ ಕನ್ವರ್ಟ್ ಮಾಡಬೇಕೆಂದು ತಿಳಿಸುತ್ತದೆ. ಕೆಲವು M ಗಳು S ಆಗಿರುತ್ತವೆ ಎಂಬುದು ಸರಳರೀತಿಯಲ್ಲಿ ಕನ್ವರ್ಟ್ ಮಾಡಿದಾಗ ಕೆಲವು P ಗಳು M ಆಗಿರುತ್ತವೆ ಎಂದಾಗುತ್ತದೆ. Disamis ನಲ್ಲಿರುವ M ಅದರ ಹಿಂದಿನ ಸ್ವರ ಸೂಚಿಸುವ A ಪ್ರತಿಜ್ಞೆಯ ಸ್ಥಾನ ಬದಲಾಯಿಸಿ ಅದನ್ನು ಸಾಧ್ಯಪ್ರತಿಜ್ಞೆಯಾಗಿ ಮಾಡಬೇಕೆಂದು ತಿಳಿಸುತ್ತದೆ. (Disamis)ನಲ್ಲಿ ಕೊನೆಯ ವ್ಯಂಜನವಾದ S ಅದರ ಹಿಂದಿನ ಸ್ವರ ಸೂಚಿಸುವ I ಪ್ರತಿಜ್ಞೆಯನ್ನು ಸರಳರೀತಿಯಲ್ಲಿ ಕನ್ವರ್ಟ್ ಮಾಡಬೇಕೆಂದು ತಿಳಿಸುತ್ತದೆ. ಈ ಬದಲಾವಣೆಗಳನ್ನು ಮಾಡಿದಾಗ ಮೇಲೆ ತೋರಿಸುವಂತೆ ಡಿಸಮಿಸ್ ಡೇರಿಯೈ ರೂಪ ಹೊಂದುತ್ತದೆ.

ಎರಡನೆಯ ಆಕೃತಿಯ ಬರಾಕೋ (Baroko) ಮತ್ತು ಮೂರನೆಯ ಆಕೃತಿಯ ಬೊಕಾರ್ಡೋ (Bokardo), ಈ ಎರಡನ್ನೂ ಮೇಲೆ ಹೇಳಿದ ರೀತಿಯಲ್ಲಿ ಮೊದಲನೆಯ ಆಕೃತಿಯ ರೂಪಗಳಾಗಿ ಪರಿವರ್ತಿಸಲು ಸಾಧ್ಯವಿಲ್ಲ. ಆದ್ದರಿಂದ ಅರಿಸ್ಟಾಟಲ್ ಒಂದು ಬಳಸು (Indirect) ವಿಧಾನವನ್ನು ಉಪಯೋಗಿಸಿದನು. ಈ ಬಳಸು ಪರಿವರ್ತನೆಗೆ ಇನ್‌ಡೈರೆಕ್ಟ್ ರಿಡಕ್ಷನ್ (Indirect Reduction) ಎಂದು ಹೆಸರು. ಬರಾಕೋ ರೂಪವನ್ನು ತೆಗೆದುಕೊಂಡು ಈ ವಿಧಾನವನ್ನು ಉದಾಹರಿಸಬಹುದು.

ಎರಡನೆಯ ಆಕೃತಿ (Baroko)

A. ಎಲ್ಲ P ಗಳೂ M ಆಗಿರುತ್ತವೆ
O. ಕೆಲವು S ಗಳು M ಆಗಿರುವುದಿಲ್ಲ
O. ∴ ಕೆಲವು S ಗಳು P ಆಗಿರುವುದಿಲ್ಲ.

ಈ ರೂಪದ ನಿರ್ಣಯ ತಪ್ಪೆಂದು ಇಟ್ಟುಕೊಳ್ಳೋಣ. 'ಕೆಲವು S ಗಳು P ಆಗಿರುವುದಿಲ್ಲ' ಎಂಬ ನಿರ್ಣಯ ತಪ್ಪಾದರೆ ಅದರ ಮಿತ ವಿರೋಧಿ 'ಎಲ್ಲ S ಗಳೂ P ಆಗಿರುತ್ತವೆ' ಎಂಬುದು ಸಾಧುವಾಗಿರಬೇಕು. ಈ ಪ್ರತಿಜ್ಞೆಯನ್ನು ಸಾಧ್ಯಪ್ರತಿಜ್ಞೆಯಾದ ಎಲ್ಲ P ಗಳೂ M ಆಗಿರುತ್ತವೆ ಎಂಬುದರೊಡನೆ ಸೇರಿಸಿ ಮೊದಲನೆಯ ಆಕೃತಿಯ ಬಾರ್ಬರ ರೂಪವನ್ನು ಪಡೆಯಬಹುದು.

A. ಎಲ್ಲ P ಗಳೂ M ಆಗಿರುತ್ತವೆ.
A. ಎಲ್ಲ S ಗಳೂ P ಆಗಿರುತ್ತವೆ
A. ∴ ಎಲ್ಲ S ಗಳೂ M ಆಗಿರುತ್ತವೆ.

ಈ ಅನುಮಾನದ ನಿರ್ಣಯವಾಕ್ಯವಾದ 'ಎಲ್ಲ S ಗಳೂ M ಆಗಿರುತ್ತವೆ' ಎಂಬುದು ಬರಾಕೋ ರೂಪದ ಪಕ್ಷಪ್ರತಿಜ್ಞೆಯಾದ 'ಕೆಲವು S ಗಳು M ಆಗಿರುವುದಿಲ್ಲ' ಎಂಬುದರ ಮಿತವಿರೋಧಿ. ಬರಾಕೋ ರೂಪದಲ್ಲಿ ಈ ಪ್ರತಿಜ್ಞೆ ಸರಿ ಎಂದು ನಾವು ಭಾವಿಸಿದ್ದೇವೆ. ಆದ್ದರಿಂದ ಅದರ ಮಿತ ವಿರೋಧಿ 'ಎಲ್ಲ S ಗಳೂ M ಆಗಿರುತ್ತವೆ' ಎಂಬುದು ತಪ್ಪು. ಇದು ತಪ್ಪಾಗ ಬೇಕಾದರೆ ಬಾರ್ಬರ ರೂಪದ ಪ್ರತಿಜ್ಞೆಗಳಲ್ಲಿ ಯಾವುದೋ ತಪ್ಪಾಗಿರಬೇಕು. ಅವುಗಳಲ್ಲಿ ಎಲ್ಲ P ಗಳೂ M ಆಗಿರುತ್ತವೆ ಎಂಬುದು ಸರಿಯಾದ ಪ್ರತಿಜ್ಞೆ. ಏಕೆಂದರೆ ಅದು ಬರಾಕೋ ರೂಪದ ಸಾಧ್ಯಪ್ರತಿಜ್ಞೆ. ಅದು ನಿಜವೆಂದು ನಮಗೆ ತಿಳಿದಿದೆ. ಆದ್ದರಿಂದ ಪಕ್ಷಪ್ರತಿಜ್ಞೆಯಾದ 'ಎಲ್ಲ S ಗಳೂ P ಆಗಿರುತ್ತವೆ' ಎಂಬುದು ತಪ್ಪಾಗಿರಬೇಕು. ಇದು ತಪ್ಪಾಗಿರಬೇಕಾದರೆ ಅದರ ಮಿತವಿರೋಧಿ 'ಕೆಲವು S ಗಳು P ಆಗಿರುವುದಿಲ್ಲ' ಎಂಬ ಪ್ರತಿಜ್ಞೆ ಸರಿಯಾದುದಾಗಿರಬೇಕು. ಇದೇ ಬರಾಕೋವಿನ ನಿರ್ಣಯಪ್ರತಿಜ್ಞೆ. ಆದ್ದರಿಂದ ಬರಾಕೋ ರೂಪ ಸಾಧುವಾದದ್ದು.

ಈ ಬಳಸುಮಾರ್ಗವನ್ನು ಬಿಟ್ಟು ಸರಳರೀತಿಯಲ್ಲಿ ಬರಾಕೋವನ್ನು ಮೊದಲ ನೆಯ ಆಕೃತಿಯ ಫೆರಿಯೋ ರೂಪವಾಗಿ ಪರಿವರ್ತಿಸಬಹುದು.

ಬರಾಕೋವಿನ ಸಾಧ್ಯಪ್ರತಿಜ್ಞೆಯನ್ನು ಕಾಂಟ್ರಪಾಸಿಟಿವ್ ಆಗಿಯೂ ಅದರ ಪಕ್ಷಪ್ರತಿಜ್ಞೆಯನ್ನು ಆಬ್ವರ್ಸ್ ಆಗಿಯೂ ಮಾಡಿದರೆ ನಮಗೆ ಫೆರಿಯೋ ರೂಪ ದೊರೆಯುತ್ತದೆ.

| ಬರಾಕೊ (Boroko) | ಫೆರಿಯೋ (Ferio) |
|---|---|
| A. ಎಲ್ಲ P ಗಳೂ M ಆಗಿರುತ್ತವೆ. | E. ಯಾವ $\bar{M}$ ಗಳೂ O ಆಗಿರುವುದಿಲ್ಲ. (ಪಾರ್ಶಿಯಲ್ ಕಾಂಟ್ರಪಾಸಿಟಿವ್) |
| O. ಕೆಲವು S ಗಳು M ಆಗಿರುವುದಿಲ್ಲ. | I. ಕೆಲವು S ಗಳು $\bar{M}$ ಆಗಿರುತ್ತವೆ. (ಆಬ್ವರ್ಸ್) |
| O. ∴ ಕೆಲವು S ಗಳು P ಆಗಿರುವುದಿಲ್ಲ. | O. ∴ ಕೆಲವು S ಗಳು P ಆಗಿರುವುದಿಲ್ಲ. |

ಹೀಗೆಯೇ ಬೊಕಾರ್ಡೋದ ಸಾಧ್ಯಪ್ರತಿಜ್ಞೆಯ ಪಾರ್ಶಿಯಲ್ ಕಾಂಟ್ರಾಪಾಸಿಟಿವ್‌ವನ್ನು ಪಕ್ಷಪ್ರತಿಜ್ಞೆಯಾಗಿಯೂ ಬೊಕಾರ್ಡೋದ ಪಕ್ಷ ಪ್ರತಿಜ್ಞೆಯನ್ನು ಸಾಧ್ಯಪ್ರತಿಜ್ಞೆಯಾಗಿಯೂ ಬದಲಾಯಿಸಿ ನಿರ್ಣಯವನ್ನು ಆಬ್ವರ್ಟ್ ಮಾಡಿದಾಗ ಅದು ಡೇರಿಯೈ ರೂಪ ಪಡೆಯುತ್ತದೆ.

| ಬೊಕಾರ್ಡೋ (Bokardo) | ಡೇರಿಯೈ (Darii) |
|---|---|
| O. ಕೆಲವು M ಗಳು P ಆಗಿರುವುದಿಲ್ಲ. | A ಕೆಲವು M ಗಳು S ಆಗಿರುತ್ತವೆ. (ಸ್ಥಾನ ಬದಲಾವಣೆಯಿಂದ) |
| A. ಎಲ್ಲ M ಗಳೂ S ಆಗಿರುತ್ತವೆ. | I ಕೆಲವು $\bar{P}$ ಗಳು M ಆಗಿರುತ್ತವೆ. |
| O. ∴ ಕೆಲವು S ಗಳು P ಆಗಿರುವುಗಿಲ್ಲ. | I ∴ ಕೆಲವು S ಗಳು $\bar{P}$ ಗಳು ಆಗಿರುತ್ತವೆ. |
| | O ∴ ಕೆಲವು S ಗಳು P ಆಗಿರುವುದಿಲ್ಲ |

ನೇರವಾದ ರೂಪಪರಿವರ್ತನೆಯಾಗಲಿ, ಬಳಸಿನ ರೂಪಪರಿವರ್ತನೆಯಾಗಲಿ, ಎರಡೂ ಕೃತಕವಾದುವು, ಅನಾವಶ್ಯಕವಾದುವು. ಯಾವುದಾದರೂ ಅನುಮಾನರೂಪ ಸರಿ ಅಥವಾ ತಪ್ಪು ಎಂಬುದನ್ನು ಈಗಾಗಲೇ ತಿಳಿಸಿರುವ ಮಧ್ಯವರ್ತಿ ಅನುಮಾನದ ಸೂತ್ರಗಳ ಮೂಲಕ ಸುಲಭವಾಗಿ ಸಾಧಿಸಬಹುದು. ರೂಪಪರಿವರ್ತನೆಯ ಗೊಂದಲ ಅಪ್ರಕೃತ.

## ಅಭ್ಯಾಸಗಳು (೧೦)

೧. ನಿರುಪಾಧಿಕ ಮಧ್ಯವರ್ತಿ ಅನುಮಾನದ ಸ್ವರೂಪವೇನು? ಅದರ ನಿಯಮಗಳು ಯಾವುವು?

೨. ಎರಡು ನೇತ್ಯರ್ಥಕ ಆಧಾರವಾಕ್ಯಗಳಿಂದ ನಿರ್ಣಯಪಡೆಯಲಾಗುವುದಿಲ್ಲ. ಹಾಗೆಯೇ ಎರಡು ಭಾಗಾನ್ವಯ ಆಧಾರವಾಕ್ಯಗಳಿಂದಲೂ ನಿರ್ಣಯ ಪಡೆಯಲು ಸಾಧ್ಯವಿಲ್ಲ. ಏಕೆ?

೩. ನಿರುಪಾಧಿಕ ಮಧ್ಯವರ್ತಿ ಅನುಮಾನದಲ್ಲಿ ಮಧ್ಯವರ್ತಿಪದ ಒಂದುಸಲವಾದರೂ ನಿರ್ದೇಶನವ್ಯಾಪ್ತಿಯನ್ನು ಪಡೆದಿರಬೇಕು; ಅದು ಆಧಾರವಾಕ್ಯಗಳಲ್ಲಿ ಪೂರ್ಣ ನಿರ್ದೇಶನವ್ಯಾಪ್ತಿ ಪಡೆದ ವಿನಾ ನಿರ್ಣಯದಲ್ಲಿ ಪೂರ್ಣ ನಿರ್ದೇಶನವ್ಯಾಪ್ತಿ ಪಡೆದಿರಕೂಡದು: ಏಕೆ?

೪. ನಿರುಪಾಧಿಕ ಮಧ್ಯವರ್ತಿ ಅನುಮಾನದ ಏಳನೆಯ ಮತ್ತು ಎಂಟನೆಯ ನಿಬಂಧನೆಗಳನ್ನು ತಿಳಿಸಿ. ಕಾರಣವನ್ನು ಕೊಟ್ಟು ಅವುಗಳನ್ನು ದೃಢಪಡಿಸಿ.

೫. ಕೆಳಗೆ ಕೊಟ್ಟಿರುವ ವಾದಗಳನ್ನು ಸಾಧ್ಯ, ಪಕ್ಷ ಮತ್ತು ನಿರ್ಣಯಗಳಾಗಿ ಕ್ರಮಪಡಿಸಿ ಪರೀಕ್ಷಿಸಿ.

(i) ಚಿನ್ನ ಸಂಯುಕ್ತ ವಸ್ತುವಲ್ಲ; ಏಕೆಂದರೆ ಅದು ಲೋಹ. ಲೋಹಗಳು ಯಾವುವೂ ಸಂಯುಕ್ತ ವಸ್ತುಗಳಲ್ಲ.

(ii) ಕ್ರೂರಿಗಳು ಹೇಡಿಗಳು ; ಕಾಲೇಜಿನ ವಿದ್ಯಾರ್ಥಿಗಳು ಕ್ರೂರಿಗಳಲ್ಲ, ಆದ್ದರಿಂದ ಕಾಲೇಜಿನ ವಿದ್ಯಾರ್ಥಿಗಳು ಹೇಡಿಗಳಲ್ಲ.

(iii) ಇವನು ತನ್ನಲ್ಲಿರುವ ಹಣವನ್ನು ಬಡವರಿಗೆ ಹಂಚುತ್ತಾನೆ, ಕಳ್ಳನು ಯಾವನೂ ಹೀಗೆ ಮಾಡುವುದಿಲ್ಲ, ಆದ್ದರಿಂದ ಇವನು ಕಳ್ಳನಲ್ಲ.

(iv) ಕೆಲವು ಉಪಯೋಗಕರವಾದ ಲೋಹಗಳು ದೊರೆಯುವುದು ಕಷ್ಟವಾಗುತ್ತಿದೆ. ಕಬ್ಬಿಣವು ಉಪಯೋಗಕರವಾದ ಲೋಹ, ಆದ್ದರಿಂದ ಅದು ದೊರೆಯುವುದು ಕಷ್ಟವಾಗುತ್ತಿದೆ.

(v) ಇದ್ದದ್ದರಲ್ಲಿ ತೃಪ್ತಿಗೊಂಡವನು ನಿಜವಾಗಿ ಐಶ್ವರ್ಯವಂತ. ಅಸೂಯಾಪರನಾದವನಿಗೆ ಇದ್ದದ್ದರಲ್ಲಿ ತೃಪ್ತಿ ಇಲ್ಲ, ಆದ್ದರಿಂದ ಅಸೂಯಾಪರನಾದ ಯಾವನೂ ನಿಜವಾಗಿ ಐಶ್ವರ್ಯವಂತನಲ್ಲ.

(vi) ಕೆಲವು F ಗಳು H ಗಳಾಗಿರುವುದಿಲ್ಲ, ಯಾವ F ಕೂಡ G ಆಗಿರುವುದಿಲ್ಲ, ಯಾವ G ಯೂ H ಆಗಿರುವುದಿಲ್ಲ.

೬. "ಸಿಲಜಿಸಂ"ನ ಆಕೃತಿ (Figures)ಗಳು ಯಾವುವು ? ಆ ಆಕೃತಿಗಳಿಗೆ ಆಧಾರವೇನು ?

೭. ಆಕೃತಿ (Figures)ಗಳಿಗೂ, ಆಕೃತಿರೂಪ (Moods)ಗಳಿಗೂ ಇರುವ ಸಂಬಂಧವೇನು ?

೮. ನಾಲ್ಕು ಆಕೃತಿಗಳ ಪೈಕಿ ಯಾವುದಾದರೂ ಒಂದು ಆಕೃತಿಯ ನಿಬಂಧನೆಗಳನ್ನು ತಿಳಿಸಿ ದೃಢಪಡಿಸಿ.

೯. ಯಾವುದಾದರೂ ಒಂದು ಆಕೃತಿಯನ್ನು ತೆಗೆದುಕೊಂಡು ಅವುಗಳಲ್ಲಿ ಯಾವ ರೂಪಗಳು ಸಾಧು ಎಂಬುದನ್ನು ನಿರ್ಧರಿಸಿ.

೧೦. ಎರಡನೆಯ ಆಕೃತಿಯಲ್ಲಿ ನೇತ್ಯರ್ಥಕ ನಿರ್ಣಯವನ್ನು ಮಾತ್ರ ಪಡೆಯಬಹುದು ; ಮೂರನೆಯದರಲ್ಲಿ ಭಾಗಾನ್ವಯ ಪ್ರತಿಜ್ಞೆಗಳನ್ನು ಮಾತ್ರ ಪಡೆಯಬಹುದು. ಏಕೆ ?

೧೧. ನಾಲ್ಕನೆಯ ಆಕೃತಿಯಲ್ಲಿ AA, AE, EAಗಳು ಯಾವ ನಿರ್ಣಯವನ್ನು ಕೊಡಬಲ್ಲವು ? ಕಾರಣ ತಿಳಿಸಿ.

೧೨. ಒಂದೇ 'ಸಿಲಜಿಸಂ'ನಲ್ಲಿ ಸಾಧ್ಯಪದ ಮತ್ತು ಪಕ್ಷಪದಗಳೆರಡೂ ಪೂರ್ಣನಿರ್ದೇಶನ ವ್ಯಾಪ್ತಿ ಪಡೆಯದಿರಬಹುದೆ ? ಹಾಗೆ ಪಡೆಯಬಹುದಾದರೆ ಅದಕ್ಕೆ ಉದಾಹರಣೆಯಾಗಿ ಒಂದು ವಾದವನ್ನು ರಚಿಸಿ.

೧೩. 'ಸಿಲಜಿಸಂ'ನ ಒಂದೊಂದು ಆಕೃತಿಯ ವೈಶಿಷ್ಟ್ಯವನ್ನೂ ತಿಳಿಸಿ. ಮೊದಲನೆಯ ಆಕೃತಿಯನ್ನು ಆದರ್ಶ ಆಕೃತಿಯಾಗಿ ಅರಿಸ್ಟಾಟಲ್ ಭಾವಿಸಲು ಕಾರಣವೇನು ?

೧೪. 'ರೂಪಪರಿವರ್ತನೆ' (Reduction) ಎಂದರೆ ಏನು ? 'ರೂಪಪರಿವರ್ತನೆ' ಹುಟ್ಟುವುದಕ್ಕೆ ಕಾರಣವೇನು ? ರೂಪಪರಿವರ್ತನೆ ಅಗತ್ಯವೆ ? ಚರ್ಚಿಸಿ.

೧೫. ಈ ವಾದಗಳನ್ನು ಮೊದಲನೆಯ ಆಕೃತಿಯ ರೂಪಕ್ಕೆ ಇಳಿಸಿ.

(ಅ) ಹೆಚ್ಚು ಕಡಿಮೆ ಕೇಡಿಗರೆಲ್ಲ ಮಾನಸಿಕ ರೋಗಗಳಿಗೆ ಒಳಪಟ್ಟಿರುತ್ತಾರೆ
ಕೇಡಿಗಳೆಲ್ಲ ಶಿಕ್ಷೆಗೆ ಗುರಿಯಾಗುತ್ತಾರೆ.

∴ ಶಿಕ್ಷೆಗೆ ಗುರಿಯಾಗುವ ಕೆಲವರು ಮಾನಸಿಕ ರೋಗಗಳಿಗೆ ಒಳಪಟ್ಟಿರುತ್ತಾರೆ.

(ಆ) ಈ ತರಗತಿಯ ಹುಡುಗರೆಲ್ಲರೂ ಪರೀಕ್ಷೆಗೆ ಸಿದ್ಧವಾಗಿರುತ್ತಾರೆ.
ಸೋಮಾರಿಗಳು ಯಾರೂ ಪರೀಕ್ಷೆಗೆ ಸಿದ್ಧವಾಗಿರುವುದಿಲ್ಲ ;

∴ ಸೋಮಾರಿಗಳು ಯಾರೂ ಈ ತರಗತಿಯ ಹುಡುಗರಲ್ಲ.

೧೬. 'ಬರಾಕೋ' ಮತ್ತು 'ಬೊಕಾರ್ಡೋ' ರೂಪಗಳನ್ನು ಮೊದಲನೆಯ ಆಕೃತಿಯ ರೂಪಗಳಾಗಿ ನೇರವಾಗಿ ಏಕೆ ಪರಿವರ್ತಿಸಲಾಗುವುದಿಲ್ಲ ? ಅವುಗಳನ್ನು ಪರೋಕ್ಷವಾಗಿ ಹೇಗೆ ಪರಿವರ್ತಿಸಬಹುದು ? ಉದಾಹರಿಸಿ.

೧೭. 'ಸಿಲಜಿಸಂ'ನ ಲ್ಯಾಟಿನ್ ರೂಪಗಳಲ್ಲಿ ಸಂಕೇತಾರ್ಥ ಪಡೆದಿರುವ ಸ್ವರಗಳೂ ವ್ಯಂಜನಗಳೂ ಯಾವುವು ? ಪ್ರತಿಯೊಂದರ ಸಂಕೇತಾರ್ಥವನ್ನೂ ಉದಾಹರಣೆಗಳ ಮೂಲಕ ಸ್ಪಷ್ಟಪಡಿಸಿ.

# ೧೧. ಭಾರತೀಯ ಸಮಧ್ಯಮ ಅನುಮಾನ

ಹಿಂದಿನ ಅಧ್ಯಾಯದಲ್ಲಿ ಅರಿಸ್ಟಾಟಲ್‌ನ ಮಧ್ಯವರ್ತಿ ಅನುಮಾನವನ್ನು ತಿಳಿಸಿದುದಾಯಿತು. ಈ ಅಧ್ಯಾಯದಲ್ಲಿ ಭಾರತೀಯ ತಾರ್ಕಿಕರು ಸ್ಥಾಪಿಸಿರುವ ಅನುಮಾನವನ್ನು ಪರಿಚಯಮಾಡಿ ಕೊಡಲಾಗುತ್ತದೆ. ಅರಿಸ್ಟಾಟಲಿನ ನ್ಯಾಯ (Syllogism) ಮೂರು ಅವಯವಗಳುಳ್ಳದ್ದು—ಸಾಧ್ಯವಾಕ್ಯ (Major Premise) ಪಕ್ಷವಾಕ್ಯ (Minor Premise). ಮತ್ತು ನಿರ್ಣಯವಾಕ್ಯ (Conclusion), ಭಾರತೀಯರ ನ್ಯಾಯ ಸಾಮಾನ್ಯವಾಗಿ ಐದು[1] ಅವಯವಗಳುಳ್ಳದ್ದು. ಅವು (೧) ಪ್ರತಿಜ್ಞಾ, (೨) ಹೇತು, (೩) ಉದಾಹರಣ, (೪) ಉಪನಯ ಮತ್ತು (೫) ನಿಗಮನ. ಭಾರತೀಯ ತರ್ಕಗ್ರಂಥಗಳಲ್ಲಿ ಸಾಧಾರಣವಾಗಿ ಈ ಪಂಚಾವಯವ ನ್ಯಾಯಕ್ಕೆ ಈ ಉದಾಹರಣೆಯನ್ನು ಕೊಡುತ್ತಾರೆ.

| | |
|---|---|
| ೧. ಪ್ರತಿಜ್ಞಾ : ಪರ್ವತೋವಹ್ನಿಮಾನ್— | ಪರ್ವತ ಬೆಂಕಿಯುಳ್ಳದ್ದು |
| ೨. ಹೇತು : ಧೂಮಾತ್ | ಹೊಗೆ ಇರುವುದರಿಂದ |
| ೩. ಉದಾಹರಣ : ಅಥವಾ ನಿದರ್ಶನ ಯೋಯೋ ಧೂಮವಾನ್ ಸಸವಹ್ನಿಮಾನ್ ಯಥಾ ಮಹಾನಸಃ | ಯಾವ ಯಾವುದು ಹೊಗೆಯುಳ್ಳದ್ದೋ ಅದು ಅದು ಬೆಂಕಿಯುಳ್ಳದ್ದು ; ಅಡಿಗೆಮನೆಯಂತೆ |
| ೪. ಉಪನಯ : ವಹ್ನಿವ್ಯಾಪ್ಯ ಧೂಮವಾನ್ ಅಯಂ ಪರ್ವತಃ | ಈ ಪರ್ವತದ ಬೆಂಕಿಯಿಂದ ವ್ಯಾಪ್ಯವಾದ ಹೊಗೆಯುಳ್ಳದ್ದು. |
| ೫. ನಿಗಮನ : ತಸ್ಮಾದ್ವಹ್ನಿಮಾನ್ ಪರ್ವತಃ | ಆದ್ದರಿಂದ ಪರ್ವತವು ಬೆಂಕಿಯುಳ್ಳದ್ದು. |

[1] ಭಾರತೀಯ ತರ್ಕದ ಚರಿತ್ರೆಯನ್ನು ಪರಿಶೀಲಿಸಿದರೆ ಭಾರತೀಯ ತರ್ಕದ ಆರಂಭದ ಕಾಲದಲ್ಲಿ ಹತ್ತು ಅವಯವಗಳುಳ್ಳ ನ್ಯಾಯವಿತ್ತೆಂದು ತಿಳಿದುಬರುತ್ತದೆ. ನ್ಯಾಯದರ್ಶನದ ಮೂಲಪುರುಷನಾದ ಗೌತಮನ ಪ್ರಕಾರ ನ್ಯಾಯದ ಅವಯವಗಳು ಐದು. ಈ ಪಂಚಾವಯವ ನ್ಯಾಯವೇ ತುಂಬ ಬಳಕೆಯಲ್ಲಿರುವ ರೂಪ. ಆದರೆ ಬೌದ್ಧ ತಾರ್ಕಿಕರು ಎರಡು ಅವಯವಗಳುಳ್ಳ ನ್ಯಾಯವನ್ನು ಮಾತ್ರ ಅಂಗೀಕರಿಸುತ್ತಾರೆ. ಮೀಮಾಂಸಕರು ನ್ಯಾಯಕ್ಕೆ ಮೂರು ಅವಯವಗಳು ಸಾಕೆಂದು ವಾದಿಸುತ್ತಾರೆ.

ಮೇಲಿನ ಉದಾಹರಣೆಯಲ್ಲಿ ಯಾವುದರ ವಿಚಾರವಾಗಿ ನಾವು ಅನುಮಾನವನ್ನು ಏರ್ಪಡಿಸಬೇಕೆಂದಿರುತ್ತೇವೆಯೋ ಅದಕ್ಕೆ ಪಕ್ಷ ಎಂದು ಹೆಸರು. ಹೊಗೆಯುಳ್ಳ ಬೆಟ್ಟ ಎಂಬುದು ಪಕ್ಷ. ಬೆಟ್ಟದಲ್ಲಿ ಹೊಗೆ ಇದೆ ಎಂಬುದರಿಂದ ನಾವು ಏನನ್ನು ಸಾಧಿಸಬೇಕೆಂದು ಪ್ರಯತ್ನಿಸುತ್ತೇವೆಯೋ ಅದು ಸಾಧ್ಯ ಅಥವಾ ಲಿಂಗಿ. ಬೆಂಕಿ ಇದೆ ಎಂದು ನಾವು ಸಾಧಿಸಲು ಪ್ರಯತ್ನ ಪಡುತ್ತೇವೆಯಾದುದರಿಂದ ಬೆಂಕಿ ಲಿಂಗಿ ಅಥವಾ ಸಾಧ್ಯ. ಯಾವುದರ ಬಲದಿಂದ ಅಥವಾ ಯಾವುದರ ಆಧಾರದ ಮೇಲೆ ನಾವು ಹೊಗೆ ಇರುವ ಕಡೆ ಬೆಂಕಿ ಇದೆ ಎಂದು ಸಾಧಿಸಲು ಪ್ರಯತ್ನ ಪಡುತ್ತೇವೆಯೋ ಅದು 'ಸಾಧನ', 'ಲಿಂಗ', ಅಥವಾ ಹೇತು. ಪಕ್ಷಕ್ಕೂ ಅಂದರೆ 'ಬೆಟ್ಟಕ್ಕೂ', ಲಿಂಗಿ ಅಥವಾ ಸಾಧ್ಯವಾದ 'ಬೆಂಕಿ'ಗೂ ಮಧ್ಯವರ್ತಿಯಾಗಿ ಇದ್ದುಕೊಂಡು ಅವೆರಡಕ್ಕೂ ಸಂಬಂಧವೇರ್ಪಡಿಸುವ ಸಾಧನ ಅಥವಾ ಪಕ್ಷಸಾಧ್ಯ ಹೇತು, 'ಹೊಗೆ', ಈ ಮೂರು ಪದಗಳೂ ಅರಿಸ್ಟಾಟಲಿನ ನ್ಯಾಯದ 'ಮೈನರ್ ಟರ್ಮ್', 'ಮೇಜರ್ ಟರ್ಮ್', 'ಮಿಡಲ್ ಟರ್ಮ್' ಗಳಿಗೆ ಸಮವಾದ ಪದಗಳು.

ಅರಿಸ್ಟಾಟಲಿನ ನ್ಯಾಯದಲ್ಲೂ, ನೈಯ್ಯಾಯಿಕರ ನ್ಯಾಯದಲ್ಲೂ ಮೂರೇ ಪದಗಳಿದ್ದರೂ ಅವುಗಳನ್ನು ಉಪಯೋಗಿಸಿ ರಚಿಸಿರುವ ನ್ಯಾಯವಾಕ್ಯಸಮುದಾಯ ಬೇರೆ ಬೇರೆಯಾಗಿದೆ. (೧) ಅರಿಸ್ಟಾಟಲಿನ ನ್ಯಾಯದಲ್ಲಿ ಮೂರು ನ್ಯಾಯವಾಕ್ಯಗಳಿವೆ, ನೈಯ್ಯಾಯಿಕರ ನ್ಯಾಯದಲ್ಲಿ ಐದು ನ್ಯಾಯವಾಕ್ಯಗಳಿವೆ. (೨) ಅರಿಸ್ಟಾಟಲಿನ ನ್ಯಾಯದಲ್ಲಿ ನಾಲ್ಕು ಆಕೃತಿಗಳೂ (Figures) ಅವುಗಳಿಗೆ ಸಂಬಂಧಪಟ್ಟ ಹತ್ತೊಂಬತ್ತು ರೂಪ (Moods) ಗಳೂ ಇವೆ. ನೈಯ್ಯಾಯಿಕರ ನ್ಯಾಯದಲ್ಲಿ ಅಂಥ ಆಕೃತಿಗಳೂ ರೂಪಗಳೂ ಇಲ್ಲ. (೩) ಆದ್ದರಿಂದ ಭಾರತೀಯ ನ್ಯಾಯದಲ್ಲಿ ಎರಡನೆಯ, ಮೂರನೆಯ ಮತ್ತು ನಾಲ್ಕನೆಯ ಆಕೃತಿಯ ರೂಪಗಳನ್ನು ಮೊದಲನೆಯ ಆಕೃತಿಯ ರೂಪಗಳಾಗಿ ಪರಿವರ್ತಿಸುವ ಆವಶ್ಯಕತೆ ಇಲ್ಲ. (೪) ಅರಿಸ್ಟಾಟಲಿನ ನ್ಯಾಯದಲ್ಲಿ E. A. I. O ಎಂಬ ಪ್ರತಿಜ್ಞಾ ಭೇದಗಳಿವೆ. ಆದ್ದರಿಂದ ನಿರ್ಣಯಗಳೂ ನಾಲ್ಕು ರೀತಿಯಾಗಿರಬಹುದು. ಆದರೆ ಭಾರತೀಯ ತರ್ಕ ಪೂರ್ಣಾನ್ವಯ ಅಸ್ತ್ಯರ್ಥಕ ಪ್ರತಿಜ್ಞೆ ಅಂದರೆ ಸಾಮಾನ್ಯ ಅಸ್ತ್ಯರ್ಥಕ ಪ್ರತಿಜ್ಞೆಯನ್ನು ಮಾತ್ರ ಒಪ್ಪುತ್ತದೆ. ನೇತ್ಯರ್ಥಕ ಪ್ರತಿಜ್ಞೆಗಳು ಭಾರತೀಯ ತರ್ಕದಲ್ಲಿ ಬಳಕೆಯಲ್ಲಿಲ್ಲ. ನೇತ್ಯರ್ಥಕ ಭಾವವನ್ನು ಭಾರತೀಯರು ಅಸ್ತ್ಯರ್ಥಕ ಪ್ರತಿಜ್ಞಾರೂಪವಾಗಿಯೇ ಉಪಯೋಗಿಸುತ್ತಾರೆ. ಪಾಶ್ಚಾತ್ಯ ತಾರ್ಕಿಕರು 'ಇಲ್ಲಿ ಘಟ ಇರುವುದಿಲ್ಲ' (Sep) ಎಂದು ಹೇಳುವುದನ್ನು ಭಾರತೀಯ ತಾರ್ಕಿಕರು 'ಇಲ್ಲಿ ಘಟಾಭಾವ ಇದೆ' (S a $\bar{p}$) ಎಂದು ಹೇಳುತ್ತಾರೆ.

ಭಾರತೀಯ ತಾರ್ಕಿಕರು ಪಾಶ್ಚಾತ್ಯ ತಾರ್ಕಿಕರಂತೆ ಭಾಗಾನ್ವಯ ಪ್ರತಿಜ್ಞೆ ಅಥವಾ ಅಸಾಮಾನ್ಯ ಪ್ರತಿಜ್ಞೆ (Particular proposition) ಯನ್ನು ಗಣನೆಗೆ ತೆಗೆದುಕೊಳ್ಳುವುದಿಲ್ಲ. ಏಕೆಂದರೆ ಅವರ ಅಭಿಪ್ರಾಯದಲ್ಲಿ ತರ್ಕಶಾಸ್ತ್ರವು ಸಾಮಾನ್ಯಗಳ ವಿವೇಚನೆ. ತರ್ಕದ ಮೂಲಕ ನಾವು ಸಾಧಿಸಬೇಕಾದುದು ಸಾಮಾನ್ಯಗಳ ತಿಳಿವು, ಅಸಾಮಾನ್ಯಗಳ ತಿಳಿವಲ್ಲ. ಅಸಾಮಾನ್ಯಗಳ ವಿಚಾರವಾಗಿ ಸಾಧಿಸಬೇಕಾದದ್ದು ಏನೂ ಇಲ್ಲ. (೫) ಪಾಶ್ಚಾತ್ಯ ತಾರ್ಕಿಕರು ಅನುಗಮನ (Induction) ಮತ್ತು ನಿಗಮನ (Deduction)—ಇವು ಬೇರೆ ಬೇರೆಯಾದ ವಿಧಾನಗಳೆಂದು ಹೇಳುತ್ತಾರೆ. "ಸಿಲಜಿಸಂ" ಪೂರ್ಣವಾಗಿ ನಿಗಮನವೆಂದು ಭಾವಿಸಿದುದರಿಂದ ಅದು ಮೂರು ಅವಯವಗಳ ನ್ಯಾಯವಾಯಿತು. ಭಾರತೀಯ ತಾರ್ಕಿಕರ ಅಭಿಪ್ರಾಯದಲ್ಲಿ ಅನುಗಮನ, ನಿಗಮನಗಳು ನಮ್ಮ ಆಲೋಚನೆಯಲ್ಲಿ ಒಂದನ್ನು ಬಿಟ್ಟು ಒಂದು ಇರುವುದಿಲ್ಲ; ಅವು ಒಂದಕ್ಕೊಂದು ಪೋಷಕವಾಗಿ ಕೆಲಸಮಾಡಿ ಜ್ಞಾನವನ್ನು ಪೂರ್ಣಗೊಳಿಸುತ್ತವೆ. ನಾವು ಆಗಲೇ ತಿಳಿಸಿರುವಂತೆ ನಮ್ಮ ಆಲೋಚನೆ ಮೇಲಿನಿಂದ ಕೆಳಕ್ಕೂ ಕೆಳಗಿನಿಂದ ಮೇಲಕ್ಕೂ, ಹಿಂದಕ್ಕೂ ಮುಂದಕ್ಕೂ ಸಂಚರಿಸುತ್ತದೆ. ಈ ಎರಡು ಬಗೆಯ ಸಂಚಾರ ಒಂದಕ್ಕೊಂದು ಸೇರಿಕೊಂಡು, ಒಂದಕ್ಕೊಂದು ಆಶ್ರಯವಾಗಿ, ಜ್ಞಾನಕ್ರಿಯೆಯನ್ನು ಸಾರ್ಥಕಗೊಳಿಸುತ್ತವೆ. ಆದ್ದರಿಂದ ಭಾರತೀಯ ನ್ಯಾಯದಲ್ಲಿ ಅನುಗಮನ ನಿಗಮನಕ್ರಿಯೆಗಳು ಸೇರಿಕೊಂಡು ಜ್ಞಾನಕ್ರಿಯೆಯ ಪೂರ್ಣ ಸ್ವರೂಪವನ್ನು ಸ್ಪಷ್ಟಪಡಿಸುತ್ತವೆ. ಮೇಲೆ ಕೊಟ್ಟಿರುವ ಭಾರತೀಯ ನ್ಯಾಯದ ಉದಾಹರಣೆಯಲ್ಲಿ ಮೊದಲನೆಯ ಮೂರು ವಾಕ್ಯಗಳು ಅನುಗಮನಕ್ರಿಯೆಯನ್ನು ಒಳಗೊಂಡಿವೆ. ಮೂರನೆಯ ವಾಕ್ಯದಲ್ಲಿ ಹೊಗೆಗೂ ಬೆಂಕಿಗೂ ಇರುವ ಅವಿನಾಭಾವ, ಕಾರ್ಯಕಾರಣ ಸಂಬಂಧದ ಅರಿವು ಅಂದರೆ ವ್ಯಾಪ್ತಿಜ್ಞಾನ ಮೂಡುತ್ತದೆ. ಎಲ್ಲೆಲ್ಲಿ ಹೊಗೆ ಇದೆಯೋ ಅಲ್ಲಲ್ಲಿ ಬೆಂಕಿ ಇದೆ ಎಂಬ ವ್ಯಾಪ್ತಿಜ್ಞಾನ ಹುಟ್ಟಿದ ವಿನಾ, ಅದರ ಆಧಾರವಿಲ್ಲದೆ ಯಾವ ನಿಗಮನ ಕ್ರಿಯೆಯೂ (Deduction) ಸಾಧ್ಯವಿಲ್ಲ. ಮೂರನೆಯ ಅವಯವವಾದ ಉದಾಹರಣೆಯಲ್ಲಿ ನಿಗಮನಕ್ರಿಯೆಗೆ ಆಧಾರವಾದ ಸಾಮಾನ್ಯ ಪ್ರತಿಜ್ಞೆ ಸ್ಥಾಪಿಸಲ್ಪಟ್ಟಿದೆ. ನಾಲ್ಕು ಮತ್ತು ಐದನೆಯ ಅವಯವಗಳು ವ್ಯಾಪ್ತಿಜ್ಞಾನವನ್ನು ಒಳಗೊಂಡ ಈ ಸಾಮಾನ್ಯ ಪ್ರತಿಜ್ಞೆಯ ಸಹಾಯದಿಂದ ಹೊಗೆ ಇರುವ ಬೆಟ್ಟಕ್ಕೆ ಆ ವ್ಯಾಪ್ತಿ ಜ್ಞಾನವನ್ನು ಅನ್ವಯಿಸುತ್ತವೆ. ನಾಲ್ಕನೆಯ ಅವಯವ ಮೂರನೆಯ ಅವಯವದಲ್ಲಿ ಪ್ರಕಟವಾದ ವ್ಯಾಪ್ತಿಜ್ಞಾನವನ್ನು ಹೊಗೆ ಇರುವ ಬೆಟ್ಟಕ್ಕೆ ಅನುಸಂಧಾನ (Application) ಮಾಡುತ್ತದೆ. ಹೀಗೆ

ಅನುಸಂಧಾನ ಮಾಡುವುದಕ್ಕೆ 'ವ್ಯಾಪಾರ' ಎಂದು ಹೆಸರು. ಲಿಂಗ ಪರಾಮರ್ಶೆ ಈ ವ್ಯಾಪಾರದ ಕೆಲಸ, ಈ ವ್ಯಾಪಾರ ನಡೆದಾಗ ನಿರ್ಣಯ ಅಥವಾ ಅನುಮಿತಿ (Conclusion) ಫಲಿಸುತ್ತದೆ. ಅನುಮಿತಿ ಲಿಂಗ ಪರಾಮರ್ಶೆಯ 'ಫಲ.' ಲಿಂಗಪರಾಮರ್ಶೆ ಅನುಮಿತಿಗೆ ನೇರವಾದ[1] ಕಾರಣ. ವ್ಯಾಪ್ತಿಜ್ಞಾನ ಲಿಂಗಪರಾಮರ್ಶೆಗೆ ಆಧಾರ. ಆದ್ದರಿಂದ ವ್ಯಾಪ್ತಿಜ್ಞಾನ ಅನುಮಿತಿಗೆ ಸ್ವಲ್ಪದೂರ ಕಾರಣ. ಕೊನೆಯದರಲ್ಲಿ ನಿರ್ಣಯ ಸ್ಪಷ್ಟಪಡುತ್ತದೆ. ಮೊದಲನೆಯ ಮೂರು ಅವಯವಗಳ ಮೂಲಕ ನಮ್ಮ ಅರಿವು ಸಾಮಾನ್ಯದ ಕಡೆಗೆ ಏರುತ್ತದೆ, ಕೊನೆಯ ಎರಡು ಅವಯವಗಳ ಮೂಲಕ ನಮ್ಮ ಅರಿವು ಸಾಮಾನ್ಯದಿಂದ ಪ್ರತ್ಯೇಕದ ಕಡೆಗೆ ಇಳಿಯುತ್ತದೆ. ಆಲೋಚನೆಯ ಏರು ಇಳಿತಗಳು ಒಂದಕ್ಕೊಂದು ಪೋಷಕವಾಗಿ ಒಂದು ಆಲೋಚನೆಯನ್ನು ಪೂರ್ಣಗೊಳಿಸುತ್ತವೆ.[2] ಅರಿಸ್ಟಾಟಲಿನ ಅನುಮಾನದಲ್ಲಿ ನಿರ್ಣಯ ಕೊನೆಯಲ್ಲಿ

---

[1] ಗಂಗೇಶ ಎಂಬ ತಾರ್ಕಿಕನು ಇದನ್ನು ಸ್ಪಷ್ಟಪಡಿಸಿರುತ್ತಾನೆ.

[2] S. Kuppuswami Sastri, *A Primer of Indian Logic*, pp. 284-85.

"It (Indian Logic) is rooted firmly in the fundamental doctrine that the syllogistic reasoning should be viewed, not apart from the inductive process of thinking, but merely as a continuation and methodical application of it. In Indian logic, deduction and induction do not represent two mutually exclusive types of inference but they should always be looked upon as inseparably connected parts of a complete process of thinking called inference (anumāna); and the chief function of anumāna as a means of valid cognition, is to enable one to realize how certain facts are inseparably and necessarily connected with each other in accordance with a general principle."

Stcherbatsky, *Buddhist Logic*, p. 282: "The Indian syllogism indeed is not only the formulation of a deductive reasoning, it also contains an indication of that Induction which preceds Deduction."

B. Croce, Logic (as the science of pure concept) translated by Douglas Ainslie, pages 583-85. "Another logic is known which, as it seems, developed outside the influence of Greek thought and remained immune from the formalist error. This is Indian Logic which is notably antiverbalist .. Indian Logic studies the naturalistic syllogism in itself, as internal thought distinguishing it from syllogism for others, that is to say, from the more or less usual, but always extrinsic and accidental forms of communication and dispute. It has not even a suspicion of the extravagent idea (which vitiates our treatises) of a truth which is merely syllogistic and formalist and which

ಬರುತ್ತದೆ. ಭಾರತೀಯ ಅನುಮಾನ ನಿರ್ಣಯದಿಂದ ಪ್ರಾರಂಭವಾಗುತ್ತದೆ. ಬಹುಶಃ ಇದು ನಮ್ಮ ಆಲೋಚನೆಯ ಸ್ವಾಭಾವಿಕಮಾರ್ಗ.[3]

---

may be false in fact. It takes no account of the judgment or rather it considers what is called judgment and what is really a proposition, as a verbal clothing of knowledge; it does not make the verbal distinction of subject, copula and predicate; it does not admit classes of categorical and hypothetical, of affirmative and negative judgments. All these are extraneous to logic whose object is the constant 'knowledge considered in itself.'"

Ibid, pp. 297-99: "The ratiocinative process consists of two parts, an ascending one and a descending one. Inference proceeds from one particular instance to other similar instances through an intermediate general principle which is, if not expressly stated, always included in the example. From this point of view one must admit that the five membered syllogism of the Naiyayikas alone does full justice to this double march of the ratiocinative process."

"Thesis: 1 Sound is impermanent
Reason 2 Because it is produced by effort
Example 3 Like a jar."

"This represents the natural march of the intellect when it leaps from one particular to another. The major premise is not fully realized, but it lies buried somewhere in the depths of consciousness and emerges to the surface when the next step or deduction is taken. The syllogism then receives the following shape:"

"Sound is impermanent
Because produced by an effort
Like a jar: Where an effort there impermanence
Sound is produced at will by an effort
∴ It is impermanent."

"That the major premise must be established by Induction from particulars is maintained by Aristotle and the Indian syllogism rests on the process of Induction."

"If this is really so, it seems impossible or quite artificial to cut the natural inductive-deductive process of thinking into two different halves—Induction and Deduction. Both are complementary of one another and cannot be separated otherwise than in abstraction. This is the substance of the Indian view pp. 257."

[3] *Elements of Logic* by Latta and Macbeath, "This is perhaps the normal procedure of thought: We discover the conclusion first and then look for premises."

ಭಾರತೀಯ ತಾರ್ಕಿಕರೆಲ್ಲರೂ ಅನುಮಾನವು, ಪಂಚಾವಯವಗಳುಳ್ಳದ್ದಾಗಿರಬೇಕೆಂದು ಹೇಳುವುದಿಲ್ಲ. ಧರ್ಮಕೀರ್ತಿ ಎಂಬ ಬೌದ್ಧ ತಾರ್ಕಿಕನು ಅನುಮಾನಕ್ಕೆ ಎರಡೇ ಅವಯವಗಳು ಸಾಕೆಂದು ಹೇಳುತ್ತಾನೆ. "ಬೆಟ್ಟದಲ್ಲಿ ಬೆಂಕಿ ಇದೆ; ಧೂಮವಿರುವುದರಿಂದ." ಎಲ್ಲೆಲ್ಲಿ ಹೊಗೆ ಇದೆಯೋ ಅಲ್ಲಲ್ಲಿ ಬೆಂಕಿ ಇದೆ ಎಂಬ ಪ್ರತಿಜ್ಞೆ ಅಧ್ಯಾಹಾರವಾಗಿದೆ. ಇಂಥ ಅನುಮಾನವನ್ನು ಪಾಶ್ಚಾತ್ಯ ತಾರ್ಕಿಕರು ಎಂಥಿಮೀಮ್ (Enthymeme) ಅಂದರೆ ಸಂಗ್ರಹಿಸಿದ ಅನುಮಾನ ಎಂದು ಕರೆದಿರುತ್ತಾರೆ. ಮೀಮಾಂಸಕರು ಮತ್ತು ವೇದಾಂತಿಗಳು ಮೂರು ಅವಯವಗಳು ಮಾತ್ರ—ಮೊದಲನೆಯ ಮೂರು ಅಥವಾ ಕೊನೆಯ ಮೂರು—ಸಾಕೆಂದು ಅಭಿಪ್ರಾಯಪಡುತ್ತಾರೆ. ಏಕೆಂದರೆ ಮೊದಲನೆಯ ಅವಯವ ಮತ್ತು ಕೊನೆಯ ಅವಯವ ಒಂದೇ. ಒಂದು ಇನ್ನೊಂದರ ಪುನರಾವೃತ್ತಿ. ನಾಲ್ಕನೆಯದು ಎರಡನೆಯದರ ಪುನರ್ವಿವರಣೆ. ನಾವೇ ಆಲೋಚನೆಮಾಡಿ ಒಂದು ನಿರ್ಣಯಕ್ಕೆ ಬರಲು ಮೂರು ಅವಯವಗಳು ಸಾಕು. ನಾವು ಆಲೋಚಿಸಿ ನಿರ್ಣಯಿಸಿದುದನ್ನು ಇನ್ನೊಬ್ಬನಿಗೆ ಅನುಭವ ಮಾಡಿಕೊಡಬೇಕಾದಾಗ ಐದು ಅವಯವಗಳು ಆವಶ್ಯಕವಾಗುತ್ತವೆ. ನಾವು ಆಲೋಚಿಸಿ 'ಬೆಟ್ಟದಲ್ಲಿ ಬೆಂಕಿ ಇದೆ' ಎಂದು ನಿರ್ಧರಿಸಿದ್ದನ್ನು ಇನ್ನೊಬ್ಬನಿಗೆ ಹೇಳಿದಾಗ ಅವನು 'ಏಕೆ' ಎಂದು ಕೇಳುತ್ತಾನೆ. ಅದಕ್ಕೆ ಉತ್ತರವಾಗಿ 'ಹೊಗೆ ಇರುವುದರಿಂದ' ಎಂದು ನಾವು ಹೇಳುತ್ತೇವೆ. ಆಗ ಅವನು 'ಹೊಗೆ ಇದ್ದರೆ ಬೆಂಕಿ ಏಕೆ ಇರಬೇಕು' ಎಂದು ಕೇಳುತ್ತಾನೆ. ಆಗ ನಾವು 'ಹೊಗೆಗೂ ಬೆಂಕಿಗೂ ಎಡೆಬಿಡದ ಸಂಬಂಧವಿದೆ.' ಅಡಿಗೆಮನೆಯಲ್ಲಿರುವಂತೆ ಹೊಗೆ ಇದ್ದ ಸ್ಥಳದಲ್ಲಿ ಬೆಂಕಿ ಇರುತ್ತದೆ. ಮಡುವಿನಂತೆ ಹೊಗೆ ಇಲ್ಲದ ಸ್ಥಳದಲ್ಲಿ ಬೆಂಕಿ ಇರುವುದಿಲ್ಲ. ಈ ಬೆಟ್ಟ ಬೆಂಕಿಯಿಂದ ವ್ಯಾಪ್ಯವಾದ ಹೊಗೆಯುಳ್ಳದ್ದು. ಆದ್ದರಿಂದ ಬೆಟ್ಟ ಬೆಂಕಿಯುಳ್ಳದ್ದು' ಎಂದು ತರ್ಕಮಾಡಿ ನಮ್ಮ ನಿರ್ಣಯವು ತರ್ಕಬದ್ಧವಾದುದೆಂದು ಸ್ಥಾಪಿಸುತ್ತೇವೆ. ವಾದಮಾಡುವಾಗ ಹೀಗೆ ಐದು ಅವಯವಗಳು ಬೇಕಾಗುತ್ತವೆ. ಮೊದಲನೆಯ ಮೂರರಲ್ಲಿ ನಮ್ಮ ಆಲೋಚನೆ ಪ್ರತ್ಯೇಕವಾದುದರಿಂದ ಸಾಮಾನ್ಯದ ಕಡೆಗೆ ಹತ್ತುತ್ತದೆ, ಅನಂತರ ಅದು ನಾಲ್ಕನೆಯ ಮತ್ತು ಐದನೆಯ ಅವಯವಗಳಲ್ಲಿ ಸಾಮಾನ್ಯದಿಂದ ಪ್ರತ್ಯೇಕಕ್ಕೆ ಇಳಿಯುತ್ತದೆ. ಒಂದು ಆಲೋಚನೆ ಪರಿಪೂರ್ಣವಾಗಲು ಅಗತ್ಯವಾದ ಅನುಗಮನ ನಿಗಮನಕ್ರಿಯೆಗಳು ಒಂದಕ್ಕೊಂದು ಪೋಷಕವಾಗಿ ಈ ಐದು ಅವಯವಗಳಲ್ಲಿ ಸೇರಿಕೊಂಡಿವೆ. ಈ ಪಂಚಾವಯವ ನ್ಯಾಯ ಆಲೋಚನೆಯ ಪೂರ್ಣಸ್ವರೂಪವನ್ನು ವ್ಯಕ್ತ

ಪಡಿಸುತ್ತದೆ. ಇದು ಭಾರತೀಯ ನ್ಯಾಯದ ಒಂದು ದೊಡ್ಡ ಗುಣವೆಂದು ಈಚಿನ ಪಾಶ್ಚಾತ್ಯ ತಾರ್ಕಿಕರು ಅದನ್ನು ಪ್ರಶಂಸಿಸಿರುತ್ತಾರೆ.

ನಾವು ಅರಿಸ್ಟಾಟಲಿನ ನ್ಯಾಯವನ್ನೂ ನೈಯ್ಯಾಯಿಕರ ನ್ಯಾಯವನ್ನೂ ಸೂಕ್ಷ್ಮವಾಗಿ ಪರಿಶೀಲಿಸಿದರೆ ಅವುಗಳ ರೂಪ ಭಿನ್ನವಾದುದೇ ಹೊರತು ಅವೆರಡರ ತಳಹದಿಯಾದ ತತ್ತ್ವ ಒಂದೇ ಎಂದು ಸ್ಪಷ್ಟವಾಗುತ್ತದೆ. ಭಾರತೀಯರ ಐದು ಅವಯವಗಳ ನ್ಯಾಯವನ್ನು ಅರಿಸ್ಟಾಟಲಿನ ಮೂರು ಅವಯುವಗಳ ನ್ಯಾಯರೂಪಕ್ಕೆ ಸುಲಭವಾಗಿ ಇಳಿಸಬಹುದು. ಹಾಗೆಯೇ ಅರಿಸ್ಟಾಟಲಿನ ನ್ಯಾಯರೂಪವನ್ನು ಭಾರತೀಯ ನ್ಯಾಯರೂಪಕ್ಕೆ ಇಳಿಸ ಬಹುದು.

ಭಾರತೀಯ ನ್ಯಾಯದ ಅವಯುವಗಳಾದ ಪ್ರತಿಜ್ಞೆ ಮತ್ತು ಉಪನಯ ಗಳನ್ನು ಬಿಟ್ಟು ಮೂರನೆಯದನ್ನು ಮೊದಲನೆಯ ಪ್ರತಿಜ್ಞೆಯಾಗಿಯೂ ಅಂದರೆ ಸಾಧ್ಯಪ್ರತಿಜ್ಞೆ (Major Premise) ಯಾಗಿಯೂ, ಎರಡನೆಯದನ್ನು ಪಕ್ಷ ಪ್ರತಿಜ್ಞೆ (Minor Premise) ಯಾಗಿಯೂ ಐದನೆಯದನ್ನು ಅನುಮಿತಿ (Conclusion) ಆಗಿಯೂ ಜೋಡಿಸಿದರೆ ಅದು ಅರಿಸ್ಟಾಟಲಿನ ಬಾರ್ಬರ ರೂಪ ಪಡೆಯುತ್ತದೆ. ಆ ರೂಪ ಈ ರೀತಿ ಇರುತ್ತದೆ.

| | | |
|---|---|---|
| M A P | ಯೋಯೋ ಧೂಮ ವಾನ್ ಸಸ ವಹ್ನಿಮಾನ್ | ಎಲ್ಲೆಲ್ಲಿ ಹೊಗೆ ಇದೆಯೋ ಅಲ್ಲಲ್ಲಿ ಬೆಂಕಿ ಇದೆ |
| S A M | ಪರ್ವತೋ ಧೂಮವಾನ್ | ಪರ್ವತ ಹೊಗೆಯುಳ್ಳದ್ದು |
| ∴ S A P | ತಸ್ಮಾತ್ ಪರ್ವತೋ ವಹ್ನಿಮಾನ್ | ಆದ್ದರಿಂದ ಪರ್ವತವು ಬೆಂಕಿ ಯುಳ್ಳದ್ದು |

ಅರಿಸ್ಟಾಟಲಿನ ನ್ಯಾಯದ ಮೂರು ಅವಯುವಗಳಲ್ಲಿ, ಸಾಧ್ಯಪ್ರತಿಜ್ಞೆ ಯನ್ನು ಮೂರನೆಯದಾಗಿಯೂ ಪಕ್ಷಪ್ರತಿಜ್ಞೆಯನ್ನು ಎರಡನೆಯದಾಗಿಯೂ ನಿರ್ಣಯವನ್ನು ಐದನೆಯದಾಗಿಯೂ ಮಾಡಿ ಅವಕ್ಕೆ ಪ್ರತಿಜ್ಞಾ ಮತ್ತು ಉಪನಯಗಳನ್ನು (ಕ್ರಮವಾಗಿ) ಮೊದಲನೆಯ ಮತ್ತು ನಾಲ್ಕನೆಯ ಅವಯುವಗಳಾಗಿ ಸೇರಿಸಿದರೆ, ಅದು ಭಾರತೀಯ ಪಂಚಾವಯುವ ನ್ಯಾಯ ವಾಗುತ್ತದೆ.

೧. ದೇವದತ್ತನು ಮರ್ತ್ಯ
೨. ಮನುಷ್ಯನಾದುದರಿಂದ

೩. ಯಾವ ಯಾವನು ಮನುಷ್ಯನೊ ಅವನು ಅವನು ಮರ್ತ್ಯ.
(ಯಜ್ಞದತ್ತನಂತೆ)
೪. ದೇವದತ್ತನು (ಮರಣವುಳ್ಳ) ಮನುಷ್ಯ
೫. ಆದ್ದರಿಂದ ದೇವದತ್ತನು ಮರ್ತ್ಯ.

ಭಾರತೀಯ ಅನುಮಾನದಲ್ಲಿ ಹೇತು ಅತ್ಯಂತ ಮುಖ್ಯವಾದದ್ದು. ಅನುಮಾನ ಸಾಧುವಾಗಬೇಕಾದರೆ ಹೇತು ಸರಿಯಾದ ಲಕ್ಷಣ ಪಡೆದಿರಬೇಕು. ಅಂದರೆ ಸದ್ಧೇತುವಾಗಿರಬೇಕು. ಇದು ಸರಿಯಾಗಿದ್ದು ಅನುಮಾನ ಸರಿಯಾಗಬೇಕಾದರೆ ಅದು ಐದು ನಿಯಮಗಳನ್ನು ಪಾಲಿಸಬೇಕು ಎಂದು ಉದ್ಯೋತಕರನೆಂಬ ತಾರ್ಕಿಕನು ಹೇಳಿರುತ್ತಾನೆ. ಆ ಐದು ನಿಯಮಗಳು ಇವು.

(೧) ಹೇತು ಪಕ್ಷದಲ್ಲಿ ಪೂರ್ಣವಾಗಿ ವ್ಯಾಪಿಸಿರಬೇಕು. (ಪಕ್ಷಧರ್ಮತ್ವ)

(೨) ಅದು ಸಪಕ್ಷದಲ್ಲಿ ಮಾತ್ರ ಇರಬೇಕು (ಸಪಕ್ಷ ದೃಷ್ಟಾಂತ)

(೩) ಅದು ವಿಪಕ್ಷದಲ್ಲಿ ಇರಕೂಡದು (ವಿಪಕ್ಷ ದೃಷ್ಟಾಂತ)

(೪) ಅದು ಅಬಾಧಿತವಾಗಿರಬೇಕು ಅಂದರೆ ಅದಕ್ಕೆ ಬಾಧಕವಾದ ವಿಷಯವಿರಕೂಡದು (ಅಬಾಧಿತ ವಿಷಯತ್ವಂ)

(೫) ಅದು ಪ್ರತಿಪಕ್ಷವಿಲ್ಲದ್ದು (ಅಸತ್ಪ್ರತಿಪಕ್ಷ) ಆಗಿರಬೇಕು.

ಈ ಲಕ್ಷಣಗಳಿಲ್ಲದ ಹೇತು ದುಷ್ಟಹೇತುವಾಗುತ್ತದೆ. ದುಷ್ಟಹೇತುವುಳ್ಳ ಅನುಮಾನ ಅಸಾಧುವಾಗುತ್ತದೆ.

ಇತರ ಭಾರತೀಯ ತಾರ್ಕಿಕರು ಅನುಮಾನ ಸಾಧುವಾಗಿರಬೇಕಾದರೆ ಅದು ಮೊದಲನೆಯ ಮೂರು ನಿಯಮಗಳನ್ನು ಪಾಲಿಸಿದರೆ ಸಾಕು ಎಂದು ಅಭಿಪ್ರಾಯಪಡುತ್ತಾರೆ. ಈ ನಿಯಮಗಳನ್ನು ಪಾಲಿಸದ ಅನುಮಾನಗಳು ಹೇತ್ವಾಭಾಸದೋಷಕ್ಕೆ ಈಡಾಗುತ್ತವೆ. ಹೆತ್ವಾಭಾಸಗಳು ಐದು: (೧) ವ್ಯಭಿಚಾರ, (೨) ವಿರೋಧ, (೩) ಪ್ರತಿಪಕ್ಷ, (೪) ಅಸಿದ್ಧ ಮತ್ತು (೫) ಬಾಧ.

ಭಾರತೀಯ ತಾರ್ಕಿಕರು ಅನುಮಾನವನ್ನು ಮೂರು ವಿಧವಾಗಿ ವಿಂಗಡಿಸಿರುತ್ತಾರೆ. ಅನುಮಾನವನ್ನು ಪೂರ್ವವತ್, ಶೇಷವತ್ ಮತ್ತು ಸಾಮಾನ್ಯತೋದೃಷ್ಟ ಎಂದು ವಿಂಗಡಿಸುವುದು ಒಂದು ಬಗೆ. ಕಾರಣದಿಂದ ಕಾರ್ಯವನ್ನೂ ಊಹಿಸಿ ತಿಳಿಯುವುದು ಪೂರ್ವವತ್ ಅನುಮಾನ. ದೃಷ್ಟವಾಗಿ ಮೋಡ ಕವಿದ ಆಕಾಶವನ್ನು ನೋಡಿ ಮಳೆ ಬರುವುದೆಂದು ತಿಳಿಯುವುದು

ಪೂರ್ವವತ್ ಅನುಮಾನಕ್ಕೆ ಉದಾಹರಣೆ. ಕಾರ್ಯದಿಂದ ಕಾರಣವನ್ನು ಊಹಿಸಿ ತಿಳಿಯುವುದು ಶೇಷವತ್ ಅನುಮಾನ. ಕಾವೇರಿಯಲ್ಲಿ ಪ್ರವಾಹ ಹೆಚ್ಚಿದ್ದನ್ನು ನೋಡಿ ನದಿಯ ಮೇಲ್ಭಾಗದಲ್ಲಿ ಮಳೆಯಾಗಿದೆಯೆಂದು ತಿಳಿಯುವುದು ಶೇಷವತ್ ಅನುಮಾನಕ್ಕೆ ಉದಾಹರಣೆ. ಈ ಎರಡು ಬಗೆಯ ಅನುಮಾನಗಳಿಂದ ಭಿನ್ನವಾದುದ್ದು ಸಾಮಾನ್ಯತೋದೃಷ್ಟ ಅನುಮಾನ. ಕೊಂಬುಗಳಿರುವ ಒಂದು ಪ್ರಾಣಿಯನ್ನು ನೋಡಿ, ಅದು ಸೀಳುಗೊರಸು ಪಡೆದಿದೆ ಎಂದು ತಿಳಿಯುವುದು ಸಾಮಾನ್ಯತೋದೃಷ್ಟ ಅನುಮಾನ.

ಕೇವಲಾನ್ವಯಿ, ಕೇವಲವ್ಯತಿರೇಕಿ, ಅನ್ವಯ ವ್ಯತಿರೇಕಿ ಎಂದು ಅನುಮಾನವನ್ನು ವಿಂಗಡಿಸುವುದು ಇನ್ನೊಂದು ಬಗೆ. ಅನ್ವಯ ಹೇತು ಅಥವಾ ವ್ಯತಿರೇಕಹೇತುವಿನ ಮೂಲಕ ನಿರ್ಣಯಕ್ಕೆ ಬರುವುದು ಕೇವಲಾನ್ವಯಿ ಮತ್ತು ಕೇವಲ ವ್ಯತಿರೇಕಿ ಅನುಮಾನಗಳು. ಇವೆರಡು ಬಗೆಯ ಹೇತುಗಳಿಗೂ ಅನ್ವಯವಾಗುವ ಅನುಮಾನ ಅನ್ವಯವ್ಯತಿರೇಕಿ. ಈ ವಿಂಗಡಿಕೆ ನೇರವಾಗಿ ಹೇತುವಿಗೆ ಮಾತ್ರ ಸಂಬಂಧಪಟ್ಟ ವಿಂಗಡಿಕೆಯೇ ಹೊರತು, ಅದು ಅನುಮಾನಕ್ಕೆ ಸಂಬಂಧಪಟ್ಟ ವಿಂಗಡಿಕೆಯಲ್ಲ.

ಮೇಲೆ ಹೇಳಿದ ಎರಡು ಬಗೆಯ ವಿಂಗಡಿಕೆಗಳು ರೂಢಿಯಲಿಲ್ಲ. ಇವು ಕೇವಲ ಕೃತಕವಾದುವು.

ಅನುಮಾನವನ್ನು ಸ್ವಾರ್ಥಾನುಮಾನ ಮತ್ತು ಪರಾರ್ಥಾನುಮಾನ ಎಂದು ವಿಂಗಡಿಸುವುದು ಮೂರನೆಯ ಬಗೆಯ ವಿಂಗಡಿಕೆ. ತಾನೇ ಆಲೋಚಿಸಿ ನಿರ್ಣಯಕ್ಕೆ ಬರುವ ವಿಧಾನಕ್ಕೆ ಸ್ವಾರ್ಥಾನುಮಾನವೆಂದು ಹೆಸರು. ತಾನು ನಿರ್ಣಯಿಸಿದ್ದನ್ನು ಇನ್ನೊಬ್ಬನ ಅನುಭವಕ್ಕೆ ಬರುವಂತೆ ವಾದಮಾಡಿ ತಿಳಿಸುವುದು ಪರಾರ್ಥಾನುಮಾನ. ಇದೂ ಕೂಡ ನೈಜವಾದ ವಿಂಗಡಿಕೆಯಲ್ಲ. ಕೇವಲ ಮನಶ್ಶಾಸ್ತ್ರ ದೃಷ್ಟಿಯಿಂದ ಮಾಡಬಹುದಾದ ವಿಂಗಡಿಕೆ, ನಿಜವಾದ ತಾರ್ಕಿಕ ವಿಂಗಡಿಕೆಯಲ್ಲ.

## ಅಭ್ಯಾಸಗಳು (೧೧)

೧. ಭಾರತೀಯ ನ್ಯಾಯಕ್ಕೂ ಅರಿಸ್ಟಾಟಲಿನ ನ್ಯಾಯಕ್ಕೂ ಇರುವ ವ್ಯತ್ಯಾಸವನ್ನು ತಿಳಿಸಿ, ಅವೆರಡರ ಗುಣದೋಷಗಳನ್ನು ವಿಮರ್ಶಿಸಿ.

೨. ಭಾರತೀಯ ನ್ಯಾಯ ನಿಯಮಗಳು ಯಾವುವು? ಅವುಗಳನ್ನು ಅರಿಸ್ಟಾಟಲಿನ ನ್ಯಾಯ ನಿಯಮಗಳಿಗೆ ಹೋಲಿಸಿ.

೩. ಭಾರತೀಯ ನ್ಯಾಯದಲ್ಲಿ ಹೇತುವಿನ ಪಾತ್ರವೇನು? ಹೇತು ಸರಿಯಾಗಿರಬೇಕಾದರೆ ಅದು ಯಾವ ನಿಯಮಗಳನ್ನು ಪಾಲಿಸಬೇಕು?

೪. ಭಾರತೀಯ ತಾರ್ಕಿಕರು ಅನುಮಾನಗಳನ್ನು ಹೇಗೆ ವಿಂಗಡಿಸಿರುತ್ತಾರೆ? ಆ ವಿಂಗಡಣೆಗಳನ್ನು ವಿಮರ್ಶಿಸಿ.

೫. ಭಾರತೀಯ ಅನುಮಾನದ ಅವಯವಗಳು ಯಾವುವು ? ಅನುಮಾನದಲ್ಲಿ ಒಂದೊಂದರ ಪಾತ್ರವನ್ನೂ ವಿಮರ್ಶಿಸಿ.

೬. ಅನುಮಾನಕ್ಕೆ ಪಂಚಾವಯವಗಳು ಬೇಕೆ ? ಈ ವಿಚಾರದಲ್ಲಿ ಭಾರತೀಯ ತಾರ್ಕಿಕರಲ್ಲಿರುವ ಭಿನ್ನಾಭಿಪ್ರಾಯಗಳನ್ನು ತಿಳಿಸಿ.

'ಲಿಂಗಪರಾಮರ್ಶೆಯು ಅನುಮಾನಕ್ಕೆ ನೇರವಾದ ಕಾರಣ' ಇದಕ್ಕೆ ವಿವರಣೆ ಕೊಟ್ಟು ದೃಢಪಡಿಸಿ.

೭. ಭಾರತೀಯ ನ್ಯಾಯವನ್ನು ಅರಿಸ್ಟಾಟಲಿನ ನ್ಯಾಯವಾಗಿಯೂ, ಅರಿಸ್ಟಾಟಲಿನ ನ್ಯಾಯವನ್ನು ಭಾರತೀಯ ನ್ಯಾಯವಾಗಿಯೂ ಹೇಗೆ ಪರಿವರ್ತಿಸಬಹುದು ? ಉದಾಹರಿಸಿ.

## ೧೨. ಸೋಪಾಧಿಕ ಮತ್ತು ಪಕ್ಷಾಂತರ ಅನುಮಾನಗಳು

## (Hypothetical and Disjunctive syllogisms)

ನಾವು ಇದುವರೆಗೂ ನಿರುಪಾಧಿಕ ಪ್ರತಿಜ್ಞೆಗಳ (Categorical Propositions)ನ್ನು ಆಧಾರವಾಗಿ ಉಳ್ಳ ಅನುಮಾನವನ್ನು ಕುರಿತು ಪ್ರಸ್ತಾಪ ಮಾಡಿರುತ್ತೇವೆ. ಈಗ ಸೋಪಾಧಿಕ ಪ್ರತಿಜ್ಞೆ (Hypothetical Propositions) ಯನ್ನಾಗಲಿ, ಪಕ್ಷಾಂತರ ಪ್ರತಿಜ್ಞೆ (Disjunctive Proposition)ಯನ್ನಾಗಲಿ ಆಧಾರವಾಕ್ಯವಾಗಿ ಉಳ್ಳ ಅನುಮಾನರೂಪಗಳನ್ನು ಪರಿಚಯಮಾಡಿಕೊಳ್ಳೋಣ. ಸೋಪಾಧಿಕ ಪ್ರತಿಜ್ಞೆಯನ್ನು ಒಂದು ಆಧಾರವಾಕ್ಯವಾಗಿ ಉಳ್ಳ ಅನುಮಾನಕ್ಕೆ ಸೋಪಾಧಿಕ ಅನುಮಾನ (Hypothetical syllogism) ವೆಂದೂ ಪಕ್ಷಾಂತರ ಪ್ರತಿಜ್ಞೆಯನ್ನು ಒಂದು ಆಧಾರವಾಕ್ಯವಾಗಿ ಉಳ್ಳ ಅನುಮಾನಕ್ಕೆ ಪಕ್ಷಾಂತರ ಅನುಮಾನ (Disjunctive syllogism) ವೆಂದೂ ಹೆಸರು.

### I. ಸೋಪಾಧಿಕನ್ಯಾಯ

ನಿರುಪಾಧಿಕ ನ್ಯಾಯದಲ್ಲಿರುವಂತೆಯೇ ಸೋಪಾಧಿಕ ನ್ಯಾಯದಲ್ಲೂ ಮೂರು ಅವಯವಗಳಿವೆ. ಅವುಗಳಲ್ಲಿ ಮೊದಲನೆಯದು ಸೋಪಾಧಿಕ ಪ್ರತಿಜ್ಞೆ, ಎರಡನೆಯದು ನಿರುಪಾಧಿಕ ಪ್ರತಿಜ್ಞೆ, ಕೊನೆಯದು ನಿರ್ಣಯ. ಅದೂ ನಿರುಪಾಧಿಕ ಪ್ರತಿಜ್ಞೆಯಾಗಿರುತ್ತದೆ. ಒಂದು ಉದಾಹರಣೆಯನ್ನು ಕೊಟ್ಟು ಇದನ್ನು ವಿಶದಪಡಿಸಬಹುದು.

ಬೆಂಕಿ ಇದ್ದರೆ ಶಾಖವಿರುತ್ತದೆ
ಬೆಂಕಿ ಇದೆ
∴ ಶಾಖವಿದೆ.

ಮೇಲಿನ ಉದಾಹರಣೆಯಲ್ಲಿ ಮೊದಲನೆಯ ಆಧಾರವಾಕ್ಯ ಸೋಪಾಧಿಕ ಪ್ರತಿಜ್ಞಾರೂಪವಾಗಿರುತ್ತದೆ, ಎರಡನೆಯ ಪ್ರತಿಜ್ಞೆ ನಿರುಪಾಧಿಕ ಪ್ರತಿಜ್ಞೆ

ಯಾಗಿರುತ್ತದೆ. ಸೋಪಾಧಿಕ ಪ್ರತಿಜ್ಞೆಯಲ್ಲಿ ಎರಡು ಭಾಗಗಳಿವೆ. ಮೊದಲನೆಯ ಭಾಗಕ್ಕೆ ಪೂರ್ವಪದ ಅಥವಾ ಪೂರ್ವಗತಪದ (Antecedent) ಎಂದು ಹೆಸರು. ಎರಡನೆಯ ಭಾಗಕ್ಕೆ ಉತ್ತರಪದ (Consequent) ಎಂದು ಹೆಸರು. ಪೂರ್ವಪದವು ಉಪಾಧಿ (Condition) ಯನ್ನು ಒಳಗೊಂಡ ಪದ. ಉತ್ತರಪದವು ಪರಿಣಾಮ (Consequent) ವನ್ನು ಒಳಗೊಂಡ ಪದ. 'ಬೆಂಕಿ ಇದ್ದರೆ' ಎಂಬುದು ಪೂರ್ವಪದ, ಶಾಖ ಇರುತ್ತದೆ ಎಂಬುದು ಉತ್ತರಪದ. 'ಇದ್ದರೆ' ಎಂಬುದು ಉಪಾಧಿಯನ್ನು ಸೂಚಿಸುತ್ತದೆ.

ಈ ನ್ಯಾಯದ ಸಂಜ್ಞಾರೂಪ ಎರಡು ವಿಧವಾಗಿ ಇರಬಹುದು

(೧) A ಆದರೆ ಆಗ B
A ಆಗಿದೆ
∴ B.

(೨) A ಯು B ಆದರೆ, C ಯು D ಆಗುತ್ತದೆ.
A ಯು B ಆಗಿದೆ
∴ C ಯು D ಆಗಿರುತ್ತದೆ

ಸೋಪಾಧಿಕನ್ಯಾಯದ ಮೂಲಕ ನಾವು ಅಸ್ತ್ಯರ್ಥಕ ನಿರ್ಣಯವನ್ನು ಪಡೆಯಬಹುದು ಅಥವಾ ನೇತ್ಯರ್ಥಕ ನಿರ್ಣಯವನ್ನು ಪಡೆಯಬಹುದು. ಅಸ್ತ್ಯರ್ಥಕ ನಿರ್ಣಯವನ್ನು ಸಾಧಿಸಬಲ್ಲ ಸೋಪಾಧಿಕ ನ್ಯಾಯರೂಪಕ್ಕೆ ಮೋಡಸ್ ಪೊನೆನ್ಸ್ (Modus Ponens) ಎಂದೂ ನೇತ್ಯರ್ಥಕ ನಿರ್ಣಯವನ್ನು ಸಾಧಿಸಬಲ್ಲ ಸೋಪಾಧಿಕ ನ್ಯಾಯರೂಪಕ್ಕೆ ಮೋಡಸ್ ಟೊಲೆನ್ಸ್ (Modus Tollens) ಎಂದೂ ಹೆಸರು.

## ಮೋಡಸ್ ಪೊನೆನ್ಸ್ ರೂಪ

A ಆದರೆ ಆಗ B
A ಆಗಿದೆ
∴ B

ಅಥವಾ

A ಯು B ಆದರೆ, C ಯು D ಆಗಿರುತ್ತದೆ
C ಯು D ಆಗಿರುತ್ತದೆ
∴ A ಯು B ಆಗಿದೆ

## ಮೋಡಸ್ ಟೊಲೆನ್ಸ್

| | | |
|---|---|---|
| A ಆದರೆ ಆಗ B ಆಗಿರುತ್ತದೆ | | A ಯು B ಆದರೆ C ಯು D ಆಗಿರುತ್ತದೆ |
| | ಅಥವಾ | |
| B ಆಗಿರುವುದಿಲ್ಲ | | C ಯು D ಆಗಿರುವುದಿಲ್ಲ |
| ∴ A ಆಗಿರುವುದಿಲ್ಲ | | ∴ A ಯು B ಆಗಿರುವುದಿಲ್ಲ |

ಸೋಪಾಧಿಕನ್ಯಾಯದ ನಿಯಮಗಳು ಎರಡು. (೧) ಪೂರ್ವಭಾಗದಲ್ಲಿರುವುದನ್ನು ಸ್ಥಿರೀಕರಿಸು (Affirm). (೨) ಉತ್ತರಭಾಗದಲ್ಲಿರುವುದನ್ನು ನಿರಾಕರಿಸು (Deny). ಹಾಗೆ ಪೂರ್ವಭಾಗದಲ್ಲಿರುವುದನ್ನು ಸ್ಥಿರೀಕರಿಸದೆ ನಿರಾಕರಿಸಿದರೆ, ಉತ್ತರಭಾಗದಲ್ಲಿರುವುದನ್ನು ನಿರಾಕರಿಸದೆ ಸ್ಥಿರೀಕರಿಸಿದರೆ ಅನುಮಾನ ದೋಷಯುತವಾಗುತ್ತದೆ.

ಪೂರ್ವಭಾಗವನ್ನು ಸ್ಥಿರೀಕರಿಸಿ ಬೆಂಕಿ ಇದೆ ಎಂದು ಹೇಳಿದಾಗ, ನಾವು ಶಾಖ ಇದೆ ಎಂಬ ಉತ್ತರಭಾಗವನ್ನು ಸ್ಥಿರೀಕರಿಸಲೇಬೇಕು. ಆದರೆ ಉತ್ತರಭಾಗವಾದ 'ಶಾಖ' ಇದೆ ಎಂಬುದನ್ನು ಸ್ಥಿರೀಕರಿಸಿದರೆ ಬೆಂಕಿ ಇದೆ ಎಂಬುದನ್ನು ಸ್ಥಿರೀಕರಿಸಲಾಗುವುದಿಲ್ಲ. ಏಕೆಂದರೆ ಶಾಖವಿರುವುದಕ್ಕೆ ಬೆಂಕಿಯೊಂದೇ ಉಪಾಧಿಯಲ್ಲ, ಇತರ ಉಪಾಧಿಗಳೂ (Conditions) ಇರಬಹುದು. ಒಂದು ಕೊಠಡಿಯಲ್ಲಿ ಬೆಂಕಿ ಹಚ್ಚಿ ಅದನ್ನು ಶಾಖವಾಗಿ ಇಡಬಹುದು. ಬೆಂಕಿ ಹಚ್ಚದೆಯೆ, ಕೊಳವೆಗಳ ಮೂಲಕ ಹಬೆಯನ್ನು ಹಾಯಿಸಿ ಕೊಠಡಿಯನ್ನು ಶಾಖವಾಗಿ ಇಡಬಹುದು. ಆದ್ದರಿಂದ ಕೊಠಡಿಯಲ್ಲಿ ಶಾಖವಿದೆಯೆಂದು ಸ್ಥಿರಪಡಿಸಿದಾಗ ಅಲ್ಲಿ ಬೆಂಕಿ ಇದೆಯೆಂದು ಸ್ಥಿರಪಡಿಸಲಾಗುವುದಿಲ್ಲ. ಹಾಗೆಯೇ ಪೂರ್ವಭಾಗವನ್ನು ನಿರಾಕರಿಸಿದಾಗ ಉತ್ತರಭಾಗವನ್ನು ನಿರಾಕರಿಸಲಾಗುವುದಿಲ್ಲ. ಬೆಂಕಿ ಇಲ್ಲ ಎಂದು ಹೇಳಿದಾಗ ಶಾಖವಿಲ್ಲ ಎಂದು ಸ್ಥಿರಪಡಿಸಲಾಗುವುದಿಲ್ಲ. ಏಕೆಂದರೆ ಬೆಂಕಿ ಇಲ್ಲದಿದ್ದರೂ ಶಾಖವಿರಬಹುದು. ಆದರೆ ಪೂರ್ವಭಾಗ ಒಳಗೊಂಡಿರುವ ಉಪಾಧಿ ಉತ್ತರಪದ ಒಳಗೊಂಡಿರುವ ಪರಿಣಾಮಕ್ಕೆ ಅತ್ಯಗತ್ಯವಾದ ಪಕ್ಷದಲ್ಲಿ, ಉತ್ತರಭಾಗವನ್ನು ಸ್ಥಿರೀಕರಿಸಿದರೆ ಪೂರ್ವಭಾಗವನ್ನೂ ಸ್ಥಿರೀಕರಿಸಬಹುದು. ಪೂರ್ವಭಾಗವನ್ನು ನಿರಾಕರಿಸಿದಾಗ ಉತ್ತರಭಾಗವನ್ನೂ ನಿರಾಕರಿಸಬಹುದು. ಉದಾಹರಣೆಗಾಗಿ,

ತ್ರಿಕೋನದ ಎರಡು ಪಾರ್ಶ್ವಗಳು ಸಮನಾಗಿದ್ದರೆ ಅದರ ಎದುರಿಗಿರುವ ಕೋನಗಳೂ ಸಮನಾಗಿರುತ್ತವೆ.

ಎದುರು ಕೋನಗಳು ಸಮನಾಗಿರುತ್ತವೆ

∴ ತ್ರಿಕೋನದ ಎರಡು ಪಾರ್ಶ್ವಗಳು ಸಮನಾಗಿರುತ್ತದೆ.

ತ್ರಿಕೋನದ ಎರಡುಭಾಗಗಳು ಸಮನಾಗಿದ್ದರೆ ಅವುಗಳ ಎದುರಾಗಿ ಇರುವ ಕೋನಗಳು ಸಮನಾಗಿರುತ್ತವೆ.

ತ್ರಿಕೋನದ ಎರಡು ಭಾಗಗಳು ಸಮನಾಗಿಲ್ಲ

∴ ತ್ರಿಕೋನದ ಎರಡು ಕೋನಗಳು ಸಮನಾಗಿಲ್ಲ

**ನಿರುಪಾಧಿಕ ಮತ್ತು ಸೋಪಾಧಿಕನ್ಯಾಯಗಳ ಸಂಬಂಧ:** ನಿರುಪಾಧಿಕ ಮತ್ತು ಸೋಪಾಧಿಕನ್ಯಾಯಗಳ ರೂಪ ಬೇರೆ ಬೇರೆಯಾಗಿ ಕಂಡರೂ ಅವು ಒಳಗೊಂಡಿರುವ ಅನುಮಾನಕ್ರಿಯೆಯ ಮೂಲ ಒಂದೇ. ಇವೆರಡು ನ್ಯಾಯಗಳಲ್ಲೂ ಎರಡು ಬೇರೆ ಬೇರೆಯಾದ ವಿಷಯಗಳಿಗೆ ಸಂಬಂಧವೇರ್ಪಡಿಸುವ ಸಾಮಾನ್ಯ ತತ್ತ್ವ (Universal principle) ಆಧಾರ. ಈ ಸಾಮಾನ್ಯ ತತ್ವವು ಮಧ್ಯವರ್ತಿಯಾಗಿ ಕೆಲಸಮಾಡಿ ನಾವು ಒಂದು ವಿಷಯದಿಂದ ಇನ್ನೊಂದಕ್ಕೆ ದಾಟಲು ಸಹಾಯಮಾಡುತ್ತದೆ. ಇದು ಇದ್ದ ವಿನಾ ನಿರುಪಾಧಿಕನ್ಯಾಯವಾಗಲಿ ಸೋಪಾಧಿಕನ್ಯಾಯವಾಗಲಿ ಸಾಧ್ಯವಿಲ್ಲ. ಎರಡು ವಿಷಯಗಳಿಗೆ ಮಧ್ಯವರ್ತಿಯಾದ ಸಾಮಾನ್ಯ ತತ್ತ್ವವಿದ್ದರೆ ಅನುಮಾನ ಸಿದ್ಧಿಸುತ್ತದೆ. ನಾವು ಅದಕ್ಕೆ ಯಾವ ರೂಪ ಬೇಕಾದರೂ ಕೊಡಬಹುದು. ಸೋಪಾಧಿಕ ರೂಪದಲ್ಲಿ ಹೇಳಿದ್ದನ್ನೇ ನಿರುಪಾಧಿಕರೂಪದಲ್ಲಿ ಹೇಳಬಹುದು; ನಿರುಪಾಧಿಕರೂಪದಲ್ಲಿ ಹೇಳಿದ್ದನ್ನು ಸೋಪಾಧಿಕರೂಪದಲ್ಲೂ ಹೇಳಬಹುದು.

**ಮೋಡಸ್ ಪೊನೆನ್ಸ್:**

ಜಾಲಿಮರವಾಗಿದ್ದರೆ ಅದರಲ್ಲಿ ಮುಳ್ಳು ಇರುತ್ತದೆ
ಇದು ಜಾಲಿಮರ

∴ ಇದರಲ್ಲಿ ಮುಳ್ಳು ಇರುತ್ತದೆ.

**ಅದರ ನಿರುಪಾಧಿಕರೂಪ**

M A P ಎಲ್ಲ ಜಾಲಿಮರಗಳೂ ಮುಳ್ಳು ಉಳ್ಳವಾಗಿರುತ್ತವೆ
S A M ಇದು ಜಾಲಿಮರ

S A P ∴ ಇದರಲ್ಲಿ ಮುಳ್ಳು ಇರುತ್ತದೆ.

ಇದು ಮೊದಲನೆಯ ಆಕೃತಿಯ ಬಾರ್ಬರಾ ರೂಪ.

ಹಾಗೆಯೇ ಮೋಡಸ್ ಟೊಲೆನ್ಸ್ ರೂಪವನ್ನೂ ನಿರುಪಾಧಿಕರೂಪವಾಗಿ ಪರಿವರ್ತಿಸಬಹುದು

**ಮೋಡಸ್ ಟೊಲೆನ್ಸ್ :**

ಜಾಲಿಮರವಾಗಿದ್ದರೆ ಅದರಲ್ಲಿ ಮುಳ್ಳು ಇರುತ್ತದೆ.
ಇದರಲ್ಲಿ ಮುಳ್ಳು ಇಲ್ಲ
∴ ಇದು ಜಾಲಿ ಮರವಲ್ಲ

ಅದರ ನಿರುಪಾಧಿಕರೂಪ

M A P ಎಲ್ಲ ಜಾಲಿಮರಗಳೂ ಮುಳ್ಳು ಉಳ್ಳವಾಗಿರುತ್ತವೆ
S e M ಇದು ಮುಳ್ಳು ಉಳ್ಳದ್ದಾಗಿಲ್ಲ

∴ ಇದು ಜಾಲಿ ಮರವಲ್ಲ.

ಸೋಪಾಧಿಕನ್ಯಾಯ ದೋಷಯತವಾಗಿದ್ದರೆ ಅದಕ್ಕೆ ಸಮಾನವಾದ ನಿರುಪಾಧಿಕರೂಪವೂ ದೋಷಯುತವಾಗಿರುತ್ತದೆ.

ಜಾಲಿಮರವಾದರೆ ಅದು ಮುಳ್ಳು ಉಳ್ಳದ್ದಾಗಿರುತ್ತದೆ
ಇದು ಜಾಲಿ ಮರವಲ್ಲ
∴ ಇದು ಮುಳ್ಳು ಉಳ್ಳದ್ದಾಗಿಲ್ಲ.

ಸೋಪಾಧಿಕನ್ಯಾಯದ ನಿಯಮವನ್ನು ಉಲ್ಲಂಘಿಸಿರುವುದರಿಂದ ಈ ಸೋಪಾಧಿಕನ್ಯಾಯ ಸಾಧುವಾದದ್ದಲ್ಲ. ಇದು ಪೂರ್ವಭಾಗವನ್ನು ನಿರಾಕರಿಸುತ್ತದೆ. ಪೂರ್ವಭಾಗವನ್ನು ನಿರಾಕರಿಸಿದರೆ ಉತ್ತರಭಾಗವನ್ನು ನಿರಾಕರಿಸಲಾಗುವುದಿಲ್ಲ. ಜಾಲಿಮರವಲ್ಲದಿದ್ದ ಮಾತ್ರಕ್ಕೆ ಅದು ಮುಳ್ಳು ಉಳ್ಳದ್ದಲ್ಲ ಎಂದು ಹೇಳಲಾಗುವುದಿಲ್ಲ. ಏಕೆಂದರೆ ಜಾಲಿಮರಗಳಲ್ಲದೆ ಇತರ ಮರಗಳೂ ಮುಳ್ಳು ಉಳ್ಳವಾಗಿರುತ್ತವೆ. ಅದು ಜಾಲಿಮರವಾಗಿಲ್ಲದೆ ಈಚಲಮರವಾಗಿರಬಹುದು. ಅದು ಜಾಲಿಮರವಾಗಿಲ್ಲದ್ದರಿಂದ ಅದರಲ್ಲಿ ಮುಳ್ಳುಗಳಿಲ್ಲ ಎಂದು ಹೇಳುವುದು ಸರಿಯಲ್ಲ.

ಈ ಸೋಪಾಧಿಕರೂಪವನ್ನು ನಿರುಪಾಧಿಕರೂಪವಾಗಿ ಪರಿವರ್ತಿಸಿದಾಗಲೂ ಅದರಲ್ಲಿ ದೋಷ ಕಂಡುಬರುತ್ತದೆ.

M A P ಎಲ್ಲ ಜಾಲಿಮರಗಳೂ ಮುಳ್ಳು ಉಳ್ಳವಾಗಿರುತ್ತವೆ
S e M ಇದು ಜಾಲಿಮರವಲ್ಲ

∴ S e P ಆದ್ದರಿಂದ ಇದು ಮುಳ್ಳು ಉಳ್ಳದ್ದಾಗಿಲ್ಲ.

ಈ ನ್ಯಾಯರೂಪದಲ್ಲಿ ಕಾಣಬರುವ ದೋಷ ಸಾಧ್ಯಪದದ ದೋಷ. (Illicit major). ಸಾಧ್ಯಪದವು ನಿರ್ಣಯದಲ್ಲಿ ಪೂರ್ಣ ನಿರ್ದೇಶನವ್ಯಾಪ್ತಿ ಪಡೆದಿದೆ. ಆದರೆ ಸಾಧ್ಯಪ್ರತಿಜ್ಞೆಯಲ್ಲಿ ಪೂರ್ಣ ನಿರ್ದೇಶನವ್ಯಾಪ್ತಿ ಪಡೆದಿರುವುದಿಲ್ಲ. ನಿರುಪಾಧಿಕ ಅನುಮಾನದ ನಾಲ್ಕನೆಯ ನಿಯಮಕ್ಕನುಸಾರವಾಗಿ ಸಾಧ್ಯಪದವು ಸಾಧ್ಯಪ್ರತಿಜ್ಞೆಯಲ್ಲಿ ಪೂರ್ಣ ನಿರ್ದೇಶನ ವ್ಯಾಪ್ತಿಪಡೆದವಿನಾ ನಿರ್ಣಯದಲ್ಲಿ ಪೂರ್ಣ ನಿರ್ದೇಶನವ್ಯಾಪ್ತಿ ಪಡೆದಿರಕೂಡದು. ಈ ನಿಯಮಕ್ಕೆ ವ್ಯತಿರಿಕ್ತವಾಗಿ ಮೇಲಿನ ಉದಾಹರಣೆಯಲ್ಲಿ ಸಾಧ್ಯಪದ ಸಾಧ್ಯವಾಕ್ಯದಲ್ಲಿ ಪೂರ್ಣವ್ಯಾಪನೆ ಪಡೆಯದಿದ್ದರೂ ನಿರ್ಣಯದಲ್ಲಿ ಅದು ಪೂರ್ಣ ನಿರ್ದೇಶನ ವ್ಯಾಪ್ತಿ ಪಡೆದಿದೆ.

ಹಾಗೆಯೇ ಅಸಾಧುವಾದ ಮೋಡೆಸ್ ಟೊಲೆನ್ಸ್ ರೂಪವನ್ನು ನಿರುಪಾಧಿಕರೂಪವಾಗಿ ಪರಿವರ್ತಿಸಿದಾಗಲೂ ಅದು ಅಸಾಧುವಾಗಿರುತ್ತದೆ.

P a M ಎಲ್ಲ ಜಾಲಿಮರಗಳೂ ಮುಳ್ಳು ಉಳ್ಳವಾಗಿರುತ್ತವೆ.
S a M ಇದರಲ್ಲಿ ಮುಳ್ಳುಗಳಿವೆ.

---

∴ S a P ಇದು ಜಾಲಿಮರ

ಇದರಲ್ಲಿ ಮಧ್ಯವರ್ತಿಪದ ದೋಷಯುತವಾಗಿದೆ. ಆಧಾರವಾಕ್ಯಗಳಲ್ಲೊಂದರಲ್ಲೂ ಮಧ್ಯವರ್ತಿಪದ ಪೂರ್ಣ ನಿರ್ದೇಶನವ್ಯಾಪ್ತಿ ಪಡೆದಿರುವುದಿಲ್ಲ. ಈ ನ್ಯಾಯ ನಿರುಪಾಧಿಕ ಅನುಮಾನದ ಮೊದಲನೆಯ ನಿಯಮವನ್ನು ಉಲ್ಲಂಘಿಸುತ್ತದೆ. ಆದ್ದರಿಂದ ಇದು ಅಸಾಧು. ಹೀಗೆ ಸೋಪಾಧಿಕ ನಿರುಪಾಧಿಕ ನ್ಯಾಯಗಳ ಮೂಲತತ್ತ್ವ ಒಂದೇ ಆದರೂ ಅವೆರಡನ್ನೂ ಪ್ರತ್ಯೇಕಿಸಬೇಕು. ನಿರುಪಾಧಿಕ ನ್ಯಾಯವು ವಸ್ತುಗಳ ನಿರ್ದೇಶನಕ್ಕೆ ಹೆಚ್ಚು ಗಮನ ಕೊಡುತ್ತದೆ. ಅವುಗಳ ಗುಣಗಳಿಗಿರುವ ಸಂಬಂಧಕ್ಕೆ ಹೆಚ್ಚು ಗಮನ ಕೊಡುವುದಿಲ್ಲ. ಸೋಪಾಧಿಕನ್ಯಾಯವಾದರೋ ವಸ್ತುಗಳ ಗುಣಗಳಿಗಿರುವ ಸಂಬಂಧಕ್ಕೆ ಹೆಚ್ಚು ಗಮನ ಕೊಡುತ್ತದೆ. ಆದ್ದರಿಂದ ಈ ಸಂಬಂಧಗಳನ್ನು ವ್ಯಕ್ತಪಡಿಸುವುದನ್ನೇ ಮುಖ್ಯ ಗುರಿಯಾಗಿಟ್ಟುಕೊಂಡಿರುವ ಶಾಸ್ತ್ರಗಳಲ್ಲಿ ಸೋಪಾಧಿಕ ನ್ಯಾಯಕ್ಕೆ ಹೆಚ್ಚು ಪ್ರಾಶಸ್ತ್ಯ. ಮೇಲೆ ಕೊಟ್ಟಿರುವ ಸೋಪಾಧಿಕ ಅನುಮಾನದ ಉದಾಹರಣೆಗಳಲ್ಲಿ ಮೊದಲನೆಯ ಆಧಾರವಾಕ್ಯ ಸೋಪಾಧಿಕ ಪ್ರತಿಜ್ಞೆ, ಎರಡನೆಯದು ನಿರುಪಾಧಿಕ ಪ್ರತಿಜ್ಞೆ, ಮೂರನೆಯದೂ ನಿರುಪಾಧಿಕ ಪ್ರತಿಜ್ಞೆ. ಇಲ್ಲಿ ಸೋಪಾಧಿಕ ನಿರುಪಾಧಿಕ ಪ್ರತಿಜ್ಞೆಗಳು

ಜೆರೆತಿವೆ. ಆದ್ದರಿಂದ ಇದನ್ನು ಮಿಶ್ರ ಸೋಪಾಧಿಕನ್ಯಾಯ (Mixed Hypothetical Syllogism) ವೆಂದು ಕರೆದಿರುತ್ತಾರೆ. ಕೆಲವು ಪಾಶ್ಚಾತ್ಯ ತಾರ್ಕಿಕರು ಮೂರು ವಾಕ್ಯಗಳೂ ಸೋಪಾಧಿಕ ಪ್ರತಿಜ್ಞೆಗಳಾಗಿರುವ ಶುದ್ಧ ಸೋಪಾಧಿಕ ಅನುಮಾನರೂಪವನ್ನು ವಿವರಿಸಿರುತ್ತಾರೆ. ಆ ರೂಪ ಹೀಗಿರುತ್ತದೆ:

C ಯು D ಆಗಿದ್ದರೆ, E ಯು F ಆಗಿರುತ್ತದೆ
A ಯು B ಆಗಿದ್ದರೆ, C ಯು D ಆಗಿರುತ್ತದೆ

∴ A ಯು B ಆಗಿದ್ದರೆ, E ಯು F ಆಗಿರುತ್ತದೆ

C ಯು D ಆಗಿದ್ದರೆ, E ಯು F ಆಗಿರುತ್ತದೆ
A ಯು B ಆಗಿದ್ದರೆ, E ಯು F ಆಗಿರುವುದಿಲ್ಲ

∴ A ಯು ಬಿ ಆಗಿದ್ದರೆ, C ಯು D ಆಗಿರುವುದಿಲ್ಲ

ಕೆಲವು ಸೋಪಾಧಿಕನ್ಯಾಯಗಳಲ್ಲಿ ಪೂರ್ವಭಾಗದ ವಿಶೇಷ್ಯಪದ ಅಥವಾ ಉತ್ತರಭಾಗದ ವಿಶೇಷ್ಯಪದ ಅಥವಾ ಎರಡೂ ಪರಿಮಾಣಸೂಚಕವಾದ 'ಎಲ್ಲ', 'ಕೆಲವು' ಎಂಬ ಪದಗಳಿಂದ ಕೂಡಿರಬಹುದು. 'ಎಲ್ಲ A ಗಳೂ B ಗಳಾದರೆ, ಕೆಲವು C ಗಳು D ಗಳಾಗಿರುತ್ತವೆ. ಕೆಲವು A ಗಳು B ಗಳಾಗಿದ್ದರೆ, ಕೆಲವು C ಗಳು D ಗಳಾಗಿರುವುದಿಲ್ಲ.' ಹೀಗೆ ಪೂರ್ವಭಾಗದ ಉತ್ತರಭಾಗದ ವಿಶೇಷ್ಯಪದಗಳು ಪರಿಮಾಣ ಹೊಂದಿದ ನ್ಯಾಯರೂಪದಲ್ಲಿ ನಿರ್ಣಯದಲ್ಲಿ ಪೂರ್ವಭಾಗವನ್ನು ನಿರಾಕರಿಸುವಾಗ ಆ ನಿರಾಕರಣೆಯು ರೂಪ ಮಿತವಿರೋಧ (Contradictory) ರೂಪವಾಗಿರಬೇಕು, ಅತ್ಯಂತ ವಿರೋಧ ರೂಪ (Contrary) ಆಗಿರಕೂಡದು. ಇದಕ್ಕೆ ವಿರುದ್ಧವಾಗಿ ಅದು ಅತ್ಯಂತ ವಿರೋಧರೂಪವಾದರೆ ಆ ನ್ಯಾಯ ಅಸಾಧುವಾಗುತ್ತದೆ.

ಎಲ್ಲ A ಗಳೂ B ಗಳಾಗಿದ್ದರೆ ಕೆಲವು C ಗಳು D ಗಳಾಗಿರುತ್ತದೆ
ಯಾವ C ಯೂ D ಆಗಿರುವುದಿಲ್ಲ

∴ ಕೆಲವು A ಗಳು B ಗಳಾಗಿರುವುದಿಲ್ಲ

ಮೇಲಿನ ಉದಾಹರಣೆಯಲ್ಲಿ ನಿರ್ಣಯದಲ್ಲಿ ಪೂರ್ವಭಾಗದ ನಿರಾಕರಣೆ ಮಿತವಿರೋಧ ರೂಪವಾಗಿರುತ್ತದೆ. ಇದು ಸಾಧುರೂಪ. ನಿರ್ಣಯ ಹೀಗಿರದೆ

ಯಾವ A ಯೂ B ಆಗಿರುವುದಿಲ್ಲ ಎಂಬ ಅತ್ಯಂತ ವಿರೋಧರೂಪ ಪಡೆದರೆ ಆ ನ್ಯಾಯ ಅಸಾಧುವಾಗುತ್ತದೆ. ಅಂಥ ಅಸಾಧುನ್ಯಾಯಕ್ಕೆ ಕೆಳಗೆ ಕೊಟ್ಟಿರುವ ನ್ಯಾಯ ಉದಾಹರಣೆ.

ಎಲ್ಲರಿಗೂ ಪರಿಪೂರ್ಣತೆಯನ್ನು ಪಡೆಯಲು ಸಾಧ್ಯವಾದರೆ ಕೆಲವರಾದರೂ ಪರಿಪೂರ್ಣತೆಯನ್ನು ಪಡೆಯುತ್ತಿದ್ದರು.

ಯಾರೂ ಪರಿಪೂರ್ಣತೆಯನ್ನು ಪಡೆದಿಲ್ಲ

∴ ಯಾರೂ ಪರಿಪೂರ್ಣತೆಯನ್ನು ಪಡೆಯಲು ಸಾಧ್ಯವಿಲ್ಲ.

ನಾವು ಕಂಡಂತೆ ಇದುವರೆಗೆ ಯಾರೂ ಪರಿಪೂರ್ಣತೆ ಪಡೆಯದಿರ ಬಹುದು. ಆದ್ದರಿಂದ ಯಾರಿಗೂ ಯಾವ ಕಾಲದಲ್ಲೂ ಪರಿಪೂರ್ಣತೆ ಪಡೆಯಲು ಸಾಧ್ಯವಿಲ್ಲ ಎಂದು ಹೇಳಲಾಗುವುದಿಲ್ಲ. ಕೆಲವರಿಗೆ ಅದು ಸಾಧ್ಯ ವಾಗಿಲ್ಲ ಎಂದು ಮಾತ್ರ ಹೇಳಬಹುದು.

## II. ಪಕ್ಷಾಂತರಾನುಮಾನ

(Disjunctive Syllogism): ಪಕ್ಷಾಂತರ ನ್ಯಾಯವು ಪಕ್ಷಾಂತರ ಪ್ರತಿಜ್ಞೆ (Disjunctive Proposition) ಯನ್ನು ಸಾಧ್ಯವಾಕ್ಯ (Major premise) ವಾಗಿಯೂ, ನಿರುಪಾಧಿಕ ಪ್ರತಿಜ್ಞೆಯನ್ನು (Categorical Proposition) ಪಕ್ಷಪ್ರತಿಜ್ಞೆ (Minor premise) ಯಾಗಿಯೂ ಪಡೆದಿರುತ್ತದೆ. ಅಷ್ಟೇ ಅಲ್ಲ. ಪಕ್ಷಪ್ರತಿಜ್ಞೆ ಸಾಧ್ಯಪ್ರತಿಜ್ಞೆಯಲ್ಲಿ ಸೇರಿರುವ ಪಕ್ಷಾಂತರ ಗಳಲ್ಲಿ ಯಾವುದಾದರೂ ಒಂದನ್ನು ಸ್ಥಿರೀಕರಿಸುತ್ತದೆ (Affirm) ಅಥವಾ (Deny) ನಿರಾಕರಿಸುತ್ತದೆ. ಪಕ್ಷಪ್ರತಿಜ್ಞೆ ಒಂದನ್ನು ಸ್ಥಿರೀಕರಿಸಿದಾಗ ನಿರ್ಣಯವು ಇನ್ನೊಂದನ್ನು ನಿರಾಕರಿಸುತ್ತದೆ, ಪಕ್ಷಪ್ರತಿಜ್ಞೆ ಒಂದನ್ನು ನಿರಾಕರಿಸಿದಾಗ ನಿರ್ಣಯವು ಇನ್ನೊಂದನ್ನು ಸ್ಥಿರೀಕರಿಸುತ್ತದೆ. ಮೊದ ಲನೆಯ ವಾಕ್ಯ ಪಕ್ಷಾಂತರ ರೂಪ ಪಡೆದಿದ್ದ ಮಾತ್ರಕ್ಕೆ ಆ ನ್ಯಾಯವು ಪಕ್ಷಾಂತರನ್ಯಾಯವೆಂದು ತಿಳಿಯಕೂಡದು. ಎರಡನೆಯ ವಾಕ್ಯವು ಪಕ್ಷಗಳಲ್ಲಿ ಒಂದನ್ನು ಸ್ಥಿರೀಕರಿಸಬೇಕು ಅಥವಾ ನಿರಾಕರಿಸಬೇಕು. ಹಾಗೆ ಮಾಡಿದಾಗ ಮಾತ್ರ ಆ ನ್ಯಾಯ ಪಕ್ಷಾಂತರ ನ್ಯಾಯವಾಗುವ ಅರ್ಹತೆಯನ್ನು ಪಡೆದಿರು ತ್ತದೆ. ಅದು ಹಾಗೆ ಮಾಡದಿದ್ದರೆ ಆ ನ್ಯಾಯ ಪಕ್ಷಾಂತರ ನ್ಯಾಯವಾಗ ಲಾರದು. ಉದಾಹರಣೆಗಾಗಿ :

M ಎಂಬುದು X ಅಥವಾ Y ಆಗಿದೆ (ಸಾಧ್ಯವಾಕ್ಯ).
S ಎಂಬುದು M ಆಗಿದೆ (ಪಕ್ಷವಾಕ್ಯ).

∴ S ಎಂಬುದು X ಅಥವಾ Y ಆಗಿರುತ್ತದೆ (ನಿರ್ಣಯ).

ಇಲ್ಲಿ ಪಕ್ಷವಾಕ್ಯ ಯಾವ ಪಕ್ಷವನ್ನೂ ಸ್ಥಿರೀಕರಿಸುವುದೂ ಇಲ್ಲ, ನಿರಾಕರಿಸುವುದೂ ಇಲ್ಲ. ಆದ್ದರಿಂದ ಅದು ಪಕ್ಷಾಂತರ ನ್ಯಾಯವಲ್ಲ. ನಿಜವಾಗಿಯೂ ಅದು ನಿರುಪಾಧಿಕ ನ್ಯಾಯರೂಪ. ಸಾಧ್ಯಪ್ರತಿಜ್ಞೆಯಲ್ಲಿರುವ ಪಕ್ಷಾಂತರ ಭಾಗ ನಿರ್ಣಯದಲ್ಲೂ ತದ್ವತ್ ಪುನರುಕ್ತವಾಗಿದೆ. 'X ಅಥವಾ Y' ಎಂಬ ಭಾಗ ನಿಜವಾಗಿಯೂ ನಿರುಪಾಧಿಕ ಪ್ರತಿಜ್ಞೆಯ ವಿಶೇಷಣ ಭಾಗ. ಅದರ ನಿಜಸ್ವರೂಪ ಹೀಗಿರುತ್ತದೆ.

M ಎಂಬುದು P (X ಅಥವಾ Y) ಆಗಿರುತ್ತದೆ.
S ಎಂಬುದು M ಆಗಿರುತ್ತದೆ

∴ S ಎಂಬುದು P (K ಅಥವಾ Y) ಆಗಿರುತ್ತದೆ

ಒಂದು ನ್ಯಾಯ ಪಕ್ಷಾಂತರನ್ಯಾಯವಾಗಬೇಕಾದರೆ ಸಾಧ್ಯವಾಕ್ಯದಲ್ಲಿರುವ ಪಕ್ಷಾಂತರಗಳಲ್ಲಿ ಒಂದನ್ನು ಪಕ್ಷವಾಕ್ಯ ಸ್ಥಿರೀಕರಿಸಬೇಕು, ಅಥವಾ ನಿರಾಕರಿಸಬೇಕು, ನಿರ್ಣಯದ ಇನ್ನೊಂದು ಭಾಗವನ್ನು ನಿರಾಕರಿಸಬೇಕು ಅಥವಾ ಸ್ಥಿರೀಕರಿಸಬೇಕು. ಪಕ್ಷಾಂತರಗಳಲ್ಲೊಂದನ್ನು ಸ್ಥಿರೀಕರಿಸದ ಅಥವಾ ನಿರಾಕರಿಸಿದ ನ್ಯಾಯ ಪಕ್ಷಾಂತರನ್ಯಾಯವಲ್ಲ. ನಿಜವಾದ ಪಕ್ಷಾಂತರ ನ್ಯಾಯರೂಪಗಳು (Moods) ಎರಡು: (೧) ಪಕ್ಷಾಂತರಗಳಲ್ಲಿ ಒಂದನ್ನು ಪಕ್ಷವಾಕ್ಯದಲ್ಲಿ ಸ್ಥಿರೀಕರಿಸಿ, ನಿರ್ಣಯದಲ್ಲಿ ನಿರಾಕರಿಸುವುದು ಮೊದಲನೆಯ ರೂಪ. ಇದನ್ನು ಮೋಡಸ್ ಪೋನೆಂಡೋ ಟೊಲೆನ್ಸ್ (*Modus ponendo tollens*) ಎಂದು ಪಾಶ್ಚಾತ್ಯ ತಾರ್ಕಿಕರು ಕರೆದಿರುತ್ತಾರೆ. (೨) ಪಕ್ಷಾಂತರಗಳಲ್ಲಿ ಒಂದನ್ನು ಪಕ್ಷವಾಕ್ಯದಲ್ಲಿ ನಿರಾಕರಿಸಿ, ಇನ್ನೊಂದನ್ನು ನಿರ್ಣಯದಲ್ಲಿ ಸ್ಥಿರೀಕರಿಸುವುದು ಎರಡನೆಯ ರೂಪ. ಇದಕ್ಕೆ ಮೋಡಸ್ ಟೊಲೆಂಡೊ ಪೋನೆನ್ಸ್ (*Modus tollendo ponens*) ಎಂದು ಹೆಸರು. ಉದಾಹರಣೆಗಳು:

(೧) ಮೋಡಸ್ ಪೋನೆಂಡೋ ಟೋಲೆನ್ಸ್:

A ಯು B ಆಗಿರುತ್ತದೆ ಅಥವಾ C ಯು D ಆಗಿರುತ್ತದೆ

A ಯು B ಆಗಿರುತ್ತದೆ

∴ C ಯು D ಆಗಿರುವುದಿಲ್ಲ.

ಅಥವಾ

A ಯು B ಆಗಿರುತ್ತದೆ ಅಥವಾ C ಯು D ಆಗಿರುತ್ತದೆ.

C ಯು D ಆಗಿರುತ್ತದೆ

∴ A ಯು B ಆಗಿರುವುದಿಲ್ಲ.

(೨) ಮೋಡಸ್ ಟೋಲೆಂಡೊ ಪೋನೆನ್ಸ್:

A ಯು B ಆಗಿರುತ್ತದೆ ಅಥವಾ C ಯು D ಆಗಿರುತ್ತದೆ

A ಯು B ಆಗಿಲ್ಲ

∴ C ಯು D ಆಗಿರುತ್ತದೆ

ಅಥವಾ

A ಯು B ಆಗಿರುತ್ತದೆ ಅಥವಾ C ಯು D ಆಗಿರುತ್ತದೆ.

C ಯು D ಆಗಿಲ್ಲ

∴ A ಯು B ಆಗಿರುತ್ತದೆ.

ಪಕ್ಷಾಂತರ ಆಧಾರಪ್ರತಿಜ್ಞೆ (Disjunctive premise) ಯಲ್ಲಿ ಕಡ್ಡಾಯವಾಗಿ ಎರಡೇ ಪಕ್ಷಗಳಿರಬೇಕೆಂಬ ನಿರ್ಬಂಧವಿಲ್ಲ. ಎರಡು ಪಕ್ಷಗಳಾದರೂ ಇರಲೇ ಬೇಕು. ಎರಡಕ್ಕಿಂತ ಹೆಚ್ಚಿನ ಪಕ್ಷಗಳಿರಬಹುದು. ಎರಡಕ್ಕಿಂತ ಹೆಚ್ಚಿನ ಪಕ್ಷಗಳುಳ್ಳ ಪಕ್ಷಾಂತರ ನ್ಯಾಯದಲ್ಲಿ, ಅವುಗಳಲ್ಲಿ ಒಂದು ಪಕ್ಷವನ್ನು ಪಕ್ಷವಾಕ್ಯ ಸ್ಥಿರೀಕರಿಸುತ್ತದೆ ಅಥವಾ ನಿರಾಕರಿಸುತ್ತದೆ. ಆಗ ನಿರ್ಣಯ ಉಳಿದ ಪಕ್ಷಗಳನ್ನು ಒಟ್ಟಾಗಿ ನಿರಾಕರಿಸುತ್ತದೆ ಅಥವ ಉಳಿದ ಪಕ್ಷಗಳನ್ನು ಬೇರೆ ಬೇರೆಯಾಗಿ ಸ್ಥಿರೀಕರಿಸುತ್ತದೆ. ಉದಾಹರಣೆ:

A ಯು B ಆಗಿದೆ ಅಥವಾ C ಯು D ಆಗಿದೆ ಅಥವಾ E ಯು F ಆಗಿದೆ

A ಯು B ಆಗಿದೆ

∴ C ಯು D ಆಗಿರುವುದಿಲ್ಲ ಮತ್ತು E ಯು F ಆಗಿರುವುದಿಲ್ಲ.

A ಯು B ಆಗಿದೆ ಅಥವಾ C ಯು D ಆಗಿದೆ ಅಥವಾ E ಯು F ಆಗಿದೆ

A ಯು B ಆಗಿಲ್ಲ

∴ C ಯು D ಆಗಿರುತ್ತದೆ ಅಥವಾ E ಯು F ಆಗಿರುತ್ತದೆ.

ಪಕ್ಷಾಂತರನ್ಯಾಯದ ವಿಚಾರವಾಗಿ ನಾವು ಒಂದು ಮುಖ್ಯ ವಿಷಯವನ್ನು ಗಮನದಲ್ಲಿಟ್ಟುಕೊಳ್ಳಬೇಕು. ಪಕ್ಷಾಂತರವಾಕ್ಯದಲ್ಲಿ ಪಕ್ಷಗಳು ಒಂದನ್ನೊಂದು (Exclude) ಬಹಿಷ್ಕರಿಸಬೇಕು ಮತ್ತು ಪಕ್ಷಗಳು ಒಟ್ಟಾಗಿ

ವಿಶೇಷ್ಯಪದ ಪಡೆಯಬಹುದಾದ ಎಲ್ಲ ಪಕ್ಷಗಳನ್ನೂ ಒಳಗೊಂಡಿರಬೇಕು ; ಆ ಪಕ್ಷಗಳನ್ನು ಬಿಟ್ಟು ಬೇರೆ ಪಕ್ಷ ಇರಕೂಡದು. ಪಕ್ಷಾಂತರನ್ಯಾಯ ಸಾಧುವಾಗಬೇಕಾದರೆ ಪಕ್ಷಗಳು ಒಂದನ್ನೊಂದು ಬಹಿಷ್ಕರಿಸಬೇಕು, ಮತ್ತು ಎಲ್ಲಪಕ್ಷಗಳೂ ಸಾಧ್ಯಪ್ರತಿಜ್ಞೆಯಲ್ಲಿ ಸೇರಿರಬೇಕು. ಆದ್ದರಿಂದ ಪಕ್ಷಾಂತರ ನ್ಯಾಯ ಸಿದ್ಧಿಸಬೇಕಾದರೆ ನಮ್ಮ ಜ್ಞಾನ ಸುವ್ಯವಸ್ಥಿತವಾದ ಜ್ಞಾನವಾಗಿರ ಬೇಕು. ಒಂದು ವಿಶೇಷ್ಯವು ಪಡೆಯಬಹುದಾದ ಎಲ್ಲ ಪಕ್ಷಗಳ ತಿಳಿವೂ ಇರ ಬೇಕು. ಅವು ಒಂದನ್ನೊಂದು ಪೂರ್ಣವಾಗಿ ಬಹಿಷ್ಕರಿಸುತ್ತವೆ ಎಂಬ ತಿಳಿವೂ ಇರಬೇಕು. ಪಕ್ಷಾಂತರನ್ಯಾಯದ ಸಾಧ್ಯವಾಕ್ಯ "ಇದು" ಅಥವಾ "ಅದು" ಎಂದು ಹೇಳಿದಾಗ ಅದು ನಮ್ಮ ಅಜ್ಞಾನವನ್ನು ಪ್ರಕಟಪಡಿಸುತ್ತದೆ ಎಂದು ತೋರಬಹುದು. "'ಇದೋ' ಅಥವಾ 'ಅದೋ' ನನಗೆ ತಿಳಿಯದು" ಎಂದು ಹೇಳಿದಾಗ ಅದು ಜ್ಞಾನಾಭಾವವನ್ನು ವ್ಯಕ್ತಪಡಿಸುತ್ತದೆ ಎಂದು ಹೇಳಬಹುದು. ನಿಜಸ್ಥಿತಿ ಹಾಗಿರುವುದಿಲ್ಲ. ಪಕ್ಷಾಂತರ ನ್ಯಾಯಕ್ಕೆ ವ್ಯವಸ್ಥಿತ ಜ್ಞಾನ ಆಧಾರ. ಈ ತ್ರಿಕೋನ ಮೂರು ಸಮಭುಜಗಳುಳ್ಳದ್ದು, ಅಥವಾ ಎರಡು ಸಮಭುಜಗಳುಳ್ಳದ್ದು, ಅಥವಾ ಮೂರೂ ಅಸಮ ಭುಜಗಳುಳ್ಳದ್ದು ಎಂದು ಹೇಳಿದಾಗ, ತ್ರಿಕೋನ ಪಡೆಯಬಹುದಾದ ಎಲ್ಲ ಪಕ್ಷಗಳನ್ನೂ ತಿಳಿಯದಿದ್ದರೆ ಆ ಪ್ರತಿಜ್ಞೆಯನ್ನು ಮಂಡಿಸುವುದಕ್ಕಾಗುವುದಿಲ್ಲ. ಇದು ಆಮ್ಲ ಅಥವಾ ಕ್ಷಾರ ಎಂದು ಹೇಳುವ ಪಕ್ಷಾಂತರವಾಕ್ಯವು ರಸಾಯನಶಾಸ್ತ್ರ ಜ್ಞಾನವನ್ನು ವ್ಯಕ್ತ ಪಡಿಸುತ್ತದೆ. ಬೇರೆ ಬೇರೆ ರಾಸಾಯನಿಕ ವಸ್ತುಗಳನ್ನು ತಿಳಿದು ಅವುಗಳಿಂದ ಇದನ್ನು ಪ್ರತ್ಯೇಕಿಸಿ ಇದು ರಾಸಾಯನಿಕ ವಸ್ತುಗಳಲ್ಲಿ ಆಮ್ಲ ಅಥವಾ ಕ್ಷಾರವಾಗಿರಬೇಕು ಎಂಬ ಜ್ಞಾನ ಹುಟ್ಟಿದ ವಿನಾ ಈ ಪಕ್ಷಾಂತರವಾಕ್ಯವನ್ನು ಮಂಡಿಸಲಾಗುವುದಿಲ್ಲ. ಪರೀಕ್ಷೆಗಾಗಿ ಇಟ್ಟಿರುವ ಈ ಪದಾರ್ಥದ ದ್ರಾವಣ ದಲ್ಲಿ ಕೆಂಪು ಲಿಟ್ಮಸ್ ಕಾಗದವನ್ನು ಅದ್ದಿದಾಗ ಅದು ನೀಲಿಬಣ್ಣ ಪಡೆದರೆ ಅದು ಆಮ್ಲ ಪದಾರ್ಥ ಎಂದು ಸ್ಥಿರಪಡುತ್ತದೆ. ಅದು ಕ್ಷಾರವಲ್ಲವೆಂದು ನಿರ್ಣಯಮಾಡಬಹುದು. ಪ್ರಾಯೋಗಿಕ ವಿಜ್ಞಾನ (Experimental Science) ದಲ್ಲಿ ಇಂಥ ಪಕ್ಷಾಂತರನ್ಯಾಯ ತುಂಬ ಉಪಯುಕ್ತವಾದದ್ದು. ಇದನ್ನು ಉಪಯೋಗಿಸಿಕೊಂಡು ಆಧುನಿಕ ವೈಜ್ಞಾನಿಕರು ಅನೇಕ ಹೊಸ ವಿಷಯಗಳನ್ನು ಕಂಡುಹಿಡಿದಿರುತ್ತಾರೆ.

ಆದರೆ ಕೆಲವು ವೇಳೆ ಪಕ್ಷಗಳು ಒಂದನ್ನೊಂದು ಪೂರ್ಣವಾಗಿ ಬಹಿಷ್ಕರಿಸು ತ್ತವೆ ಎಂದಾಗಲಿ ಎಲ್ಲ ಪಕ್ಷಗಳನ್ನೂ ನಾವು ಗಣನೆಗೆ ತೆಗೆದುಕೊಂಡಿರುತ್ತೇವೆ ಎಂದಾಗಲಿ ಹೇಳಲಾಗುವುದಿಲ್ಲ. "ಅವನು ಮೋಸಗಾರ ಅಥವಾ ಅವಿವೇಕಿ"

ಎಂದು ಹೇಳಿದಾಗ ಎಲ್ಲ ಪಕ್ಷಗಳನ್ನೂ ನಾವು ಗಣನೆಗೆ ತೆಗೆದುಕೊಳ್ಳದಿರಬಹುದು ಅಥವಾ ಆ ಪಕ್ಷಗಳು ಒಂದನ್ನೊಂದು ಬಹಿಷ್ಕರಿಸದಿರಬಹುದು. ಒಬ್ಬನು ಮೋಸಗಾರನಾಗಿಯೂ ಇರಬಹುದು ಅವಿವೇಕಿಯಾಗಿಯೂ ಇರಬಹುದು. "ಪ್ರತಿಯೊಬ್ಬ ವಿದ್ಯಾರ್ಥಿಯೂ ಜ್ಞಾನದ ಮೇಲಿನ ಆಸೆಯಿಂದ ಕಷ್ಟಪಟ್ಟು ಓದಬಹುದು, ಅಥವಾ ತಂದೆತಾಯಿಗಳ ಉಪಾಧ್ಯಾಯರ ಮೆಚ್ಚುಗೆಯನ್ನು ಪಡೆಯಬೇಕೆಂದು ಕಷ್ಟಪಟ್ಟು ಓದಬಹುದು, ಅಥವಾ ಓದಿದರೆ ಒಳ್ಳೆಯ ಕೆಲಸ ಸಿಕ್ಕುತ್ತದೆ ಎಂದು ಕಷ್ಟಪಟ್ಟು ಓದಬಹುದು." ಆದರೆ ಈ ಮೂರು ಪಕ್ಷಗಳೂ ಒಂದನ್ನೊಂದು ಬಹಿಷ್ಕರಿಸುವುದಿಲ್ಲ. ಇವುಗಳಲ್ಲಿ, ಒಂದು, ಅಥವಾ ಎರಡು, ಅಥವಾ ಮೂರೂ ಒಬ್ಬನು ಕಷ್ಟಪಟ್ಟು ಓದುವುದಕ್ಕೆ ಕಾರಣವಾಗಿರಬಹುದು. ಆದ್ದರಿಂದ ಪಕ್ಷಾಂತರ ಪ್ರತಿಜ್ಞೆಯ ಹೊರರೂಪವನ್ನು ನೋಡಿದ ಮಾತ್ರಕ್ಕೆ ಪಕ್ಷಗಳು ಒಂದನ್ನೊಂದು ಬಹಿಷ್ಕರಿಸುತ್ತವೆಯೆಂದಾಗಲಿ, ಎಲ್ಲ ಪಕ್ಷಗಳೂ ಆ ಪ್ರತಿಜ್ಞೆಯಲ್ಲಿ ಸೇರಿವೆಯೆಂದಾಗಲಿ ಹೇಳಲಾಗುವುದಿಲ್ಲ. ಆ ಪ್ರತಿಜ್ಞೆಯನ್ನು ಒಳಹೊಕ್ಕು ಪರೀಕ್ಷಿಸಬೇಕು. ಪಕ್ಷಾಂತರನ್ಯಾಯದ ಶಾಬ್ದಿಕರೂಪ (Verbal form) ಮುಖ್ಯವಲ್ಲ. ಮುಖ್ಯವಾದದ್ದು ಅದರಲ್ಲಿ ಅಡಗಿರುವ ವಸ್ತುಸ್ಥಿತಿ (Material aspect).

## ಅಭ್ಯಾಸಗಳು (೧೨)

೧. ಸೋಪಾಧಿಕ ಮತ್ತು ನಿರುಪಾಧಿಕನ್ಯಾಯಗಳನ್ನು ಉದಾಹರಣೆಗಳನ್ನು ಕೊಟ್ಟು ವಿವರಿಸಿ.

೨. ನಿರುಪಾಧಿಕನ್ಯಾಯಕ್ಕೂ ಸೋಪಾಧಿಕನ್ಯಾಯಕ್ಕೂ ಇರುವ ಸಂಬಂಧವನ್ನು ತಿಳಿಸಿ. ಸೋಪಾಧಿಕ ನ್ಯಾಯವನ್ನು ನಿರುಪಾಧಿಕ ನ್ಯಾಯವಾಗಿ ಪರಿವರ್ತಿಸಬಹುದೆಂಬುದನ್ನು ಒಂದು ಉದಾಹರಣೆಯ ಮೂಲಕ ಸ್ಪಷ್ಟಪಡಿಸಿ.

೩. "ವೈಜ್ಞಾನಿಕ ನಿಯಮಗಳನ್ನು ತಿಳಿಸುವ ಪ್ರತಿಜ್ಞೆಗಳು ಸ್ವಾಭಾವಿಕವಾಗಿ ಸೋಪಾಧಿಕ ಪ್ರತಿಜ್ಞೆಯ ರೂಪದಲ್ಲಿರುತ್ತವೆ. ಅವುಗಳನ್ನು ತಿಳಿಸಲು ನಿರುಪಾಧಿಕ ರೂಪಕ್ಕಿಂತ ಸೋಪಾಧಿಕರೂಪ ಹೆಚ್ಚು ಸಮರ್ಪಕವಾಗಿ ಕಾಣುತ್ತದೆ" ವಿಮರ್ಶಿಸಿ.

೪. "ಪಕ್ಷಾಂತರ ಅನುಮಾನ ಅಜ್ಞಾನವನ್ನು ಸೂಚಿಸುವಂತೆ ಕಂಡರೂ ಅದು ನಿಜವಾಗಿ ವ್ಯವಸ್ಥಿತಜ್ಞಾನವನ್ನು ಒಳಗೊಂಡಿರುತ್ತದೆ" ಇದನ್ನು ವ್ಯಕ್ತಪಡಿಸಿ.

೫. ಸೋಪಾಧಿಕನ್ಯಾಯದ ನಿಬಂಧನೆಗಳು ಯಾವುವು? ಅವು ಏಕೆ ಆವಶ್ಯಕ ಎಂಬುದನ್ನು ವ್ಯಕ್ತಗೊಳಿಸಿ.

೬. ಕೆಳಗೆ ಕೊಟ್ಟಿರುವ ಸೋಪಾಧಿಕ ವಾದಗಳಲ್ಲಿ ಯಾವುದು ಸಾಧು, ಯಾವುದು ಅಸಾಧು. ಅವುಗಳನ್ನು ನಿರುಪಾಧಿಕವಾದಗಳಾಗಿ ಪರಿವರ್ತಿಸಿ ಅಸಾಧುವಾದವುಗಳಲ್ಲಿ ಕಂಡುಬರುವ ದೋಷಗಳನ್ನು ತಿಳಿಸಿ.

(ಅ) ಒಂದು ದೇಶವು ಅಭ್ಯುದಯದಶೆಯಲ್ಲಿದ್ದಾಗ ಜನರು ಸರ್ಕಾರದಲ್ಲಿ ದೃಢನಂಬಿಕೆ ಪಡೆದಿರುತ್ತಾರೆ. ಈ ದೇಶದ ಜನರು ಸರ್ಕಾರದಲ್ಲಿ ದೃಢನಂಬಿಕೆ ಪಡೆದಿರುತ್ತಾರೆ. ಆದ್ದರಿಂದ ಈ ದೇಶ ಅಭ್ಯುದಯದಶೆಯಲ್ಲಿದೆ.

(ಆ) ನಮ್ಮನ್ನಾಳುವವರು ಜನರ ಯೋಗಕ್ಷೇಮವನ್ನು ರಕ್ಷಿಸುವರೆಂದು ನಂಬಲರ್ಹರಾಗಿದ್ದರೆ ರಾಜನ ಪ್ರಭುತ್ವವು ಅತ್ಯುತ್ತಮ ಸರ್ಕಾರವಾಗುತ್ತದೆ. ಆದರೆ ಅವರು ನಂಬಲರ್ಹರಲ್ಲ.

∴ ರಾಜನ ಪ್ರಭುತ್ವವು ಅತ್ಯುತ್ತಮ ಸರ್ಕಾರವಲ್ಲ.

(ಇ) ನಮ್ಮ ಜೊತೆಯಲ್ಲಿ ಮೋಸಗಾರರಿದ್ದರೆ, ನಾವು ಜೂಜು ಆಡಬಾರದು,
ನಮ್ಮ ಜೊತೆಯಲ್ಲಿ ಮೋಸಗಾರರಿಲ್ಲ.

∴ ಜೂಜಾಟ ಸರಿ.

(ಈ) ಈ ತತ್ತ್ವಶಾಸ್ತ್ರದ ಎಲ್ಲ ವಾದಗಳೂ ಸಾಧುವಾದುವಾದರೆ, ಕೆಲವನ್ನಾದರೂ ಅನೇಕ ತಾತ್ವಿಕರು ಅಂಗೀಕರಿಸುತ್ತಿದ್ದರು.

ಯಾವ ವಾದವನ್ನೂ ಅನೇಕ ತಾತ್ವಿಕರು ಒಪ್ಪಿಕೊಂಡಿರುವುದಿಲ್ಲ.

∴ ಯಾವ ವಾದವೂ ಸಾಧುವಲ್ಲ.

(ಉ) ಅವನು ಪಾಠವನ್ನು ಗಟ್ಟಿಮಾಡಿದ್ದರೆ ಅದನ್ನು ಒಪ್ಪಿಸುತ್ತಾನೆ.
ಅವನು ಅದನ್ನು ಒಪ್ಪಿಸಿರುತ್ತಾನೆ.

∴ ಅವನು ಅದನ್ನು ಗಟ್ಟಿಮಾಡಿರಬೇಕು.

(ಊ) ಅದು ಗೂಗುಟ್ಟುತ್ತದೆ: ಆದ್ದರಿಂದ ಅದು ಗೂಬೆ.

(ಋ) ಅವನು ಮಾತನಾಡುವುದಿಲ್ಲ ಎಂದು ನೀನೇ ಹೇಳುತ್ತೀಯೆ. ಮಾತನಾಡದಿದ್ದರೆ ಸಮ್ಮತಿಸಿದಂತೆಯೇ. ಆದ್ದರಿಂದ ಅವನು ತಪ್ಪನ್ನು ಒಪ್ಪಿಕೊಂಡಿರುತ್ತಾನೆ.

೭. ಈ ವಾದವನ್ನು ವಿಮರ್ಶಿಸಿ.

A ಯು ಸರಿಯಾದ ಬೋಧನೆಪಡೆದಿರುತ್ತಾನೆ ಅಥವಾ ಸೋಮಾರಿಯಾಗಿದ್ದಾನೆ.
ಅವನ ಉಪಾಧ್ಯಾಯ ಗಟ್ಟಿಗನಲ್ಲ.

∴ A ಪರೀಕ್ಷೆಯಲ್ಲಿ ತೇರ್ಗಡೆಹೊಂದದಿದ್ದರೆ ಅವನಲ್ಲಿ ತಪ್ಪೆಣಿಸಬಾರದು.

## ೧೩. ಇಕ್ಕೋಡಿನ ವಾದ—ಡೈಲೆಮ (Dilemma)

ಹಿಂದಿನ ಅಧ್ಯಾಯಗಳಲ್ಲಿ ಸೋಪಾಧಿಕಪ್ರತಿಜ್ಞೆಯನ್ನಾಗಲಿ, ಪಕ್ಷಾಂತರ ಪ್ರತಿಜ್ಞೆಯನ್ನಾಗಲಿ ಒಂದು ಆಧಾರವಾಕ್ಯ (Premise) ವಾಗಿ ಉಳ್ಳ ಸೋಪಾಧಿಕನ್ಯಾಯವನ್ನೂ ಪಕ್ಷಾಂತರನ್ಯಾಯವನ್ನೂ ವಿವರಿಸಲಾಯಿತು. ಆದರೆ ಒಂದೇ ನ್ಯಾಯದಲ್ಲಿ ಸೋಪಾಧಿಕಪ್ರತಿಜ್ಞೆಯನ್ನು ಒಂದು ಆಧಾರ ವಾಕ್ಯವಾಗಿಯೂ, ಪಕ್ಷಾಂತರಪ್ರತಿಜ್ಞೆಯನ್ನು ಇನ್ನೊಂದು ಆಧಾರವಾಕ್ಯ ವಾಗಿಯೂ ಸೇರಿಸಿ ಒಂದು ನಿರ್ಣಯಕ್ಕೆ ಬರಲು ಸಾಧ್ಯ. ಹಾಗೆ ಸೋಪಾಧಿಕ ಮತ್ತು ಪಕ್ಷಾಂತರ ಪ್ರತಿಜ್ಞೆಗಳನ್ನು ಆಧಾರವಾಕ್ಯಗಳಾಗಿ ಸೇರಿಸಿ ನಿರ್ಣಯ ವನ್ನು ಸಾಧಿಸುವ ಸಂಯುಕ್ತ ನ್ಯಾಯ ಸೋಪಾಧಿಕಪಕ್ಷಾಂತರನ್ಯಾಯ[1]. ಸಂಯುಕ್ತ ಸೋಪಾಧಿಕಪಕ್ಷಾಂತರನ್ಯಾಯವನ್ನು ಡೈಲೆಮ ಎಂದು ಕರೆಯು ವುದು ಪಾಶ್ಚಾತ್ಯ ತರ್ಕದಲ್ಲಿ ವಾಡಿಕೆ. ಡೈಲೆಮದಲ್ಲಿ ಸಾಧ್ಯಪ್ರತಿಜ್ಞೆ ಯಾವಾ ಗಲೂ ಸೋಪಾಧಿಕ (Hypothetical) ವಾದದ್ದು, ಪಕ್ಷಪ್ರತಿಜ್ಞೆ ಸಾಮಾನ್ಯ ವಾಗಿ ಪಕ್ಷಾಂತರ (Disjunctive) ವಾದದ್ದು. ನಿತ್ಯಜೀವನದಲ್ಲಿ ಕೆಲವು ವೇಳೆ ನಮ್ಮ ಮುಂದೆ ಎರಡು ಮಾರ್ಗಗಳು ಮಾತ್ರ ಇದ್ದು ಯಾವುದೊಂದು ಮಾರ್ಗದಲ್ಲಿ ಹೋದರೂ ಅವುಗಳ ಪರಿಣಾಮ (Consequences) ಗಳು ನಮಗೆ ಪ್ರತಿಕೂಲವಾಗಿಯೇ ಇರುತ್ತವೆ. ಅಂಥ ಇಕ್ಕಟ್ಟಿನ ಪರಿಸ್ಥಿತಿಯಲ್ಲಿ ನಾವು ಸಿಕ್ಕಿಬಿದ್ದಾಗ ಆಂಗ್ಲ ಭಾಷೆಯಲ್ಲಿ 'We are in a dilemma' ಎಂದು ಹೇಳು ವುದುಂಟು. ವಾದಮಾಡುವ ಸಂದರ್ಭದಲ್ಲಿ ಇದಕ್ಕೆ ತಾರ್ಕಿಕ ರೂಪವನ್ನು ಕೊಟ್ಟಾಗ, ಪ್ರತಿವಾದಿಯನ್ನು ಪ್ರತಿಕೂಲ ಪರಿಣಾಮಗಳುಳ್ಳ ಎರಡು ಪಕ್ಷಗಳ ಇರುಕಿನಲ್ಲಿ ಸಿಕ್ಕಿಸಿದಂತಾಗುವುದು. ಪ್ರತಿಕೂಲ ಪರಿಣಾಮಗಳುಳ್ಳ ಎರಡು ಪಕ್ಷಗಳನ್ನು ಡೈಲೆಮದ ಕೋಡುಗಳು (Horns of a dilemma) ಎಂದು ಪಾಶ್ಚಾತ್ಯ ತಾರ್ಕಿಕರು ಕರೆದಿರುತ್ತಾರೆ. ಜಟ್ಟಿ ಗೂಳಿಯೊಡನೆ ಗುದ್ದಾಡು ವಾಗ ಒಂದು ಕೊಂಬಿನಿಂದ ತಪ್ಪಿಸಿಕೊಂಡರೂ ಇನ್ನೊಂದು ಕೊಂಬು ಜಟ್ಟಿ ಯನ್ನು ಇರಿಯಲು ಸಿದ್ಧವಾಗಿದೆ. ಅವನು ಎರಡು ಕೋಡುಗಳ ಇರುಕಿಗೆ ಸಿಕ್ಕಿಕೊಂಡಿರುತ್ತಾನೆ. ಗ್ರೀಕ್ ತಾರ್ಕಿಕರು ಡೈಲೆಮ (ಇಕ್ಕೋಡಿನ ವಾದ)

---

[1] J. E. Creighton, *An Introductory Logic*, p. 171.

"A dilemma is a Compound hypothetical syllogism, partly disjunctive in form."

ಎಂಬ ಪದವನ್ನು ಗೂಳಿಕಾಳಗವನ್ನು ವರ್ಣಿಸಲು ಉಪಯೋಗಿಸುವ ಭಾಷೆ ಯಿಂದ ಆರಿಸಿಕೊಂಡರು. ಆ ಪದ ಗ್ರೀಕರ ನಂತರವೂ ಪಾಶ್ಚಾತ್ಯ ತರ್ಕದಲ್ಲಿ ಇಂದಿನವರೆಗೂ ಬಳಕೆಯಲ್ಲಿದೆ.

ಡೈಲೆಮ ನಾಲ್ಕು ರೂಪಗಳನ್ನು ಪಡೆದಿರಬಹುದು. ಅದು (೧) ಸರಳ ರಚನಾತ್ಮಕ ರೂಪ (Simple Constructive) ವಾಗಿ ಇರಬಹುದು, ಅಥವಾ (೨) ಸರಳ ಅರಚನಾತ್ಮಕ ರೂಪ (Simple Destructive) ವಾಗಿ ಇರ ಬಹುದು, ಅಥವಾ (೩) ಸಂಕೀರ್ಣ ರಚನಾತ್ಮಕ (Complex Constructive) ರೂಪವಾಗಿ ಇರಬಹುದು, ಅಥವಾ (೪) ಸಂಕೀರ್ಣ ಅರಚನಾತ್ಮಕ ರೂಪ ವಾಗಿ (Complex Destructive) ಇರಬಹುದು. ಅವುಗಳ ಸಂಜ್ಞಾರೂಪ ಹೀಗಿದೆ:

### (೧) ಸರಳ ರಚನಾತ್ಮಕ ಡೈಲೆಮ

A ಯು B ಆಗಿದ್ದರೆ, E ಯು F ಆಗಿರುತ್ತದೆ;
ಮತ್ತು C ಯು D ಆಗಿದ್ದರೆ, E ಯು F ಆಗಿರುತ್ತದೆ.
A ಯು B ಆಗಿರುತ್ತದೆ ಅಥವಾ C ಯು D ಆಗಿರುತ್ತದೆ.

---

∴ E ಯು F ಆಗಿರುತ್ತದೆ.

### (೨) ಸರಳ ಅರಚನಾತ್ಮಕ ಡೈಲೆಮ

A ಯು B ಆಗಿದ್ದರೆ, E ಯು F ಆಗಿರುತ್ತದೆ; ಮತ್ತು A ಯು B ಆಗಿದ್ದರೆ, G ಯು H ಆಗಿರುತ್ತದೆ.
E ಯು F ಆಗಿರುವುದಿಲ್ಲ ಅಥವಾ G ಯು H ಆಗಿರುವುದಿಲ್ಲ.

---

∴ A ಯು B ಆಗಿರುವುದಿಲ್ಲ.

### (೩) ಸಂಕೀರ್ಣರಚನಾತ್ಮಕ ಡೈಲೆಮ

A ಯು B ಆಗಿದ್ದರೆ, E ಯು F ಆಗಿರುತ್ತದೆ; ಮತ್ತು C ಯು D ಆಗಿದ್ದರೆ, G ಯು H ಆಗಿರುತ್ತದೆ.
A ಯು B ಆಗಿರುತ್ತದೆ ಅಥವಾ C ಯು D ಆಗಿರುತ್ತದೆ.

---

∴ E ಯು F ಆಗಿರುತ್ತದೆ ಅಥವಾ G ಯು H ಆಗಿರುತ್ತದೆ.

### (೪) ಸಂಕೀರ್ಣ ಅರಚನಾತ್ಮಕ ದ್ವೈಲೆಮ

A ಯು B ಆಗಿದ್ದರೆ, E ಯು F ಆಗಿರುತ್ತದೆ; ಮತ್ತು C ಯು D ಆಗಿದ್ದರೆ G ಯು H ಆಗಿರುತ್ತದೆ.
E ಯು F ಆಗಿರುವುದಿಲ್ಲ ಅಥವಾ G ಯು H ಆಗಿರುವುದಿಲ್ಲ.

---

∴ A ಯು B ಆಗಿರುವುದಿಲ್ಲ ಅಥವಾ C ಯು D ಆಗಿರುವುದಿಲ್ಲ.

ಈ ಸಂಜ್ಞಾರೂಪಗಳಿಗೆ ಸಂವಾದಿಯಾದ ಮಾತುಗಳುಳ್ಳ ಉದಾಹರಣೆಗಳನ್ನು ಕೊಟ್ಟರೆ ಇಕ್ಕೋಡಿನ ವಾದದ ಸ್ವರೂಪ ವಿಶದವಾಗುತ್ತದೆ.

### ಸರಳ ರಚನಾತ್ಮಕ ದ್ವೈಲೆಮ

ಒಬ್ಬನು ಸ್ವಬುದ್ಧಿಯಿಂದ ನಡೆದರೂ ಜನರು ಅವನಲ್ಲಿ ತಪ್ಪು ಕಂಡುಹಿಡಿಯುತ್ತಾರೆ, ಮತ್ತು ಇತರರ ಮಾತಿನಂತೆ ನಡೆದರೂ ಜನರು ಅವನಲ್ಲಿ ತಪ್ಪು ಕಂಡುಹಿಡಿಯುತ್ತಾರೆ.

ಒಬ್ಬನು ಸ್ವಬುದ್ಧಿಯಿಂದ ನಡೆದುಕೊಳ್ಳಬೇಕು ಅಥವಾ ಪರರು ಹೇಳಿದಂತೆ ನಡೆದುಕೊಳ್ಳಬೇಕು.

---

∴ ಹೇಗೆ ನಡೆದುಕೊಂಡರೂ ಜನರು ಅವನಲ್ಲಿ ತಪ್ಪು ಕಂಡುಹಿಡಿಯುತ್ತಾರೆ.

ಮೇಲಿನ ವಾದದಲ್ಲಿ ಸಾಧ್ಯವಾಕ್ಯ ಎರಡು ಸೋಪಾಧಿಕ ಪ್ರತಿಜ್ಞೆಗಳಿಂದ ಕೂಡಿದೆ. ಪಕ್ಷವಾಕ್ಯ ಆ ಸೋಪಾಧಿಕಪ್ರತಿಜ್ಞೆಗಳ ಪೂರ್ವಪದ (Antecedents) ಗಳನ್ನು ಪಕ್ಷಗಳಾಗಿ ಉಳ್ಳ ಪಕ್ಷಾಂತರಪ್ರತಿಜ್ಞೆಯಿಂದ ಕೂಡಿದೆ. ಪಕ್ಷಪ್ರತಿಜ್ಞೆಯು ಈ ಎರಡು ಪೂರ್ವಪದಗಳನ್ನೂ ಪಕ್ಷಾಂತರವಾಗಿ ಸ್ಥಿರೀಕರಿಸಿದೆ (Affirming disjunctively). ಯಾವುದೊಂದು ಪಕ್ಷವನ್ನು ಒಪ್ಪಿದರೂ ಉತ್ತರಪದದಲ್ಲಿ ಹೇಳಿರುವ ಪರಿಣಾಮದಿಂದ ತಪ್ಪಿಸಿಕೊಳ್ಳುವಂತಿಲ್ಲ; ಪ್ರತಿಕೂಲವಾದ ನಿರ್ಣಯ ಸ್ಥಿರಪಡುತ್ತದೆ. ಸರಳ ರಚನಾತ್ಮಕ ದ್ವೈಲೆಮದ ನಿರ್ಣಯ ನಿರುಪಾಧಿಕಪ್ರತಿಜ್ಞಾ ರೂಪವಾದದ್ದು.

**(೨) ಸರಳ ಅರಚನಾತ್ಮಕ ದ್ವೈಲೆಮ**ದಲ್ಲೂ ನಿರ್ಣಯ ನಿರುಪಾಧಿಕ ರೂಪವಾಗಿರುತ್ತದೆ. ಆದರೆ ಅದು ಸರಳ ರಚನಾತ್ಮಕ ದ್ವೈಲೆಮದಲ್ಲಿರುವಂತೆ ಅಸ್ತ್ಯರ್ಥಕವಾಗಿರದೆ ನೇತ್ಯರ್ಥಕವಾಗಿರುತ್ತದೆ. ಸಾಧ್ಯವಾಕ್ಯದಲ್ಲಿ ತಿಳಿಸುವ ಪರಿಣಾಮ ಪದಗಳನ್ನು (Consequents) ಪಕ್ಷವಾಕ್ಯ ಪಕ್ಷಾಂತರವಾಗಿ

ನಿರಾಕರಿಸುತ್ತದೆ (Deny disjunctively). ಸರಳರಚನಾತ್ಮಕ ಡೈಲೆಮದ ಎರಡು ಸೋಪಾಧಿಕಪ್ರತಿಜ್ಞೆಗಳಲ್ಲೂ ಒಂದೇ ಪರಿಣಾಮಪದ (Consequent) ಇರುತ್ತದೆ. ಸರಳ ಅರಚನಾತ್ಮಕ ಡೈಲೆಮದಲ್ಲಾದರೋ ಎರಡು ಬೇರೆ ಬೇರೆ ಪರಿಣಾಮ ಪದಗಳು ಇರುತ್ತವೆ. ಈ ಅರಚನಾತ್ಮಕ ಡೈಲೆಮವನ್ನು ಉದಾಹರಿಸಲು ಜೇನೋ ಎಂಬ ಗ್ರೀಕ್ ತಾತ್ವಿಕನು ಚಲನೆಯನ್ನು ನಿರಾಕರಿಸಲು ಮಂಡಿಸಿದ ಈ ವಾದವನ್ನು ಪಾಶ್ಚಾತ್ಯ ತಾರ್ಕಿಕರು ಸಾಮಾನ್ಯವಾಗಿ ಬಳಸಿಕೊಳ್ಳುತ್ತಾರೆ.

ಒಂದು ಪದಾರ್ಥ ಚಲಿಸಿದರೆ ಅದು ತಾನಿರುವ ಸ್ಥಳದಲ್ಲಿ ಚಲಿಸಬೇಕು, ಅಥವಾ ಅದು ತಾನಿಲ್ಲದಿರುವ ಸ್ಥಳದಲ್ಲಿ ಚಲಿಸಬೇಕು.

ಅದು ತಾನಿರುವ ಸ್ಥಳದಲ್ಲೂ ಚಲಿಸಲಾರದು, ತಾನಿಲ್ಲದಿರುವ ಸ್ಥಳದಲ್ಲೂ ಚಲಿಸಲಾರದು.

---

∴ ಅದು ಯಾವಪ್ರಕಾರವಾಗಿಯೂ ಚಲಿಸಲಾರದು.

**(೩) ಸಂಕೀರ್ಣ ರಚನಾತ್ಮಕ ಡೈಲೆಮದಲ್ಲಿ** ಪೂರ್ವಪದಗಳು (Antecedents) ಮತ್ತು ಉತ್ತರಪದಗಳು (Consequents) ಬೇರೆ ಬೇರೆ ಯಾಗಿರುತ್ತವೆ ಮತ್ತು ನಿರ್ಣಯವು ಪಕ್ಷಾಂತರಪ್ರತಿಜ್ಞೆಯಾಗಿರುತ್ತದೆ. ಈ ರೂಪವನ್ನು ಉದಾಹರಿಸಲು ಕಲೀಫ್ ಓಮಾರನು ಅಲೆಕ್ಸಾಂಡ್ರಿಯದ ಪುಸ್ತಕಾಲಯನ್ನು ಸುಟ್ಟುಹಾಕುವುದು ನ್ಯಾಯವೆಂದು ಸಮರ್ಥಿಸಲು ಮಂಡಿಸಿದ ವಾದವನ್ನು ಪಾಶ್ಚಾತ್ಯ ತರ್ಕಗ್ರಂಥಗಳಲ್ಲಿ ಉಪಯೋಗಿಸುವುದುಂಟು. ಆ ವಾದ ಹೀಗಿದೆ:

ಈ ಪುಸ್ತಕಾಲಯದಲ್ಲಿರುವ ಪುಸ್ತಕಗಳು ಕೊರಾನಿನಲ್ಲಿರುವ ತತ್ತ್ವವನ್ನೇ ಒಳಗೊಂಡಿದ್ದರೆ ಅವು ಅನಾವಶ್ಯಕ; ಅವು ಕೊರಾನಿಗೆ ವಿರುದ್ಧವಾದ ತತ್ತ್ವವನ್ನೊಳಗೊಂಡಿದ್ದರೆ ಅವು ದುಷ್ಟವಾದುವು.

ಅವು ಕೊರಾನಿನ ತತ್ತ್ವವನ್ನು ಒಳಗೊಂಡಿರಬೇಕು, ಅಥವಾ ಅದಕ್ಕೆ ವಿರುದ್ಧವಾಗಿರಬೇಕು.

---

∴ ಈ ಪುಸ್ತಕಾಲಯದಲ್ಲಿರುವ ಪುಸ್ತಕಗಳು ಅನಾವಶ್ಯಕ ಅಥವಾ ದುಷ್ಟವಾದುವು.

**(೪) ಸಂಕೀರ್ಣ ಅರಚನಾತ್ಮಕ ಡೈಲೆಮದಲ್ಲಿ** ನಿರ್ಣಯವಾಕ್ಯವು ಎರಡು ನೇತ್ಯರ್ಥಕ ಪಕ್ಷಗಳುಳ್ಳದ್ದಾಗಿರುತ್ತದೆ. ಉದಾಹರಣೆ:

ಒಬ್ಬ ಅಧಿಕಾರಿ ತನ್ನ ಕರ್ತವ್ಯವನ್ನು ಮಾಡಿದರೆ, ಅವನು ನಿಬಂಧನೆಗಳಿಗೆ

ವಿಧೇಯನಾಗಿರುತ್ತಾನೆ ; ಅವನು ಬುದ್ಧಿವಂತನಾದರೆ ಅವನು ನಿಬಂಧನೆಗಳನ್ನು ಅರ್ಥಮಾಡಿಕೊಳ್ಳುತ್ತಾನೆ.

ಈ ಅಧಿಕಾರಿ ನಿಬಂಧನೆಗಳಿಗೆ ಅವಿಧೇಯನಾಗಿದ್ದನು, ಅಥವಾ ಅವುಗಳನ್ನು ಅರ್ಥಮಾಡಿಕೊಳ್ಳಲಿಲ್ಲ.

---

∴ ಅವನು ತನ್ನ ಕರ್ತವ್ಯವನ್ನು ಮಾಡಲಿಲ್ಲ ಅಥವಾ ಅವನು ಬುದ್ಧಿವಂತನಲ್ಲ.

ಸಾಧ್ಯವಾಕ್ಯದಲ್ಲಿ ಎರಡಕ್ಕಿಂತ ಹೆಚ್ಚಾಗಿ ಸೋಪಾಧಿಕಪ್ರತಿಜ್ಞೆಗಳನ್ನು ಸೇರಿಸಿ, ಮೂರು ಕೋಡುಗಳ ವಾದ (Trilemma), ಅಥವಾ ನಾಲ್ಕು ಕೋಡುಗಳ ವಾದ (Tetralemma) ಅಥವಾ ಐದು ಕೋಡುಗಳ ವಾದ (Polylemma) ವನ್ನು ರಚಿಸಬಹುದು. ಇಂಥ ವಾದಗಳು ಸಾಧಾರಣವಾಗಿ ಉಪಯೋಗದಲಿಲ್ಲ.

ಇಕ್ಕೋಡಿನ ವಾದವನ್ನು ಪ್ರತಿವಾದಿಗೆ ದಿಗ್ಭ್ರಮೆ ಹುಟ್ಟಿಸಲು, ಅಥವಾ ಅವನ ಕಣ್ಣಿಗೆ ಮಣ್ಣು ಎರಚಲು ಉಪಯೋಗಿಸಿಕೊಳ್ಳುವುದೇ ಹೆಚ್ಚು. ಅಂಥ ದುರುದ್ದೇಶದಿಂದ ಅವುಗಳನ್ನು ರಚಿಸಿದಾಗ ಅವು ದೋಷಯುತವಾಗಿರುತ್ತವೆ; ಎಲ್ಲ ಪಕ್ಷಗಳೂ ಅವುಗಳಲ್ಲಿ ಸೇರಿರುವುದಿಲ್ಲ, ಅಥವಾ ಆ ಪಕ್ಷಗಳು ಒಂದನ್ನೊಂದು ಬಹಿಷ್ಕರಿಸುವುದಿಲ್ಲ, ಅಥವಾ ಸಾಧ್ಯವಾಕ್ಯದ ಮೊದಲಿನ ಭಾಗದಲ್ಲಿ ಒಂದು ಅರ್ಥದಲ್ಲೂ ಎರಡನೆಯ ಭಾಗದಲ್ಲಿ ಬೇರೆ ಅರ್ಥದಲ್ಲೂ ಉಪಯೋಗವಾಗಿರುತ್ತವೆ. ಆದರೆ ಡೈಲೆಮಗಳೆಲ್ಲ ಅಸಾಧುವಾಗಿಯೇ ಇರಬೇಕಾಗಿಲ್ಲ. ಮೇಲೆ ಹೇಳಿದ ದೋಷಗಳಿಲ್ಲದ ಡೈಲೆಮ ಸಾಧುವಾಗಿರುತ್ತದೆ. ಅಸಾಧುವಾದ ಅಥವಾ ದುಷ್ಟ ಇಕ್ಕೋಡುಗಳ ವಾದವನ್ನು ಮೂರು ಬಗೆಯಾಗಿ ಖಂಡಿಸಬಹುದು, ಅಥವಾ ಇಕ್ಕೋಡುಗಳ ಬಾಧೆಯಿಂದ ತಪ್ಪಿಸಿಕೊಳ್ಳಬಹುದು. (೧) ಕೋಡುಗಳ ಮಧ್ಯೆ ನುಸುಳಿಕೊಳ್ಳುವುದು ಒಂದು ಮಾರ್ಗ. ಆ ವಾದದಲ್ಲಿ ಎಲ್ಲ ಪಕ್ಷಗಳೂ ಸೇರಿರುವುದಿಲ್ಲ, ಆ ಎರಡು ಪಕ್ಷಗಳಲ್ಲದೆ ತೃತೀಯ ಪಕ್ಷವಿದೆ ಎಂದು ತೋರಿಸಿ, ಆ ಎರಡು ಪಕ್ಷಗಳ ಕಾಟದಿಂದ ತಪ್ಪಿಸಿಕೊಳ್ಳಬಹುದು. (೨) ಕೋಡುಗಳನ್ನು ಜಗ್ಗಿಸಿ ಕಿತ್ತುಹಾಕುವುದು ಎರಡನೆಯ ಮಾರ್ಗ. ಪೂರ್ವಭಾಗಕ್ಕೂ ಉತ್ತರಭಾಗಕ್ಕೂ ನಿಕಟಸಂಬಂಧವಿಲ್ಲವೆಂದು ತೋರಿಸಿ, ಪೂರ್ವಭಾಗವನ್ನು ಒಪ್ಪಿದರೂ ಉತ್ತರಭಾಗದಲ್ಲಿ ಹೇಳಿರುವ ಪರಿಣಾಮ ಉಂಟಾಗಲಾರದೆಂದು ತೋರಿಸಿ, ಅನಾನುಕೂಲವಾದ ಪರಿಣಾಮಗಳಿಂದ ಪಾರಾಗಬಹುದು. ಉದಾಹರಣೆಗಾಗಿ :

ಬೇರೆ ಬೇರೆ ಕೈಗಾರಿಕೆಗಳ ಬಂಡವಾಳಗಾರರು ಸೇರಿಕೊಂಡು ಒಗ್ಗಟ್ಟಿನಿಂದ ಕೆಲಸಮಾಡಿದರೆ ಬೆಲೆಗಳು ವಿಪರೀತವಾಗಿ ಏರುತ್ತದೆ; ಅವರು ಹಾಗೆ ಸೇರಿ ಕೊಳ್ಳದಿದ್ದರೆ ಹೊರಗಿನವರ ಪೈಪೋಟಿಯನ್ನು ತಡೆಯಲಾಗುವುದಿಲ್ಲ.

ಕೈಗಾರಿಕೆಗಳ ಬಂಡವಾಳಗಾರರು ಸೇರಿಕೊಳ್ಳಬೇಕು ಅಥವಾ ಸೇರಿಕೊಳ್ಳದೆ ಇರಬೇಕು.

---

∴ ಬೆಲೆಗಳು ವಿಪರೀತವಾಗೇರುತ್ತವೆ ಅಥವಾ ಕೈಗಾರಿಕೆಗಳು ಹೊರಗಿನ ಪೈಪೋಟಿಯನ್ನು ತಡೆಯಲಾರವು.

ಮೇಲಿನ ವಾದದಲ್ಲಿ ಕೈಗಾರಿಕೆಗಳ ಒಗ್ಗಟ್ಟಿಗೂ ಬೆಲೆಗಳ ವಿಪರೀತವಾದ ಏರಿಕೆಗೂ ಸಂಬಂಧವಿಲ್ಲವೆಂದು ತೋರಿಸಬಹುದು. ಅಥವಾ ಹೊರಗಿನ ಪೈಪೋಟಿಯನ್ನು ತಡೆಯಲು ಕೈಗಾರಿಕೆಯ ಮಾಲೀಕರ ಒಗ್ಗಟ್ಟು ಅನಾವಶ್ಯಕ ಎಂದು ತೋರಿಸಬಹುದು.

(೩) ಮೂರನೆಯದಾಗಿ ಇಕ್ಕೋಡಿನ ಕಾಟದಿಂದ ತಪ್ಪಿಸಿಕೊಳ್ಳಲು, ಅದರ ನಿರ್ಣಯಕ್ಕೆ ವಿರುದ್ಧವಾದ ನಿರ್ಣಯವನ್ನು ಸಾಧಿಸಬಲ್ಲ ಬೇರೊಂದು ಇಕ್ಕೋಡಿನ ವಾದವನ್ನು ಮಂಡಿಸಬಹುದು. ಹೀಗೆ ವಿರುದ್ಧ ಇಕ್ಕೋಡಿನ ವಾದವನ್ನು ಮಂಡಿಸುವುದಕ್ಕೆ ಆಂಗ್ಲಭಾಷೆಯಲ್ಲಿ 'Rebuttal' (ಪ್ರತಿ ಸವಾಲು) ಎಂದು ಹೆಸರು. ಪ್ರತಿಸವಾಲನ್ನು ಮಂಡಿಸುವ ವಾದಕ್ಕೆ ಒಂದು ಪ್ರಖ್ಯಾತವಾದ ಉದಾಹರಣೆಯನ್ನು ಕೊಡುವುದುಂಟು.

ಪ್ರೊಟಾಗರಾಸ್ ಎಂಬ ಒಬ್ಬ ಗ್ರೀಕ್ ತಾತ್ತ್ವಿಕನು ವಿದ್ಯಾರ್ಥಿಯಾಗಿ ತನ್ನ ಬಳಿಗೆ ಬಂದ ಯೂಥ್ಲಸ್‌ನೊಡನೆ ಒಂದು ಒಪ್ಪಂದ ಮಾಡಿಕೊಂಡನು. ಅವನ ವಿದ್ಯಾಭ್ಯಾಸ ಮುಗಿದಾಗ ಯೂಥ್ಲಸ್ ಪ್ರೊಟಾಗರಾಸಿಗೆ ಅರ್ಧಶುಲ್ಕ ವನ್ನು ಕೊಡಬೇಕು; ಅವನು ಕಲಿತ ವಿದ್ಯೆಯನ್ನು ಉಪಯೋಗಿಸಿಕೊಂಡು ನ್ಯಾಯಸ್ಥಾನದಲ್ಲಿ ಮೊದಲನೆಯ ಮೊಕದ್ದಮೆಯನ್ನು ಗೆದ್ದಾಗ ಇನ್ನರ್ಧವನ್ನು ಕೊಡಬೇಕು. ಇವು ಆ ಒಪ್ಪಂದದ ಷರತ್ತುಗಳು. ಯೂಥ್ಲಸ್ಸನು ವಿದ್ಯಾಭ್ಯಾಸ ಮುಗಿಸಿ ಅರ್ಧಶುಲ್ಕವನ್ನು ಕೊಟ್ಟನು. ಆದರೆ ಅವನು ವಿದ್ಯಾಭ್ಯಾಸ ಮುಗಿಸಿಯಾದ ಮೇಲೂ ಬಹುಕಾಲ ವಕೀಲನಾಗದೆ ಕಾಲ ತಳ್ಳುತ್ತಿದ್ದನು. ಉಳಿದರ್ಧದ ಶುಲ್ಕ ಬರುವುದೆಂದು ನಿರೀಕ್ಷಿಸುತ್ತಿದ್ದ ಪ್ರೊಟಾಗರಾಸ್ ಹೇಗಾದರೂ ಮಾಡಿ ಯೂಥ್ಲಸ್‌ನಿಂದ ಅರ್ಧಶುಲ್ಕವನ್ನು ವಸೂಲು ಮಾಡಲು ಒಂದು ತಂತ್ರ ಹೂಡಿದನು. ಕೋರ್ಟಿನಲ್ಲಿ ಯೂಥ್ಲಸ್ಸಿನ ಮೇಲೆ ದಾವಾ ಹೂಡಿ ಈ ರೀತಿ ವಾದಮಾಡಿದನು:

ಯೂಥ್ಲಸ್ ಈ ವ್ಯವಹಾರದಲ್ಲಿ ಸೋತರೆ ಕೋರ್ಟಿನ ತೀರ್ಪಿನಂತೆ ಅವನು ನನಗೆ ಹಣ ಕೊಡಬೇಕು; ಅವನು ವಾದಮಾಡಿ ವ್ಯವಹಾರದಲ್ಲಿ ಗೆದ್ದರೆ ಕರಾರಿನ ಷರತ್ತಿನಂತೆ ಅವನು ಹಣ ಕೊಡಬೇಕು.

ಅವನು ವ್ಯವಹಾರದಲ್ಲಿ ಗೆಲ್ಲಬೇಕು ಅಥವಾ ಸೋಲಬೇಕು.

---

∴ ಹೇಗಾದರೂ ಅವನು ಹಣ ಕೊಡಬೇಕು.

ಅದಕ್ಕೆ ಪ್ರತಿಯಾಗಿ ಯೂಥ್ಲಸ್ಸ್ ಈ ಪ್ರತಿ ಇಕ್ಕೋಡಿನ ವಾದವನ್ನು ಮಂಡಿಸಿದನು.

ನಾನು ಈ ವ್ಯವಹಾರದಲ್ಲಿ ಗೆದ್ದರೆ ಕೋರ್ಟಿನ ತೀರ್ಪಿನಂತೆ ಹಣ ಕೊಡಬೇಕಾಗಿಲ್ಲ; ನಾನು ಸೋತರೆ (ಮೊದಲನೆಯ ಮೊಕದ್ದಮೆಯಲ್ಲಿ ಗೆಲ್ಲಲಿಲ್ಲ ವಾದ್ದರಿಂದ) ಕರಾರಿನಂತೆ ನಾನು ಹಣ ಕೊಡಬೇಕಾಗಿಲ್ಲ.

ಈ ವ್ಯವಹಾರದಲ್ಲಿ ನಾನು ಗೆಲ್ಲಬೇಕು ಅಥವಾ ಸೋಲಬೇಕು.

---

∴ ಹೇಗಾದರೂ ನಾನು ಹಣ ಕೊಡಬೇಕಾಗಿಲ್ಲ.

ಪ್ರೊಟಾಗರಾಸನು ಸಾಧ್ಯವಾಕ್ಯದ ಪೂರ್ವಾರ್ಧದಲ್ಲಿ ಒಂದು ಆಧಾರತತ್ತ್ವವನ್ನು ಅಂದರೆ ಕೋರ್ಟಿನ ತೀರ್ಪನ್ನು ಉಪಯೋಗಿಸಿಕೊಂಡಿರುತ್ತಾನೆ, ಉತ್ತರಾರ್ಧದಲ್ಲಿ ಬೇರೆ ಆಧಾರತತ್ತ್ವವನ್ನು ಅಂದರೆ ಕರಾರಿನ ಷರತ್ತನ್ನು ಉಪಯೋಗಿಸಿಕೊಂಡಿರುತ್ತಾನೆ. ವಾದ ಸರಿಯಾಗಿರಬೇಕಾದರೆ ವಾದದ ಆಧಾರತತ್ತ್ವ ಪೂರ್ವಾರ್ಧದಲ್ಲೂ ಉತ್ತರಾರ್ಧದಲ್ಲೂ ಒಂದೇ ಆಗಿರಬೇಕು. ಪ್ರೊಟಾಗರಾಸಿನ ವಾದದಲ್ಲಿ ಹಾಗಿರುವುದಿಲ್ಲವಾದುದರಿಂದ ಅದು ಅಸಾಧು. ಪ್ರೊಟಾಗರಾಸಿನ ಗರುಡಿಯಲ್ಲಿ ಸಾಮುಮಾಡಿದ ಚತುರನಾದ ಯೂಥ್ಲಸ್ ತನ್ನ ಗುರುವಿಗೆ ತಿರುಮಂತ್ರ ಹೇಳುತ್ತಾನೆ. ಉತ್ತರಾರ್ಧದ ಪರಿಣಾಮಪದವನ್ನು ಪೂರ್ವಾರ್ಧದ ಪರಿಣಾಮಪದವಾಗಿಯೂ, ಪೂರ್ವಾರ್ಧದ ಪರಿಣಾಮಪದವನ್ನು ಉತ್ತರಾರ್ಧದ ಪರಿಣಾಮಪದವಾಗಿಯೂ ಉಪಯೋಗಿಸಿಕೊಂಡು ವಾದಮಾಡುತ್ತಾನೆ. ಸೋಲುವ ಸಂದರ್ಭಕ್ಕೆ ಕರಾರನ್ನು ಆಧಾರವಾಗಿಯೂ ಗೆಲ್ಲುವ ಸಂದರ್ಭಕ್ಕೆ ಕೋರ್ಟಿನ ತೀರ್ಪನ್ನು ಆಧಾರವಾಗಿಯೂ ಉಪಯೋಗಿಸಿಕೊಳ್ಳುತ್ತಾನೆ.

ಇಬ್ಬರ ವಾದವೂ ಸರಿಯಲ್ಲ. ಒಂದೇ ವಾದದಲ್ಲಿ ಎರಡು ಆಧಾರತತ್ತ್ವಗಳ ಉಪಯೋಗ ಸಲ್ಲದು. ನ್ಯಾಯಾಧೀಶನು ಕರಾರಿನ ಷರತ್ತನ್ನೇ ಅಕ್ಷರಶಃ (Literally) ಆಧಾರವಾಗಿ ಇಟ್ಟುಕೊಂಡು ಕರಾರಿನ ಪ್ರಕಾರ ಪ್ರೊಟಾಗರಾಸ್ ದಾವಾ ಹೂಡಲು ಅವಕಾಶವೇ ಇಲ್ಲ ಎಂದು ದಾವಾವನ್ನು ವಜಾ ಮಾಡ

ಬಹುದು. ಅಥವಾ ಕರಾರಿನ ಇಂಗಿತ (Spirit) ವನ್ನು ಗಮನದಲ್ಲಿಟ್ಟುಕೊಂಡು ಯಾರಪರ ನ್ಯಾಯವಿದೆ ಎಂದು ವಿವೇಚಿಸಿ, ಆ ಪ್ರಕಾರ ತೀರ್ಪುಕೊಡಬಹುದು.

## ಅಭ್ಯಾಸಗಳು (೧೩)

೧. 'ಡೈಲೆಮ' ಎಂದರೆ ಏನು? ಡೈಲೆಮಗಳು ಎಷ್ಟು ಬಗೆಯಾಗಿರಬಹುದು? ಒಂದೊಂದಕ್ಕೂ ಒಂದೊಂದು ಉದಾಹರಣೆ ಕೊಡಿ.

೨. 'ಡೈಲೆಮ' ಅಸಾಧುವಾಗುವುದಕ್ಕೆ ಕಾರಣಗಳೇನು? ಅದು ಯಾವಾಗಲೂ ಅಸಾಧುವಾಗಿಯೇ ಇರಬೇಕೆ?

೩. 'ಡೈಲೆಮಗಳನ್ನು' ಹೇಗೆ ಪ್ರತಿಭಟಿಸಬಹುದು.

೪. ಈ ವಾದಗಳನ್ನು ಪರೀಕ್ಷಿಸಿ, ಅವುಗಳಲ್ಲಿರುವ ದೋಷವನ್ನು ವ್ಯಕ್ತಪಡಿಸಿ.

(ಅ) ನನ್ನ ಕ್ಷೇಮವನ್ನು ಅಲಕ್ಷಿಸಿ ಇತರರ ಸೌಖ್ಯಕ್ಕಾಗಿ ನಾನು ಬಾಳಿದರೆ, ನನ್ನನ್ನೇ ನಾನು ಅಸುಖಿಯಾಗಿ ಮಾಡಿಕೊಳ್ಳುತ್ತೇನೆ; ಮತ್ತು ಇತರರ ಸೌಖ್ಯವನ್ನು ಅಲಕ್ಷಿಸಿ ನನ್ನ ಸೌಖ್ಯಕ್ಕಾಗಿಯೇ ಬಾಳಿದರೆ, ಇತರರು ನನ್ನನ್ನು ಅಸುಖಿಯಾಗಿ ಮಾಡುತ್ತಾರೆ. ನಾನು ಇತರರ ಸೌಖ್ಯಕ್ಕಾಗಿ ಬಾಳಬೇಕು. ಅಥವಾ ನನ್ನ ಸೌಖ್ಯಕ್ಕಾಗಿ ಬಾಳಬೇಕು. ಆದ್ದರಿಂದ ನಾನು ಅಸುಖಿಯಾಗಿ ಇರಲೇಬೇಕು.

(ಆ) ಪರೀಕ್ಷೆಗಳ ಮೂಲಕ ಅತ್ಯುತ್ತಮರಾದವರನ್ನು ಆರಿಸಲಾಗದಿದ್ದರೆ, ಪರೀಕ್ಷೆಗಳನ್ನು ತೆಗೆದುಹಾಕಬೇಕು; ಅವುಗಳ ಮೂಲಕ ಅತ್ಯುತ್ತಮರಾದವರನ್ನು ಆರಿಸಬಹುದಾದರೆ, ಎಲ್ಲ ಕೆಲಸಗಳಿಗೂ ಅತ್ಯುತ್ತಮರಾದವರನ್ನು ಪರೀಕ್ಷೆಗಳ ಮೂಲಕವೇ ಆರಿಸಬೇಕು. ಆದ್ದರಿಂದ ಅವುಗಳನ್ನು ತೆಗೆದುಹಾಕಬೇಕು ಅಥವಾ ಎಲ್ಲ ಕೆಲಸಗಳಿಗೂ ಪರೀಕ್ಷೆಗಳ ಮೂಲಕವೇ ಅತ್ಯುತ್ತಮರಾದವರನ್ನು ಆರಿಸಬೇಕು.

# ೧೪. ಸಂಗ್ರಹಿಸಿದ ನ್ಯಾಯ

## (Abbreviated syllogisms)

ಸಾಮಾನ್ಯವಾಗಿ ತರ್ಕಶಾಸ್ತ್ರ ಗ್ರಂಥಗಳಲ್ಲಿ ನ್ಯಾಯದ ಅಂಗಗಳು ಮೂರೆಂದೂ ಅವು ಒಂದು ಗೊತ್ತಾದ ಕ್ರಮದಲ್ಲಿ—ಸಾಧ್ಯವಾಕ್ಯ ಮೊದಲಲ್ಲೂ, ಪಕ್ಷವಾಕ್ಯ ಎರಡನೆಯದಾಗಿಯೂ ನಿರ್ಣಯ ಮೂರನೆಯದಾಗಿಯೂ—ಇರಬೇಕೆಂದು ವಿಧಾಯಕಮಾಡಿದೆ. ತರ್ಕಶಾಸ್ತ್ರಜ್ಞರು ವಾದಗಳನ್ನು ಪರೀಕ್ಷಿಸಿ ಅವುಗಳಲ್ಲಿ ಅಡಗಿರುವ ಎಲ್ಲ ಅವಯುವಗಳನ್ನು ಬಹಿರಂಗಪಡಿಸಿ ಅವುಗಳನ್ನು ಒಂದು ಕ್ರಮದಲ್ಲಿ ಜೋಡಿಸುತ್ತಾರೆ. ಶಾಸ್ತ್ರದೃಷ್ಟಿಯಿಂದ ಇದು ಒಂದು ಸೌಲಭ್ಯ. ಅನುಮಾನದ ಅಂಗಗಳನ್ನು ಒಂದು ಕ್ರಮದಲ್ಲಿ ಜೋಡಿಸಿದಾಗ, ವಾದವು ಸಾಧುವೋ ಅಥವಾ ಅಸಾಧುವೋ ಎಂಬುದನ್ನು ನಿರ್ಧರಿಸುವುದು ಸುಲಭ. ಆದರೆ ವಾಸ್ತವವಾಗಿ ನಾವು ಈ ರೀತಿ ಆಲೋಚಿಸುವುದಿಲ್ಲ. ತರ್ಕಶಾಸ್ತ್ರಜ್ಞರು ಪ್ರತಿಜ್ಞೆಗಳನ್ನು ಒಂದು ಕ್ರಮದಲ್ಲಿ ಜೋಡಿಸಿ ತಿಳಿಸುವಂತೆ ನಾವು ಮಾತನಾಡಿದರೆ ನಮ್ಮ ಮಾತು ತುಂಬ ಕೃತಕವಾಗಿ ಕಾಣುತ್ತದೆ. ಪಾಶ್ಚಾತ್ಯ ನ್ಯಾಯ ಗ್ರಂಥಗಳಲ್ಲಿ ನಿರೂಪಿಸುವಂತೆ ನಾವು ಸಾಧ್ಯಪ್ರತಿಜ್ಞೆಯಿಂದ ವಾದವನ್ನು ಪ್ರಾರಂಭಿಸುವುದಿಲ್ಲ. ಸಾಮಾನ್ಯವಾಗಿ ನಾವು ವಾದವನ್ನು ನಿರ್ಣಯದಿಂದ ಪ್ರಾರಂಭಿಸುತ್ತೇವೆ. 'ಬೆಟ್ಟದಲ್ಲಿ ಬೆಂಕಿ ಇದೆ' ಎಂಬ ವಾಕ್ಯದಿಂದ ನಾವು ವಾದವನ್ನು ಪ್ರಾರಂಭಿಸುತ್ತೇವೆ. 'ಬೆಟ್ಟದಲ್ಲಿ ಬೆಂಕಿ ಇದೆ' ಎಂದು ಹೇಳಿದಾಗ, 'ಏಕೆ' ಎಂಬ ಪ್ರಶ್ನೆ ಹುಟ್ಟುವುದು ಸಹಜ. ಅದಕ್ಕೆ ಉತ್ತರವಾಗಿ 'ಹೊಗೆ ಇರುವುದರಿಂದ' ಎಂದು ನಾವು ಉತ್ತರ ಹೇಳುತ್ತೇವೆ. ಪ್ರತಿಪಕ್ಷದವರು 'ಇದು ಹೇಗೆ' ಎಂಬ ಪ್ರಶ್ನೆ ಕೇಳಿಯೇ ಕೇಳುತ್ತಾರೆ. ಆಗ ಅವರಿಗೆ ಉತ್ತರವಾಗಿ 'ಎಲ್ಲೆಲ್ಲಿ ಹೊಗೆ ಇದೆಯೋ ಅಲ್ಲೆಲ್ಲಾ ಬೆಂಕಿ ಇದ್ದೇ ಇರಬೇಕು' ಎಂಬ ವ್ಯಾಪ್ತಿವಾಕ್ಯವನ್ನು ಹೇಳುತ್ತೇವೆ. ಈ ಮೂರು ವಾಕ್ಯಗಳು ಹೊರಬಿದ್ದಾಗ ವಾದ ಮುಗಿಯುತ್ತದೆ ಎಂದು ಪಾಶ್ಚಾತ್ಯ ತಾತ್ವಿಕರ ಭಾವನೆ. ಆದ್ದರಿಂದ ಅವರು ನ್ಯಾಯಕ್ಕೆ ಮೂರು ಅಂಗಗಳಿದ್ದರೆ ಸಾಕು ಎಂದು ಹೇಳುತ್ತಾರೆ. ಆದರೆ ಭಾರತೀಯ ತಾತ್ವಿಕರ ದೃಷ್ಟಿಯಲ್ಲಿ ಮೂರು ಅಂಗಗಳು ಮಾತ್ರ ಇದ್ದರೆ ಒಂದು ಆಲೋಚನೆ ಪೂರ್ಣವಾಗುವುದಿಲ್ಲ. ಅದು ಐದು ಅಂಗಗಳನ್ನು ಪಡೆದಿರಬೇಕು ಎಂದು ಹೇಳು

ತ್ತಾರೆ. ಮೂರನೆಯ ಹಂತದಲ್ಲಿ ಸಾಮಾನ್ಯಪ್ರತಿಜ್ಞೆಯನ್ನು ಮಂಡಿಸಿದಾಗ, ಹೊಗೆ ಇದ್ದಕಡೆ ಬೆಂಕಿ ಇದೆ ಎಂದು ಹೇಳಲು ಆಧಾರವೇನು, ವ್ಯಾಪ್ತಿ ಜ್ಞಾನಕ್ಕೆ ಆಧಾರವೇನು ಎಂದು ಕೇಳಬಹುದು. ಆಗ ನಾವು ಹೊಗೆಗೂ ಬೆಂಕಿಗೂ ಅವಿನಾ ಸಂಬಂಧ (Inseparable relation) ಅಥವಾ ತಾದಾತ್ಮ ಸಂಬಂಧವಿದೆ ಎಂದು ತೋರಿಸಬೇಕು. ಸಪಕ್ಷದಲ್ಲಿ ಅದು ಇದೆ, ವಿಪಕ್ಷದಲ್ಲಿ ಅದು ಇಲ್ಲ ಎಂದೂ ಅದಕ್ಕೆ ವಿರುದ್ಧವಾದ ಒಂದು ದೃಷ್ಟಾಂತವೂ ಯಾರ ಅನುಭವಕ್ಕೂ ಬಂದಿಲ್ಲ ಎಂದೂ, ಅದು ಅಬಾಧಿತವಾದುದೂ ಎಂದು ತೋರಿಸಬೇಕು. ಆಗ ಹೇತು ಸದ್‌ಹೇತು ಎಂದೂ ವ್ಯಾಪ್ತಿವಾಕ್ಯ ನಿರ್ದೋಷವಾದದ್ದು ಎಂದೂ ಸ್ಥಾಪನೆಯಾಗುತ್ತದೆ. ಅದು ಸ್ಥಾಪನೆ ಯಾದಮೇಲೆ ಅದನ್ನು ಪ್ರಕೃತವಿಷಯಕ್ಕೆ ಅನುಸಂಧಾನ ಮಾಡಬೇಕು, ಬೆಂಕಿಯಿಂದ ವ್ಯಾಪ್ಯವಾದ ಹೊಗೆ ಈ ಬೆಟ್ಟದಲ್ಲಿದೆ ಎಂದು ಹೇಳಿದಾಗ ವ್ಯಾಪ್ತಿಜ್ಞಾನವನ್ನು ಪಕ್ಷಕ್ಕೆ ಅನ್ವಯಮಾಡಿದಂತಾಯಿತು. ಈ ಅನು ಸಂಧಾನ ನಡೆದ ತಕ್ಷಣ "ಈ ಬೆಟ್ಟದಲ್ಲಿ ಬೆಂಕಿ ಇದೆ" ಎಂಬ ನಿರ್ಣಯ ಫಲಿಸುತ್ತದೆ.

ಭಾರತೀಯ ತಾರ್ಕಿಕರು ಸಾಮಾನ್ಯವಾಗಿ ಅನುಮಾನ ಐದು ಅವಯವ ಗಳುಳ್ಳದ್ದು ಎಂದು ಹೇಳುತ್ತಾರಾದರೂ, ಎಲ್ಲ ತಾರ್ಕಿಕರೂ ಇದೇ ಅಭಿಪ್ರಾಯವುಳ್ಳವರಾಗಿರುತ್ತಾರೆಂದು ತಿಳಿಯಕೂಡದು. ಕೆಲವು ಭಾರತೀಯ ತಾರ್ಕಿಕರು ಅನುಮಾನಕ್ಕೆ ಮೂರು ಅವಯವಗಳು ಸಾಕೆಂದೂ ಆ ಮೂರು ಅವಯವಗಳನ್ನು ಯಾವ ಕ್ರಮದಲ್ಲಾದರೂ ತಿಳಿಸಬಹುದೆಂದು ಅಭಿಪ್ರಾಯ ಪಡುತ್ತಾರೆ. ಮೀಮಾಂಸಕರು ಮತ್ತು ವೇದಾಂತಿಗಳು ಅನುಮಾನ ಮೂರು ಅವಯವಗಳಿಂದ ಕೂಡಿದ್ದರೆ ಸಾಕೆಂದೂ, ಅವು ಕ್ರಮವಾಗಿ ಮೊದಲನೆಯ ಎರಡನೆಯ ಮತ್ತು ಮೂರನೆಯವಾಗಿ ಇರಬಹುದೆಂದೂ, ಅಥವಾ ಮೂರನೆಯ ನಾಲ್ಕನೆಯ ಮತ್ತು ಐದನೆಯವಾಗಿ ಇರಬಹುದೆಂದೂ ಹೇಳುತ್ತಾರೆ. ಬೌದ್ಧರು ಎರಡೇ ಅಂಗಗಳು ಸಾಕೆಂದು ಹೇಳುತ್ತಾರೆ. 'ಬೆಟ್ಟದಲ್ಲಿ ಬೆಂಕಿ ಇದೆ' ಎಂಬುದು ಮೊದಲನೆಯ ಅವಯವ, 'ಹೊಗೆ ಇರುವುದರಿಂದ' ಎಂಬುದು ಎರಡನೆಯ ಅವಯವ. ಮೂರನೆಯ ಅವಯವವಾದ ವ್ಯಾಪ್ತಿವಾಕ್ಯ ಬೇಡವೆ ಎಂದು ಅವರನ್ನು ಪ್ರಶ್ನಿಸಿದಾಗ, ಅವರು 'ವಾಸ್ತವವಾಗಿ ನಾವು ಆಲೋಚಿಸು ವಾಗ ಈ ವ್ಯಾಪ್ತಿಜ್ಞಾನ ಪ್ರಕಟವಾಗಿ ಕಾಣುವುದಿಲ್ಲ, ಅದು ನಮ್ಮ ಜ್ಞಾನ ಚೈತನ್ಯದಲ್ಲಿ ಎಲ್ಲೋ ಅಡಗಿಕೊಂಡು ಕೆಲಸ ಮಾಡುತ್ತದೆ' ಎಂದು ಉತ್ತರ ಹೇಳುತ್ತಾರೆ. ವಾಸ್ತವವಾಗಿ ನಮ್ಮ ನ್ಯಾಯ ಹೀಗೆ ಸಂಗ್ರಹವಾಗಿ

(Abbreviated) ಇರುತ್ತದೆ.* ಇಂಥಾ ಸಂಗ್ರಹಿಸಿದ ನ್ಯಾಯರೂಪಕ್ಕೆ ಪಾಶ್ಚಾತ್ಯ ತಾರ್ಕಿಕರು ಎಂಥಿಮೀಮ್ (Enthymeme) ಎಂದು ಹೆಸರು ಕೊಟ್ಟಿರುತ್ತಾರೆ.

ಸಂಗ್ರಹಿಸಿದ ಅನುಮಾನರೂಪಗಳನ್ನು ಪಾಶ್ಚಾತ್ಯ ತಾರ್ಕಿಕರು ಮೂರು ಬಗೆಯಾಗಿ ವಿಂಗಡಿಸಿರುತ್ತಾರೆ. ಮೊದಲನೆಯ ಬಗೆಯ ಸಂಗ್ರಹಿಸಿದ ನ್ಯಾಯದಲ್ಲಿ ಸಾಧ್ಯವಾಕ್ಯ ಅಧ್ಯಾಹಾರವಾಗಿರುತ್ತದೆ. ಪಕ್ಷವಾಕ್ಯ ಮತ್ತು ನಿರ್ಣಯ ಎರಡು ಮಾತ್ರ ವ್ಯಕ್ತವಾಗಿ ಕಾಣುತ್ತವೆ. ಎರಡನೆಯ ಬಗೆಯ ಸಂಗ್ರಹಿಸಿದ ನ್ಯಾಯದಲ್ಲಿ ಪಕ್ಷವಾಕ್ಯ ಅಧ್ಯಾಹಾರವಾಗಿರುತ್ತದೆ; ಸಾಧ್ಯ ಮತ್ತು ನಿರ್ಣಯ ವಾಕ್ಯಗಳು ಪ್ರಕಟವಾಗಿರುತ್ತವೆ. ಮೂರನೆಯುದರಲ್ಲಿ ನಿರ್ಣಯ ಅಧ್ಯಾಹಾರವಾಗಿರುತ್ತದೆ; ಸಾಧ್ಯ ಮತ್ತು ಪಕ್ಷವಾಕ್ಯಗಳು ಪ್ರಕಟವಾಗಿರುತ್ತವೆ.

ಹೀಗೆ ಒಂದು ಅವಯುವವನ್ನು ಬಿಟ್ಟು ವಾದವನ್ನು ಮಂಡಿಸಿದಾಗ ವಾದ ಶಕ್ತಿಯುತವಾಗಿ ಕಾಣುತ್ತದೆ; ನಮ್ಮ ಆಲೋಚನೆಯ ಧಾಟಿಯೂ ಚುರುಕಾಗಿರುತ್ತದೆ. ಅಲ್ಲದೆ ಈ ರೀತಿಯ ವಾದ ಹೆಚ್ಚು ವಾಸ್ತವಿಕವಾಗಿ ತೋರುತ್ತದೆ. ನಾವು ಆಲೋಚಿಸುವಾಗ, ಸಾಧಾರಣವಾಗಿ ನಮ್ಮ ಆಲೋಚನೆಯನ್ನು ವಿಶ್ಲೇಷಣಕ್ಕೆ ಒಳಪಡಿಸಿ ಅದನ್ನು ಪರೀಕ್ಷಿಸುವುದಿಲ್ಲ. ಕಾರಣಾಂತರದಿಂದ ನಮ್ಮ ನಿರ್ಣಯದ ವಿಚಾರವಾಗಿ ನಮಗೆ ಸಂದೇಹ ಹುಟ್ಟಿದಾಗ ಅದರಲ್ಲಿ ಇರಬೇಕಾದ ಎಲ್ಲ ಅಂಶಗಳೂ ಇವೆಯೇ ಎಂದು ಪರೀಕ್ಷಿಸಲು, ಒಂದೊಂದು ಅಂಗವನ್ನೂ ಬಿಡಿಸಿ ಅಧ್ಯಾಹಾರವಾಗಿರುವುದನ್ನು ಸೇರಿಸಿ ಅವುಗಳನ್ನೆಲ್ಲ ಒಂದು ನಿರ್ದಿಷ್ಟ ಕ್ರಮದಲ್ಲಿ ಜ್ಞಾನಪಟಲದ ಮುಂದೆ ಇಟ್ಟುಕೊಳ್ಳುತ್ತೇವೆ. ನಾವು ಆಲೋಚಿಸಿ ತಿಳಿದ ನಿರ್ಣಯವನ್ನು ಇನ್ನೊಬ್ಬನಿಗೆ ಮನದಟ್ಟು ಮಾಡಿ ಕೊಡುವಾಗಲೂ ಈ ಅವಯುವಗಳನ್ನೆಲ್ಲ ಸಕ್ರಮವಾಗಿ ಅವನ ಮುಂದೆ ಇಡುತ್ತೇವೆ.

ಈ ಮೂರು ವಿಧವಾದ ಸಂಗ್ರಹಿಸಿದ ನ್ಯಾಯರೂಪಗಳಿಗೆ ಒಂದೊಂದು ಉದಾಹರಣೆಯನ್ನು ಕೊಟ್ಟು ಅವುಗಳನ್ನು ವಿಶದಪಡಿಸಬಹುದು.

ಸಾಕ್ರೆಟೀಸ್ ಮರ್ತ್ಯ, ಏಕೆಂದರೆ ಅವನು ಮಾನವ.

ಇದು ಮೊದಲನೆಯ ಬಗೆಯ ಸಂಗ್ರಹಿಸಿದ ನ್ಯಾಯ.

---

* Boyce Gibson, *The Problem of Logic*, p. 231 "The enthymeme is the natural mode of reasoning." Keynes, *Formal Logic*, p. 368, "It is the natural form of most of the arguments of everyday life."

ಇಲ್ಲಿ 'ಎಲ್ಲ ಮಾನವರೂ ಮರ್ತ್ಯರು' ಎಂಬ ಸಾಧ್ಯವಾಕ್ಯ ಅಧ್ಯಾಹಾರವಾಗಿದೆ. ನಿರ್ಣಯವಾಕ್ಯ ಮತ್ತು ಪಕ್ಷವಾಕ್ಯಗಳು ಮಾತ್ರ ಉಕ್ತವಾಗಿವೆ.

'ಎಲ್ಲ ಮಾನವರೂ ಮರ್ತ್ಯರು, ಆದ್ದರಿಂದ ಸಾಕ್ರೆಟೀಸ್ ಮಾನವ.'

ಇದು ಎರಡನೆಯ ಬಗೆಯ ಸಂಗ್ರಹಿಸಿದ ನ್ಯಾಯ. ಇಲ್ಲಿ ಸಾಧ್ಯವಾಕ್ಯ ಮತ್ತು ನಿರ್ಣಯವಾಕ್ಯಗಳು ಉಕ್ತವಾಗಿವೆ. ಸಾಕ್ರೆಟೀಸ್ ಮಾನವ ಎಂಬ ಪಕ್ಷವಾಕ್ಯ ಅಧ್ಯಾಹಾರವಾಗಿದೆ.

'ಎಲ್ಲ ಮಾನವರೂ ಮರ್ತ್ಯರು. ಸಾಕ್ರೆಟೀಸ್ ಮಾನವ.'

ಇದು ಮೂರನೆಯ ಬಗೆಯ ಸಂಗ್ರಹಿಸಿದ ನ್ಯಾಯ. ಇಲ್ಲಿ ನಿರ್ಣಯವಾಕ್ಯವಾದ 'ಸಾಕ್ರೆಟೀಸ್ ಮರ್ತ್ಯ' ಎಂಬುದು ಅಧ್ಯಾಹಾರವಾಗಿದೆ. ಉಳಿದ ಎರಡು ವಾಕ್ಯಗಳು ಮಾತ್ರ ಉಕ್ತವಾಗಿವೆ. ನಿರ್ಣಯವು ಅಧ್ಯಾಹಾರವಾಗಿರುವ ಈ ಮೂರನೆಯ ರೂಪವನ್ನು ಚತುರರಾದ ವಾಗ್ಮಿಗಳು ಅತ್ಯಂತ ಪರಿಣಾಮಕಾರಿಯಾದ ರೀತಿಯಲ್ಲಿ ಬಳಸಿಕೊಳ್ಳುತ್ತಾರೆ. ಒಬ್ಬ ವ್ಯಕ್ತಿಯನ್ನು ಕುರಿತು ಅವನು ಹೇಡಿಯೆಂದು ಅವಹೇಳನ ಮಾಡುವಾಗ ಚತುರನಾದ ವಾಗ್ಮಿ ಇವನು ಹೇಡಿ ಎಂದು ಬಾಯಿಬಿಟ್ಟು ಹೇಳುವುದಿಲ್ಲ. ಅದನ್ನು ಬಾಯಿಬಿಟ್ಟು ಹೇಳದೆಯೇ, ವ್ಯಕ್ತವಾಗಿ ಹೇಳಿದ್ದಕ್ಕಿಂತಲೂ ಚೆನ್ನಾಗಿ ಸಭಿಕರಿಗೆ ಗೋಚರವಾಗುವಂತೆ ಮಾಡುತ್ತಾನೆ. ಅವನ ಮಾತಿನ ಧೋರಣೆ ಹೀಗಿರುತ್ತದೆ: 'ಜಂಭ ಕೊಚ್ಚಿಕೊಳ್ಳುವವರೆಲ್ಲ ಹೇಡಿಗಳು. ಈ ಮಹನೀಯರು ತಾವು ಜಂಭ ಕೊಚ್ಚಿಕೊಳ್ಳುವವರು ಎಂಬುದನ್ನು ನಿಮಗೆ ತಕ್ಕಮಟ್ಟಿಗೆ ರುಜುವಾತು ಮಾಡಿಕೊಟ್ಟಿರುತ್ತಾರೆ.' ಹೀಗೆ ಹೇಳಿದಾಗ ಇವರು ಹೇಡಿಗಳು ಎಂಬುದು ಸ್ವತಸ್ಸಿದ್ಧವಾಗುತ್ತದೆ, ಅಲ್ಲದೆ ಬಾಯಿಬಿಟ್ಟು ಹೇಳಿದ್ದಕ್ಕಿಂತಲೂ ಪರಿಣಾಮಕಾರಿಯಾಗಿರುತ್ತದೆ.

ಸಂಗ್ರಹಿಸಿದ ಅನುಮಾನದಲ್ಲಿ ಬಿಟ್ಟುಹೋಗಿರುವ ವಾಕ್ಯವನ್ನು ಸೇರಿಸಿ ನ್ಯಾಯವನ್ನು ಪೂರ್ಣಮಾಡುವುದು ಸುಲಭ. ಸಾಧ್ಯವಾಕ್ಯ ಮತ್ತು ಪಕ್ಷವಾಕ್ಯಗಳು ಉಕ್ತವಾಗಿದ್ದಾಗ, ಸಾಮಾನ್ಯವಾಗಿ ಅವುಗಳಲ್ಲಿ ಮೊದಲನೆಯದು ಸಾಧ್ಯವಾಕ್ಯವಾಗಿಯೂ, ಎರಡನೆಯದು ಪಕ್ಷವಾಕ್ಯವಾಗಿಯೂ ಇರುತ್ತದೆ. ಇವೆರಡಕ್ಕೂ ಸಾಮಾನ್ಯವಾದ ಪದ ಮಧ್ಯವರ್ತಿಪದ, ಪಕ್ಷವಾಕ್ಯದಲ್ಲಿ ಅದನ್ನು ಬಿಟ್ಟರೆ ಉಳಿಯುವ ಪದ ಪಕ್ಷಪದ, ಸಾಧ್ಯವಾಕ್ಯದಲ್ಲಿ ಮಧ್ಯಪದವನ್ನು ಬಿಟ್ಟರೆ ಉಳಿಯುವ ಪದ ಸಾಧ್ಯಪದ. ಇವೆರಡನ್ನೂ ಸೇರಿಸಿ ನಿರ್ಣಯವನ್ನು ಸುಲಭವಾಗಿ ತಿಳಿಸಬಹುದು. ನಿರ್ಣಯವಾಕ್ಯವಿರುವ ಸಂಗ್ರಹಿಸಿದ ನ್ಯಾಯದಲ್ಲಿ, ಪಕ್ಷ ಮತ್ತು ಸಾಧ್ಯಪದಗಳು ಯಾವುವೆಂಬು

ದನ್ನು ಕಂಡುಹಿಡಿಯುವುದು ಮತ್ತೂ ಸುಲಭ. ನಿರ್ಣಯವಾಕ್ಯದ ವಿಶೇಷ್ಯ ಪದ ಪಕ್ಷಪದ ಅದರ ವಿಶೇಷಣಪದ ಸಾಧ್ಯಪದ. ಸಾಧ್ಯಪದವನ್ನಾಗಲಿ, ಪಕ್ಷಪದವನ್ನಾಗಲಿ ಒಂದನ್ನು ಮಾತ್ರ ಉಳ್ಳ ನ್ಯಾಯವಾಕ್ಯ ಸಾಧ್ಯವಾಕ್ಯ ಅಥವಾ ಪಕ್ಷವಾಕ್ಯವೆಂದು ತಿಳಿದುಕೊಂಡು ಅಧ್ಯಾಹಾರವಾಗಿರುವ ಪಕ್ಷ ವಾಕ್ಯವನ್ನಾಗಲಿ ಸಾಧ್ಯವಾಕ್ಯವನ್ನಾಗಲಿ ಸುಲಭವಾಗಿ ರಚಿಸಿಕೊಳ್ಳ ಬಹುದು.

ನಿತ್ಯಜೀವನದಲ್ಲಿ ಸಂಗ್ರಹಿಸಿದ ನ್ಯಾಯರೂಪ ಸ್ವಾಭಾವಿಕವಾದ ವಾದ ರೂಪವಾದ್ದರಿಂದ ಅದನ್ನೇ ಬೇರೆ ಒಂದು ನ್ಯಾಯರೂಪವಾಗಿ ಎಣಿಸುವುದು ಅಸಂಗತ ಎಂದು ಕೆಲವು ಪಾಶ್ಚಾತ್ಯ ತಾರ್ಕಿಕರು ಅಭಿಪ್ರಾಯಪಡುತ್ತಾರೆ.*

ಪಾಶ್ಚಾತ್ಯ ತರ್ಕಶಾಸ್ತ್ರ ಚರಿತ್ರೆಯಲ್ಲಿ 'ಎಂಥಿಮೀಮ್' ಎಂಬ ಪದವನ್ನು ಮೊದಲು ಉಪಯೋಗಿಸಿದವನು ಅರಿಸ್ಟಾಟಲ್. ಆದರೆ ಅವನು ಆ ಪದಕ್ಕೆ ಕೊಟ್ಟಿರುವ ಅರ್ಥ ಆಧುನಿಕರು ಕೊಟ್ಟಿರುವ ಅರ್ಥದಿಂದ ಭಿನ್ನವಾಗಿರುತ್ತದೆ. ಆಧುನಿಕರು 'ಎಂಥಿಮೀಮ್' ಎಂದರೆ ಸಂಗ್ರಹಿಸಿದ ನ್ಯಾಯವೆಂದು ಬಗೆದಿರುತ್ತಾರೆ. ಅರಿಸ್ಟಾಟಲ್ ಅದನ್ನು ಬೇರೆಯ ಅರ್ಥದಲ್ಲಿ ಉಪಯೋಗಿ ಸಿರುತ್ತಾನೆ. ಅರಿಸ್ಟಾಟಲನ ಅಭಿಪ್ರಾಯದಲ್ಲಿ 'ಸಿಲಜಿಸಂ' ತರ್ಕದೃಷ್ಟಿಯಿಂದ ಪರಿಪೂರ್ಣವಾದ ತಾರ್ಕಿಕರೂಪ. ಇಂಥ ಪರಿಪೂರ್ಣವಾದ ರೂಪವನ್ನು ನಾವು ತರ್ಕಶಾಸ್ತ್ರದ ಪಠ್ಯಪುಸ್ತಕಗಳಲ್ಲೂ ಪ್ರೌಢಶಾಸ್ತ್ರ ಗ್ರಂಥಗಳಲ್ಲೂ ಕಾಣಬಹುದೇ ವಿನಾ ಸಾಮಾನ್ಯ ವ್ಯವಹಾರದಲ್ಲಿ ಅದು ಬಳಕೆಯಲ್ಲಿಲ್ಲ. ಸಾಮಾನ್ಯವಾಗಿ ನಿತ್ಯವ್ಯವಹಾರದಲ್ಲಿ ಬಳಕೆಯಲ್ಲಿರುವ ವಾದಗಳು ಪರಿಪೂರ್ಣ ವಾದುವಲ್ಲ. ಆದರೂ ದಿನಚರಿಯ ಜೀವನಕ್ಕೆ ಅವು ಸಾಕು; ಹೆಚ್ಚು ಕಡಮೆ ಅವು ನಮಗೆ ತೃಪ್ತಿಕರವಾದುವೆಂದೂ, ನಂಬಲರ್ಹವಾದುವೆಂದೂ ತೋರು ತ್ತವೆ. ಇಂಥ ವಾದಗಳನ್ನು ಅರಿಸ್ಟಾಟಲ್ ಎಂಥಿಮೀಮ್ಸ್ ಎಂದು ಕರೆದಿರುತ್ತಾನೆ. ಇವು ಎರಡು ಬಗೆಯಾಗಿವೆ. (೧) ಸಂಭಾವನಾ ಪ್ರತಿಜ್ಞೆ ಗಳನ್ನು ಆಧಾರವಾಗಿವುಳ್ಳ ವಾದಗಳು. ಸಂಭಾವ್ಯಪ್ರತಿಜ್ಞೆಗಳು ಪೂರ್ಣ ವಾಗಿ ನಿಜವಲ್ಲ, ಅವು ಬಹುಮಟ್ಟಿಗೆ ನಿಜ. 'ಜೈನರು ಸುಳ್ಳು ಹೇಳುವುದಿಲ್ಲ, ಇವನು ಜೈನನಾದುದರಿಂದ ಬಹುಶಃ ಸುಳ್ಳು ಹೇಳುವುದಿಲ್ಲ.' ಇದು ಒಂದು

* R. Latta and A. Macbeath, *Elements of Logic*, p. 217. "Enthymemes, then, do not constitute a separate class of *logical* arguments and they require no special consideration." . . . If the term enthymeme is to be used at all it seems better to use it in Aristotle's sense than in the one in which it has no logical significance."

ಬಗೆಯ ಎಂಥಿಮೀಮ್. ಯಾವುದಾದರೂ ಒಂದು ಚಹರೆಯನ್ನು ಅಥವಾ ಗುರುತನ್ನು ಆಧಾರವಾಗಿ ಇಟ್ಟುಕೊಂಡು ವಾದಮಾಡುವುದು ಇನ್ನೊಂದು ಬಗೆಯ ಎಂಥಿಮೀಮ್. ಬೊಕ್ಕತಲೆ ಹೆಚ್ಚಿನ ಬುದ್ಧಿಶಕ್ತಿಯ ಕುರುಹು. ಇವನದು ಬೊಕ್ಕತಲೆ. ಬಹುಶಃ ಇವನು ತುಂಬ ಬುದ್ಧಿಶಕ್ತಿಯುಳ್ಳವನು. ಇದು ಎರಡನೆಯ ಬಗೆಯ ಎಂಥಿಮೀಮಿಗೆ ಉದಾಹರಣೆ.

## ಅಭ್ಯಾಸಗಳು (೧೪)

೧. ಸಂಗ್ರಹಿಸಿದ ಅನುಮಾನ (Enthymeme) ಎಂದರೆ ಏನು? ಅದರ ಸ್ವರೂಪವನ್ನು ಉದಾಹರಣೆಗಳ ಮೂಲಕ ಸ್ಪಷ್ಟಪಡಿಸಿ.

೨. ಸಂಗ್ರಹಿಸಿದ ಅನುಮಾನ ಎಷ್ಟು ಬಗೆಯಾಗಿರಬಹುದು? ಉದಾಹರಣೆಗಳನ್ನು ಕೊಟ್ಟು ವಿವರಿಸಿ.

# ೧೫. ನ್ಯಾಯಸರಪಣಿಗಳು

## (Chains of Reasoning)

ಸಾಮಾನ್ಯವಾಗಿ ಶಾಸ್ತ್ರಗ್ರಂಥಗಳಲ್ಲೂ ದಿನಚರಿಯ ವ್ಯವಹಾರಗಳಲ್ಲೂ ನ್ಯಾಯಗಳು (Syllogism) ಒಂದನ್ನೊಂದು ಬಿಟ್ಟು, ಒಂದಕ್ಕೊಂದು ಸಂಬಂಧವಿಲ್ಲದೆ, ಒರಚ್ಚಾಗಿ ಇರುವುದಿಲ್ಲ. ಸರಪಣಿಯಲ್ಲಿ ಕೊಂಡಿಗಳು ಒಂದಕ್ಕೊಂದು ಎಡೆಬಿಡದೆ ಸೇರಿಕೊಂಡು ಇರುವಂತೆ ವಾದದಲ್ಲಿ ನ್ಯಾಯಗಳೂ ಒಂದಕ್ಕೊಂದು ಅವಿಚ್ಛಿನ್ನವಾಗಿ ಸೇರಿಕೊಂಡಿರುತ್ತವೆ. ಸಾಮಾನ್ಯವಾಗಿ ನಮ್ಮ ವಾದವು ವಾದಸರಣಿಯಾಗಿರುವ ಸಂಭವವೇ ಹೆಚ್ಚು; ನಮ್ಮ ವಾದವು ಹಲವು ನ್ಯಾಯಗಳಿಂದ ಕೂಡಿರುತ್ತದೆ. ಹಾಗೆ ಕೂಡಿರುವಾಗ ಒಂದು ಇನ್ನೊಂದಕ್ಕೆ ಆಧಾರವಾಗಿ ಅಥವಾ ಆಧೇಯವಾಗಿರುತ್ತದೆ. ಇನ್ನೊಂದಕ್ಕೆ ಆಧಾರವಾದ ನ್ಯಾಯಕ್ಕೆ ಪಾಶ್ಚಾತ್ಯ ತಾರ್ಕಿಕರು 'ಪ್ರೋಸಿಲಜಿಸಂ' ಎಂದು ಹೆಸರು ಕೊಟ್ಟಿರುತ್ತಾರೆ. ಇನ್ನೊಂದು ನ್ಯಾಯವನ್ನು ಆಧಾರವುಳ್ಳ ನ್ಯಾಯಕ್ಕೆ ಅಂದರೆ ಆಧೇಯನ್ಯಾಯಕ್ಕೆ 'ಎಪಿಸಿಲಜಿಸಂ' ಎಂದು ಹೆಸರು ಕೊಟ್ಟಿರುತ್ತಾರೆ. ಇಲ್ಲಿ 'ಪ್ರೊ' ಎಂದರೆ ಮೊದಲನೆಯದು, 'ಎಪಿ' ಎಂದರೆ ತದನಂತರದ್ದು ಎಂದು ಅರ್ಥ. ಆದರೆ ಈ ನ್ಯಾಯಗಳನ್ನು ಮೊದಲನೆಯ ನ್ಯಾಯ, ತದನಂತರದ ನ್ಯಾಯ ಎಂದು ಹೇಳುವುದು ವಾದಸರಣಿಯ ನಿಜವಾದ ಪರಿಸ್ಥಿತಿಗೆ ಸಮಂಜಸವಾಗಿಲ್ಲ. ಆಧಾರನ್ಯಾಯದಿಂದ ಪ್ರಾರಂಭಿಸಿ ಆಧೇಯ ನ್ಯಾಯದ ಕಡೆಗೆ ವಾದ ಸಾಗಿದಾಗ ಒಂದನ್ನು ಮೊದಲನೆಯದೆಂದೂ, ಇನ್ನೊಂದನ್ನು ಎರಡನೆಯದೆಂದೂ ಕರೆಯಬಹುದು. ನಮ್ಮ ವಾದಸರಣಿ ಸಾಮಾನ್ಯವಾಗಿ ಹೀಗೆಯೇ ಇರುತ್ತದೆ. ಆದರೆ ಕೆಲವು ವೇಳೆ ನಮ್ಮ ವಾದ ಆಧೇಯನ್ಯಾಯದಿಂದ ಪ್ರಾರಂಭಿಸಿ ಅದರ ಆಧಾರವಾದ ನ್ಯಾಯದ ಕಡೆಗೆ ಸಾಗಬಹುದು. ಇಂಥ ಸಂದರ್ಭಗಳಲ್ಲಿ ಮೊದಲನೆಯದನ್ನು 'ಪ್ರೋಸಿಲಜಿಸಂ' ಎಂದು ಕರೆಯಲಾಗುವುದಿಲ್ಲ. 'ಪ್ರೊ' ಮತ್ತು 'ಎಪಿ' ಎಂಬುದರ ಬದಲಾಗಿ 'ಆಧಾರನ್ಯಾಯ,' 'ಆಧೇಯನ್ಯಾಯ' ಎಂಬ ಪದಗಳನ್ನು ಉಪಯೋಗಿಸುವುದು ಯುಕ್ತ. ವಾದಸರಣಿ ಆಧಾರನ್ಯಾಯದಿಂದ ಆಧೇಯದ ಕಡೆಗೆ ಸಾಗಿದಾಗ ಅದನ್ನು ಮುನ್ನಡೆಯ (Progressive) ನ್ಯಾಯವೆಂದೂ, ಆಧೇಯದಿಂದ ಆಧಾರನ್ಯಾಯದ ಕಡೆಗೆ ಸಾಗಿದಾಗ ಹಿನ್ನಡೆಯ (Regressive) ನ್ಯಾಯವೆಂದೂ ಕರೆಯುವುದುಂಟು.

ಈ ಎರಡು ಬಗೆಯಾದ ವಾದದ ನಡೆಯೂ ಆವಶ್ಯಕ. ಮುನ್ನಡೆಯ ವಾದಸರಣಿಯಲ್ಲಿ ನಾವು ಕಾರಣದಿಂದ ಕಾರ್ಯದ ಕಡೆಗೆ ಸಾಗುತ್ತೇವೆ. ಹಿನ್ನಡೆಯ ವಾದಸರಣಿಯಲ್ಲಿ ವಾದವು ಕಾರ್ಯದಿಂದ ಕಾರಣದ ಕಡೆಗೆ ಸಾಗುತ್ತದೆ. ಆಧಾರದಿಂದ ಆಧೇಯದ ಕಡೆಗೂ, ಆಧೇಯದಿಂದ ಆಧಾರದ ಕಡೆಗೂ ಮುಂದಕ್ಕೂ ಹಿಂದಕ್ಕೂ ಸಾಗುವುದು ಆಲೋಚನೆಯ ಸ್ವಭಾವ.

ಹಲವು ಆಧಾರ ಆಧೇಯನ್ಯಾಯಗಳನ್ನೊಳಗೊಂಡ ವಾದವನ್ನು ನ್ಯಾಯ ಸರಪಣಿ (Chain of reasoning) ಎಂದು ಕರೆಯಬಹುದು. ಈ ನ್ಯಾಯ ಸರಪಣಿಗೆ ಪಾಶ್ಚಾತ್ಯ ತರ್ಕದಲ್ಲಿ ಸೊರೈಟೀಸ್ (Sorities) ಎಂದು ಹೆಸರು ಕೊಟ್ಟಿದೆ.

ಸೊರೈಟೀಸ್ ಎರಡು ವಿಧವಾಗಿರಬಹುದು. ಅದು ಮುನ್ನಡೆಯ ನ್ಯಾಯ ವಾಗಬಹುದು, ಅಥವ ಹಿನ್ನಡೆಯ ನ್ಯಾಯವಾಗಬಹುದು. ಮುನ್ನಡೆಯ ನ್ಯಾಯಸರಪಣಿಯನ್ನು ಅರಿಸ್ಟಾಟಲಿನ ಸೊರೈಟೀಸ್ ಎಂದೂ, ಹಿನ್ನಡೆಯ ನ್ಯಾಯಸರಪಣಿಯನ್ನು ಗಾಕ್ಲಿನೀಸ್‌ನ ಸೊರೈಟೀಸ್ ಎಂದು ಕರೆಯು ವುದುಂಟು.

ಮನ್ನಡೆಯ ಅಥವಾ ಅರಿಸ್ಟಾಟಲಿನ ಸೊರೈಟೀಸ್‌ನ ಆಧಾರ ಪ್ರತಿಜ್ಞೆ ಗಳಲ್ಲಿ ಮೊದಲನೆಯದರ ವಿಶೇಷಣಪದ ಎರಡನೆಯದರ ವಿಶೇಷ್ಯಪದ ವಾಗಿರುತ್ತದೆ, ಎರಡನೆಯದರ ವಿಶೇಷಣಪದ ಮೂರನೆಯದರ ವಿಶೇಷ್ಯಪದ ವಾಗಿರುತ್ತದೆ. ಹೀಗೆ ನಿರ್ಣಯವನ್ನು ಮುಟ್ಟುವವರೆಗೂ ಹಿಂದಿನ ಪ್ರತಿಜ್ಞೆಯ ವಿಶೇಷಣಪದ ಮುಂದಿನ ಪ್ರತಿಜ್ಞೆಯ ವಿಶೇಷ್ಯವಾಗುತ್ತದೆ. ನಿರ್ಣಯ ಪ್ರತಿಜ್ಞೆಯು ಅದರ ಹಿಂದಿನ ಪ್ರತಿಜ್ಞೆಯ ವಿಶೇಷಣಪದವನ್ನು ವಿಶೇಷಣ ವಾಗಿಯೂ ಮೊದಲನೆಯ ಪ್ರತಿಜ್ಞೆಯ ವಿಶೇಷ್ಯಪದವನ್ನು ವಿಶೇಷ್ಯಪದ ವಾಗಿಯೂ ಪಡೆದಿರುತ್ತದೆ. ಅದರ ಸಂಜ್ಞಾರೂಪ ಹೀಗಿರುತ್ತದೆ.

ಎಲ್ಲ A ಗಳೂ B ಗಳಾಗಿರುತ್ತವೆ
ಎಲ್ಲ B ಗಳೂ C ಗಳಾಗಿರುತ್ತವೆ
ಎಲ್ಲ C ಗಳೂ D ಗಳಾಗಿರುತ್ತವೆ
ಎಲ್ಲ D ಗಳೂ E ಗಳಾಗಿರುತ್ತವೆ
∴ ಎಲ್ಲ A ಗಳೂ E ಗಳಾಗಿರುತ್ತವೆ



ಈ ವಾದ ಸರಪಣಿಯನ್ನು ಮೊದಲನೆ ಆಕೃತಿಯ ಬಾರ್ಬರಾ ರೂಪದ ಮೂರು ನ್ಯಾಯಗಳಾಗಿ ವಿಶ್ಲೇಷಿಸಬಹುದು.

(೧) ಎಲ್ಲ B ಗಳೂ C ಗಳಾಗಿರುತ್ತವೆ
ಎಲ್ಲ A ಗಳೂ B ಗಳಾಗಿರುತ್ತವೆ
∴ ಎಲ್ಲ A ಗಳೂ C ಗಳಾಗಿರುತ್ತವೆ

(೨) ಎಲ್ಲ C ಗಳೂ D ಗಳಾಗಿರುತ್ತವೆ
ಎಲ್ಲ A ಗಳೂ C ಗಳಾಗಿರುತ್ತವೆ
∴ ಎಲ್ಲ A ಗಳೂ D ಗಳಾಗಿರುತ್ತವೆ

(೩) ಎಲ್ಲ D ಗಳೂ E ಗಳಾಗಿರುತ್ತವೆ
ಎಲ್ಲ A ಗಳೂ D ಗಳಾಗಿರುತ್ತವೆ
∴ ಎಲ್ಲ A ಗಳೂ E ಗಳಾಗಿರುತ್ತವೆ

ಈ ನ್ಯಾಯಸಂತಾನದಲ್ಲಿ ಹಿಂದಿನ ನ್ಯಾಯದ ನಿರ್ಣಯ ಮುಂದಿನ ನ್ಯಾಯದ ಪಕ್ಷವಾಕ್ಯವಾಗುತ್ತದೆ. ಮೊದಲನೆಯ ನ್ಯಾಯವನ್ನು ಬಿಟ್ಟರೆ ಉಳಿದವುಗಳಲ್ಲಿ ಸಾಧ್ಯಪ್ರತಿಜ್ಞೆಗಳು ಮಾತ್ರ ಉಕ್ತವಾಗಿದೆ; ಪಕ್ಷಪ್ರತಿಜ್ಞೆ ಅಧ್ಯಾಹಾರವಾಗಿದೆ.

ಅರಿಸ್ಟಾಟಲಿನ ಸೋರೈಟೀಸ್ ಅನುಸರಿಸಬೇಕಾದ ನಿಬಂಧನೆಗಳು ಎರಡು: (೧) ಕೊನೆಯ ಆಧಾರವಾಕ್ಯ ಮಾತ್ರ ನೇತ್ಯರ್ಥಕವಾಗಿರಬಹುದು; (೨) ಮೊದಲನೆಯ ಆಧಾರವಾಕ್ಯ ಮಾತ್ರ ಭಾಗಾನ್ವಯ ಪ್ರತಿಜ್ಞೆ (Particular) ಯಾಗಿರಬಹುದು.

(೧) ಕೊನೆಯ ಆಧಾರವಾಕ್ಯ ಮಾತ್ರ ನೇತ್ಯರ್ಥಕವಾಗಿರಬಹುದು. ಏಕೆಂದರೆ, ಅದು ವಿನಾ ಬೇರೆಯವು ನೇತ್ಯರ್ಥಕವಾಗಿದ್ದರೆ ನಿರ್ಣಯವು ನೇತ್ಯರ್ಥಕವಾಗಿರುತ್ತದೆ. ಅದು ಮುಂದಿನ ನ್ಯಾಯದ ಪಕ್ಷವಾಕ್ಯವಾಗುತ್ತದೆ. ಆದರೆ ಮೊದಲನೆಯ ಆಕೃತಿಯ ನಿಬಂಧನೆಗನುಸಾರವಾಗಿ ಪಕ್ಷವಾಕ್ಯ ನೇತ್ಯರ್ಥಕವಾಗಿರಕೂಡದು. ಕೊನೆಯ ಆಧಾರವಾಕ್ಯದ ವಿನಾ ಉಳಿದವು ನೇತ್ಯರ್ಥಕವಾಗಿದ್ದರೆ ಮೊದಲನೆ ಆಕೃತಿಯ ನಿಬಂಧನೆಯನ್ನು ಮುರಿದು ಇಲ್ಲಿಸಿಟ್ ಮೇಜರ್ ದೋಷಕ್ಕೆ ಗುರಿಯಾಗುತ್ತವೆ. ಆದುದರಿಂದ ಅವು ನೇತ್ಯರ್ಥಕವಾಗಿರಕೂಡದು. ಕೊನೆಯ ಆಧಾರವಾಕ್ಯ ನೇತ್ಯರ್ಥಕವಾಗಿದ್ದರೆ ಈ ಬಾಧಕವಿಲ್ಲ. ಏಕೆಂದರೆ ಅದು ಕೊನೆಯ ನ್ಯಾಯದಲ್ಲಿ

ಯಾವಾಗಲೂ ಸಾಧ್ಯವಾಕ್ಯವಾಗಿಯೇ ಇರುತ್ತದೆ, ನೇತ್ಯರ್ಥಕ ಸಾಧ್ಯ ವಾಕ್ಯದ ವಿಶೇಷಣಪದವಾದ ಸಾಧ್ಯಪದ ಪೂರ್ಣನಿರ್ದೇಶನ ಪಡೆದಿರುತ್ತಾ ದುದರಿಂದ, ಇಲ್ಲಿಸಿಟ್ ಮೇಜರ್ ದೋಷಕ್ಕೆ ಅವಕಾಶವಿಲ್ಲ.

(೨) ಮೊದಲನೆಯ ಆಕೃತಿಯ ನಿಬಂಧನೆಯ ಪ್ರಕಾರ ಮೊದಲನೆಯ ಆಕೃತಿಯ ನ್ಯಾಯದಲ್ಲಿ ಸಾಧ್ಯವಾಕ್ಯ ಭಾಗಾನ್ವಯ ಪ್ರತಿಜ್ಞೆಯಾಗಿರ ಕೂಡದು. ಹಾಗೆ ಅದು ಭಾಗಾನ್ವಯ ಪ್ರತಿಜ್ಞೆಯಾದರೆ ಆ ವಾದ ಅಸಾಧುವಾಗುತ್ತದೆ. ಅರಿಸ್ಟಾಟಲಿನ ಸೊರೈಟೀಸಿನಲ್ಲಿ ಮೊದಲನೆಯ ಆಧಾರ ವಾಕ್ಯವನ್ನು ಬಿಟ್ಟರೆ ಉಳಿದುವೆಲ್ಲ ಸಾಧ್ಯಪ್ರತಿಜ್ಞೆಗಳಾಗಿರುತ್ತವೆ. ಅವು ಭಾಗಾನ್ವಯ ಪ್ರತಿಜ್ಞೆಗಳಾದರೆ ಮೊದಲನೆಯ ಆಕೃತಿಯ ನಿಬಂಧನೆಯನ್ನು ಉಲ್ಲಂಘಿಸಿ, ಅಂದರೆ ಮಧ್ಯಮಪದ ಒಂದು ಸಾರಿಯೂ ಪೂರ್ಣ ನಿರ್ದೇಶನ ವ್ಯಾಪ್ತಿ ಪಡೆಯದೆ ಆ ನ್ಯಾಯ ಅಸಾಧುವಾಗುತ್ತದೆ. ಅರಿಸ್ಟಾಟಲಿನ ಸೊರೈಟೀಸಿನಲ್ಲಿ ಮೊದಲನೆಯ ಆಧಾರವಾಕ್ಯ ಯಾವಾಗಲೂ ಪಕ್ಷ ಪ್ರತಿಜ್ಞೆಯೇ ಆಗಿರುವುದರಿಂದ ಅದು ಸಾಧುವಾದ ನ್ಯಾಯವಾಗುತ್ತದೆ.

ಗಾಕ್ಲಿನೀಸ್‌ನ ಸೊರೈಟೀಸ್ ಅರಿಸ್ಟಾಟಲಿನ ಸೊರೈಟೀಸಿನ ಪ್ರತಿರೂಪ. ಅರಿಸ್ಟಾಟಲಿನ ಸೊರೈಟೀಸ್ ಮುನ್ನಡೆಯ ವಾದಸರಣಿಯಾದರೆ, ಗಾಕ್ಲಿನೀಸ್‌ನ ಸೊರೈಟೀಸ್ ಹಿನ್ನಡೆಯ ವಾದಸರಣಿ. ಅದು ಈ ರೀತಿ ಇರುತ್ತದೆ.

ಎಲ್ಲ D ಗಳೂ E ಗಳಾಗಿರುತ್ತವೆ
ಎಲ್ಲ C ಗಳೂ D ಗಳಾಗಿರುತ್ತವೆ
ಎಲ್ಲ B ಗಳೂ C ಗಳಾಗಿರುತ್ತವೆ
ಎಲ್ಲ A ಗಳೂ B ಗಳಾಗಿರುತ್ತವೆ
∴ ಎಲ್ಲ A ಗಳೂ E ಗಳಾಗಿರುತ್ತವೆ

ಈ ವಾದಸರಣಿಯನ್ನು ಮೊದಲನೆ ಆಕೃತಿಯ ಬಾರ್ಬರಾ ರೂಪದ ಮೂರು ನ್ಯಾಯಗಳನ್ನಾಗಿ ವಿಸ್ತರಿಸಿ ತಿಳಿಸಬಹುದು.

(೧) ಎಲ್ಲ D ಗಳೂ E ಗಳಾಗಿರುತ್ತವೆ
ಎಲ್ಲ C ಗಳೂ D ಗಳಾಗಿರುತ್ತವೆ
∴ ಎಲ್ಲ C ಗಳೂ E ಗಳಾಗಿರುತ್ತವೆ

(೨) ಎಲ್ಲ C ಗಳೂ E ಗಳಾಗಿರುತ್ತವೆ
ಎಲ್ಲ B ಗಳೂ C ಗಳಾಗಿರುತ್ತವೆ
∴ ಎಲ್ಲ B ಗಳೂ E ಗಳಾಗಿರುತ್ತವೆ

(೩) ಎಲ್ಲ B ಗಳೂ E ಗಳಾಗಿರುತ್ತವೆ
ಎಲ್ಲ A ಗಳೂ B ಗಳಾಗಿರುತ್ತವೆ
∴ ಎಲ್ಲ A ಗಳೂ E ಗಳಾಗಿರುತ್ತವೆ

ಈ ವಾದಸರಣಿಯಲ್ಲಿ ಕೊನೆಯ ಆಧಾರವಾಕ್ಯದ ವಿಶೇಷ್ಯಪದವು ನಿರ್ಣಯದ ವಿಶೇಷ್ಯವಾಗಿಯೂ ಮೊದಲನೆಯ ಆಧಾರವಾಕ್ಯದ ವಿಶೇಷಣ ಪದವು ನಿರ್ಣಯದ ವಿಶೇಷಣಪದವಾಗಿಯೂ ಸೇರಿಕೊಂಡಿವೆ. ಮೊದಲನೆಯ ನ್ಯಾಯದ ನಿರ್ಣಯವು, ಎರಡನೆಯದರಲ್ಲಿ ಸಾಧ್ಯವಾಕ್ಯವಾಗುತ್ತದೆ, ಎರಡನೆಯ ನ್ಯಾಯದ ನಿರ್ಣಯವು ಮೂರನೆಯದರ ಸಾಧ್ಯವಾಕ್ಯವಾಗುತ್ತದೆ. ಅರಿಸ್ಟಾಟಲಿನ ನ್ಯಾಯಸರಣಿಯಲ್ಲಾದರೊ ಹಿಂದಿನ ನ್ಯಾಯದ ನಿರ್ಣಯ ಮುಂದಿನ ನ್ಯಾಯದ ಪಕ್ಷವಾಕ್ಯವಾಗುತ್ತದೆ.

ಗಾಕ್ಲಿನೀಸನ ಸೊರೈಟೀಸ್ ಎರಡು ನಿಬಂಧನೆಗಳನ್ನು ಪಾಲಿಸಬೇಕು. (೧) ಅದರ ಮೊದಲನೆಯ ಆಧಾರವಾಕ್ಯ ಮಾತ್ರ ನೇತ್ಯರ್ಥಕವಾಗಿರಬಹುದು (೨) ಅದರ ಕೊನೆಯ ಆಧಾರವಾಕ್ಯ ಮಾತ್ರ ಭಾಗಾನ್ವಯ ಪ್ರತಿಜ್ಞೆಯಾಗಿ ಇರಬಲ್ಲದು.

(೧) ಮೊದಲನೆಯ ಆಧಾರವಾಕ್ಯವಲ್ಲದೆ ಇತರ ಆಧಾರವಾಕ್ಯಗಳು ನೇತ್ಯರ್ಥಕವಾದರೆ, ಮೊದಲನೆಯ ಆಕೃತಿಯ ನಿಬಂಧನೆಯನ್ನು ಉಲ್ಲಂಘಿಸಿದಂತಾಗುವುದು; ಸಾಧ್ಯಪದದ ದೋಷ ಪ್ರಾಪ್ತವಾಗುತ್ತದೆ.

(೨) ಕೊನೆಯ ಆಧಾರವಾಕ್ಯವಲ್ಲದೆ ಇತರ ಆಧಾರವಾಕ್ಯಗಳು ಭಾಗಾನ್ವಯ ಪ್ರತಿಜ್ಞೆಗಳಾದರೆ, ಆ ವಾಕ್ಯವನ್ನು ಆಧಾರವಾಕ್ಯವುಳ್ಳ ನ್ಯಾಯದಲ್ಲಿ ನಿರ್ಣಯವು ಭಾಗಾನ್ವಯ ಪ್ರತಿಜ್ಞೆಯಾಗಿರುತ್ತದೆ. ಭಾಗಾನ್ವಯ ಪ್ರತಿಜ್ಞೆಯ ರೂಪವಾದ ಈ ನಿರ್ಣಯವು ಮುಂದಿನ ನ್ಯಾಯದ ಸಾಧ್ಯವಾಕ್ಯವಾಗುತ್ತದೆ. ಮೊದಲನೆಯ ಆಕೃತಿಯಲ್ಲಿ ಸಾಧ್ಯವಾಕ್ಯ ಭಾಗಾನ್ವಯ ಪ್ರತಿಜ್ಞೆಯಾಗಲಾರದು. ಹಾಗೆ ಆದರೆ ಆ ನ್ಯಾಯದ ಮಧ್ಯಮಪದಗಳ ನಿರ್ದೇಶನವ್ಯಾಪ್ತಿ ಅಪೂರ್ಣವಾಗಿರುತ್ತದೆ.

ಮೇಲಿನ ನ್ಯಾಯಸರಪಣಿಗಳ ಆಧಾರವಾಕ್ಯಗಳೂ ನಿರ್ಣಯವಾಕ್ಯಗಳೂ ನಿರುಪಾಧಿಕ ಪ್ರತಿಜ್ಞೆಗಳಾಗಿವೆ. ಇವಲ್ಲದೆ ಸೋಪಾಧಿಕ ಪ್ರತಿಜ್ಞೆಗಳನ್ನೊಳಗೊಂಡ ವಾದಸರಪಣಿಗಳು ಸಾಧ್ಯ. ಅವು ಈ ರೀತಿ ಇರಬಹುದು.

A ಯು B ಆದರೆ, C ಯು D ಆಗಿರುತ್ತದೆ.
C ಯು D ಆದರೆ, E ಯು F ಆಗಿರುತ್ತದೆ.

E ಯು F ಆದರೆ, G ಯು H ಆಗಿರುತ್ತದೆ.
A ಯು B ಆದರೆ, G ಯು H ಆಗಿರುತ್ತದೆ.

ಅಥವಾ ∴ A ಯು B ಆಗಿರುತ್ತದೆ ∴ G ಯು H ಆಗಿರುತ್ತದೆ
ಅಥವಾ G ಯು H ಆಗಿರುವುದಿಲ್ಲ ∴ A ಯು B ಆಗಿರುವುದಿಲ್ಲ.

ಹೀಗೆಯೇ ಸಂಬಂಧಪ್ರತಿಜ್ಞೆಗಳುಳ್ಳ ನ್ಯಾಯಸರಪಣಿಗಳನ್ನು ರಚಿಸ ಬಹುದು.

A=B
B=C
C=D
∴ A=D

A ಯು B ಗಿಂತ ದೊಡ್ಡದು
B ಯು C ಗಿಂತ ದೊಡ್ಡದು
C ಯು D ಗಿಂತ ದೊಡ್ಡದು
∴ A ಯು D ಗಿಂತ ದೊಡ್ಡದು
A ಯು B ಯ ಹಿಂದಿದೆ
B ಯು C ಯ ಹಿಂದಿದೆ
C ಯು D ಯ ಹಿಂದಿದೆ
∴ A ಯು D ಯ ಹಿಂದಿದೆ

ಸಂಬಂಧಮೂಲ ನ್ಯಾಯ ಅತ್ಯಂತ ಮುಖ್ಯವಾದುದು. ಆದ್ದರಿಂದ ಸಂಬಂಧಪ್ರತಿಜ್ಞೆಗಳನ್ನು ನ್ಯಾಯದ ಸ್ವರೂಪವನ್ನು ತಿಳಿಸಲು ಮುಂದೆ ಒಂದು ಅಧ್ಯಾಯವನ್ನೇ ಮೀಸಲಾಗಿಟ್ಟಿದೆ.

ಈ ಅಧ್ಯಾಯವನ್ನು ಮುಗಿಸುವುದಕ್ಕೆ ಮುಂಚೆ ಎಪಿಕೈರೆಮಾ (Epicheirema) ಎಂಬ ಒಂದು ಬಗೆಯ ವಾದವನ್ನು ವಿವರಿಸಬೇಕು. ಎಪಿಕೈರೆಮಾ ವಾದದಲ್ಲಿ ಸಿಲಜಿಸಂನ ಒಂದು ಅಥವಾ ಎರಡು ಆಧಾರವಾಕ್ಯಗಳಿಗೆ ಕಾರಣ ಬೋಧವಾದ ಪ್ರತಿಜ್ಞೆಯನ್ನು ಸೇರಿಸಿರುತ್ತದೆ.[1] ವೆಲ್ಟನ್ ಎಂಬ ತರ್ಕ

---

[1] ಎಪಿಕೈರೆಮಾವನ್ನು ಈಚಿನ ತಾರ್ಕಿಕರು ಈ ಅರ್ಥದಲ್ಲಿ ಉಪಯೋಗಿಸುತ್ತಾರೆ. ಅರಿಸ್ಟಾಟಲ್ ಇದನ್ನು ಬೇರೆಯ ಅರ್ಥದಲ್ಲಿ ಉಪಯೋಗಿಸಿರುತ್ತಾನೆ. ಈ ವಿವರಗಳನ್ನು ಇಲ್ಲಿ ತಿಳಿಸುವುದು ಅನಾವಶ್ಯಕ.

ಶಾಸ್ತ್ರಜ್ಞನು ಇದಕ್ಕೆ ಉದಾಹರಣೆಯಾಗಿ ಕೊಟ್ಟಿರುವುದನ್ನು [2] ಇಲ್ಲಿ ಭಾಷಾಂತರಿಸಿದೆ.

ಆಮದಾಗುವ ವಸ್ತುಗಳ ಮೇಲೆ ಅನಾವಶ್ಯಕವಾದ ತೆರಿಗೆಗಳನ್ನು ಹೇರುವುದು ಅಸಾಧುವಾದ ನೀತಿ ; ಏಕೆಂದರೆ ಅದು ಒಂದು ದೇಶದ ವ್ಯಾಪಾರಕ್ಕೆ ಅಡಚನೆ.

ಅಮೆರಿಕಾದ ರಕ್ಷಣೆಯ ತೆರಿಗೆಗಳು ಅನಗತ್ಯ ; ಏಕೆಂದರೆ ಅವು ಸ್ವಪರಿಪೂರ್ಣವಾದ ಕೈಗಾರಿಕೆಗಳಿಗೆ ರಕ್ಷಣೆ ಕೊಡುತ್ತವೆ.

∴ ಅಮೆರಿಕಾದ ರಕ್ಷಣೆಯ ತೆರಿಗೆಗಳು ಅಸಾಧುವಾದ ನೀತಿಯನ್ನನುಸರಿಸುತ್ತವೆ.

ಇಂಥ ವಾದವನ್ನು ವ್ಯಕ್ತಗೊಳಿಸಿದಾಗ ಆಧಾರವಾಕ್ಯಗಳು ಆಧೇಯನ್ಯಾಯ ' Epi-syllogism 'ವಾಗಿಯೂ, ಅವಕ್ಕೆ ಸೇರಿದ ಕಾರಣವಾಕ್ಯಗಳು ಆಧಾರನ್ಯಾಯ (Prosyllogism) ವಾಗಿಯೂ ಆಗುತ್ತವೆ. ಆಗ ಆ ವಾದವು ವಾದಸರಪಣಿಯಾಗುತ್ತದೆ. ಆ ವಾದಸರಪಣಿ ಹೀಗಿರುತ್ತದೆ :

ದೇಶದ ವ್ಯಾಪಾರಕ್ಕೆ ಅಡಚಣೆಯಾದ ತೆರಿಗೆಗಳು ಅಸಾಧುವಾದ ನೀತಿಯನ್ನನುಸರಿಸುತ್ತವೆ.

ಆಮದಿನ ಮೇಲಿನ ಅನಾವಶ್ಯಕ ತೆರಿಗೆಗಳು ದೇಶದ ವ್ಯಾಪಾರಕ್ಕೆ ಅಡಚನೆಯಾಗಿರುತ್ತವೆ.

ಸ್ವಪರಿಪೂರ್ಣವಾದ ಕೈಗಾರಿಕೆಗಳಿಗೆ ರಕ್ಷಣೆ ಕೊಡುವ ತೆರಿಗೆಗಳು ಅನಾವಶ್ಯಕವಾಗಿ ಆಮದು ವಸ್ತುಗಳ ಮೇಲೆ ಹೇರುವ ತೆರಿಗೆಗಳು.

ಅಮೆರಿಕಾದ ರಕ್ಷಣೆ ಕೊಡುವ ತೆರಿಗೆಗಳು ಸ್ವಪರಿಪೂರ್ಣವಾದ ಕೈಗಾರಿಕೆಗಳಿಗೆ ರಕ್ಷಣೆ ಕೊಡುವ ತೆರಿಗೆಗಳು.

∴ ಅಮೆರಿಕಾದ ರಕ್ಷಣೆ ಕೊಡುವ ತೆರಿಗೆಗಳು ಅಸಾಧು ನೀತಿಯನ್ನು ಅನುಸರಿಸುತ್ತವೆ.

---

[2] "All unnecessary duties on imports are impolitic, as they impede; the trade of a country; the American protective duties are unnecessary as they support industries which are able to stand by themselves; therefore the American protective tariff is impolitic."

## ಅಭ್ಯಾಸಗಳು (೧೫)

'ಪ್ರೋಸಿಲಜಿಸಂ', 'ಎಪಿಸಿಲಜಿಸಂ', ಇವುಗಳ ಸ್ವರೂಪವನ್ನು ತಿಳಿಸಿ. ಇವುಗಳನ್ನು ಒಂದು ವಾದದಲ್ಲಿ ಹೇಗೆ ಸೇರಿಸಬಹುದೆಂಬುದನ್ನು ಒಂದು ಉದಾಹರಣೆಯ ಮೂಲಕ ತಿಳಿಯಪಡಿಸಿ.

'ಸೊರೈಟೀಸ್' ಎಂದರೆ ಏನು? ಅದಕ್ಕೆ ಒಂದು ಉದಾಹರಣೆ ಕೊಡಿ.

ಅರಿಸ್ಟಾಟಲಿನ ಸೊರೈಟೀಸ್‌ಗೂ, ಗಾಕ್ಲೀನಿಸಿನ ಸೊರೈಟೀಸ್‌ಗೂ ಇರುವ ವ್ಯತ್ಯಾಸಗಳು ಯಾವುವು?

ಅರಿಸ್ಟಾಟಲಿನ ಸೊರೈಟೀಸ್‌ನಲ್ಲಿ ಮೊದಲನೆಯ ಆಧಾರವಾಕ್ಯ ಮಾತ್ರ ಭಾಗಾನ್ವಯ ಪ್ರತಿಜ್ಞೆಯಾಗಿರಬಹುದು, ಗಾಕ್ಲೀನಿಸಿನ ಸೊರೈಟೀಸ್‌ನಲ್ಲಿ ಕೊನೆಯ ಆಧಾರವಾಕ್ಯ ಮಾತ್ರ ನೇತ್ಯರ್ಥಕವಾಗಿರಬಹುದು. ಏಕೆ?

# ೧೬. ಸಂಬಂಧಮೂಲ ನ್ಯಾಯಗಳು

## (Relational Arguments)

ಅರಿಸ್ಟಾಟಲ್ ತಾನು ಸ್ಥಾಪಿಸಿದ ಸಿಲಜಿಸಂಗೆ ವಿಶೇಷ್ಯ ವಿಶೇಷಣ ರೂಪದ ಪ್ರತಿಜ್ಞೆಗಳನ್ನು ಆಧಾರಪ್ರತಿಜ್ಞೆಗಳಾಗಿ ಇಟ್ಟುಕೊಂಡನು. ಅವನು ಸಂಬಂಧಮೂಲ ಪ್ರತಿಜ್ಞೆಗಳನ್ನು ತಿಳಿಸಿಯೂ ಇಲ್ಲ ಮತ್ತು ಅವುಗಳನ್ನು ಅನುಮಾನಕ್ಕೆ ಆಧಾರಪ್ರತಿಜ್ಞೆಗಳಾಗಿ ಉಪಯೋಗಿಸಬಹುದೆಂದು ಯೋಚಿಸಲೂ ಇಲ್ಲ. ಅವನನ್ನು ಅನುಸರಿಸಿದ ಪಾಶ್ಚಾತ್ಯ ತಾರ್ಕಿಕರು ವಿಶೇಷ್ಯ ವಿಶೇಷಣರೂಪದ ಪ್ರತಿಜ್ಞೆಗಳನ್ನು ಆಧಾರವಾಗಿ ಉಳ್ಳ ಸಿಲಜಿಸಂ ಬಿಟ್ಟರೆ ಬೇರೆಯ ರೀತಿಯ ನ್ಯಾಯ ಯಾವುದೂ ಇಲ್ಲವೆಂದೇ ತಿಳಿದಿದ್ದರು. ಆದರೆ ಈಚಿನ ಪಾಶ್ಚಾತ್ಯ ತಾರ್ಕಿಕರು ಸಂಬಂಧಪ್ರತಿಜ್ಞೆಗಳನ್ನು ಆಧಾರವಾಗಿ ಉಳ್ಳ ನ್ಯಾಯ ಸಾಧ್ಯವೆಂದು ತಿಳಿಸಿರುತ್ತಾರಲ್ಲದೆ ಬೆಳೆಸಿಯೂ ಇರುತ್ತಾರೆ. ಅವರು ಅಂಥ ನ್ಯಾಯಕ್ಕೆ ಆರು ಬಗೆಯ ಸಂಬಂಧಗಳು ಆಧಾರವಾಗಿರಬಹುದೆಂದು ಹೇಳಿರುತ್ತಾರೆ: (೧) ಅಂಗ-ಅಂಗಿ ಸಂಬಂಧ, (೨) ಸಮಾನಗಳ ಸಂಬಂಧ, (೩) ಅಳತೆಗಳ ಸಂಬಂಧ, (೪) ಕಾಲಗಳ ಸಂಬಂಧ, (೫) ದೇಶಗಳ ಸಂಬಂಧ, (೬) ಕುಟುಂಬಕ್ಕೆ ಸೇರಿದವರ ಸಂಬಂಧ. ಆದರೆ ಈ ಸಂಬಂಧಗಳು ಆರೇ ಎಂದು ಹೇಳಲಾಗುವುದಿಲ್ಲ. ಕಾರ್ಯಕಾರಣ ಸಂಬಂಧ, ಆಧಾರ ಆಧೇಯ ಸಂಬಂಧ, ಉಪಜೀವ್ಯೋಪಜೀವಕ ಸಂಬಂಧ, ಉಪಕಾರ್ಯೋಪಕಾರ ಸಂಬಂಧ. ಹೀಗೆ ಸಂಬಂಧಗಳು ಅನೇಕವಾಗಿವೆ. ಇವುಗಳಲ್ಲಿ ಕೆಲವಕ್ಕೆ ಮಾತ್ರ ಇಲ್ಲಿ ಉದಾಹರಣೆಗಳನ್ನು ಕೊಡಲಾಗುತ್ತದೆ.

(೧) A = B
B = C
C = D
∴ A = D

(೨) A ಯು B ಗಿಂತ ದೊಡ್ಡದು
B ಯು C ಗಿಂತ ದೊಡ್ಡದು
C ಯು D ಗಿಂತ ದೊಡ್ಡದು
∴ A ಯು D ಗಿಂತ ದೊಡ್ಡದು



(೩) A ಯು B ಯ ಹಿಂದಿನದು
B ಯು C ಯ ಹಿಂದಿನದು
C ಯು D ಯ ಹಿಂದಿನದು

---

∴ A ಯು D ಯ ಹಿಂದಿನದು.

(೪) A ಯು B ಯ ತಂದೆ
B ಯು C ಯ ತಂದೆ

---

∴ A ಯು C ಯ ತಂದೆಯ ತಂದೆ (ತಾತ).

ಈ ವಾದಗಳು ಸರಿಯಾದುವೆಂದು ನಾವು ದೃಢವಾಗಿ ಹೇಳಬಹುದು. ಇವುಗಳಲ್ಲಿ ನಿರ್ಣಯವು ಆಧಾರವಾಕ್ಯಗಳಿಂದ ನಿಸ್ಸಂದೇಹವಾಗಿ ಹರಿದು ಬರುತ್ತದೆ. ಆದರೂ ಇವು ಅರಿಸ್ಟಾಟಲಿನ ಸಿಲಜಿಸಂ ರೂಪದಲ್ಲಿಲ್ಲ. ಅವು ಸಿಲಜಿಸಂಗಳೆಂದು ನಾವು ಭಾವಿಸಿದರೆ, ಅವು ನಾಲ್ಕು ಪದಗಳುಳ್ಳ ನ್ಯಾಯವಾಗುತ್ತದೆ. ನಾಲ್ಕು ಪದಗಳುಳ್ಳ ನ್ಯಾಯ ಅಸಾಧುವಾದದ್ದು. A ಯು B ಗೆ ಸಮ, B ಯು C ಗೆ ಸಮ, ಆದ್ದರಿಂದ A ಯು C ಗೆ ಸಮ ಎಂಬ ವಾದ ಸಿಲಜಿಸಂ ಎಂದು ಭಾವಿಸಿದರೆ 'A' ಎಂಬುದು ಒಂದು ಪದವಾಗುತ್ತದೆ, 'B ಗೆ ಸಮ' ಇನ್ನೊಂದು ಪದವಾಗುತ್ತದೆ, B ಮೂರನೆಯ ಪದವಾಗುತ್ತದೆ, 'C ಗೆ ಸಮ' ನಾಲ್ಕನೆಯ ಪದವಾಗುತ್ತದೆ. ಮಧ್ಯಮಪದ ಒಂದೇ ಅರ್ಥದಲ್ಲಿ ಎರಡು ಆಧಾರವಾಕ್ಯಗಳಲ್ಲೂ ಉಪಯೋಗವಾಗಿಲ್ಲ. ಮೊದಲನೆಯದರಲ್ಲಿ ಅದು 'B ಗೆ ಸಮ' ಎಂಬುದಾಗಿರುತ್ತದೆ, ಎರಡನೆಯದರಲ್ಲಿ 'B' ಎಂದು ಇರುತ್ತದೆ. 'B' ಮತ್ತು 'B ಗೆ ಸಮ'—ಇವೆರಡೂ ಒಂದೇ ಅಲ್ಲ.

ಈ ತೊಂದರೆಯಿಂದ ಪಾರಾಗಲು ಕೆಲವು ತಾರ್ಕಿಕರು, B ಗೆ ಸಮಾನವಾದವು ಒಂದಕ್ಕೊಂದು ಸಮಾನವಾಗಿರುತ್ತವೆ ಎಂಬ ಸಾಧ್ಯವಾಕ್ಯ ಅಧ್ಯಾಹಾರವಾಗಿದೆ, A=B ಮತ್ತು B=C ಇವೆರಡೂ ಸೇರಿ ಪಕ್ಷವಾಕ್ಯವಾಗಿರುತ್ತವೆ ಎಂದು ಹೇಳುತ್ತಾರೆ. ಅಧ್ಯಾಹಾರವಾಗಿರುವ ಆ ವಾಕ್ಯವನ್ನು ಸೇರಿಸಿಕೊಂಡರೆ ಅರಿಸ್ಟಾಟಲಿನ ಈ ನ್ಯಾಯರೂಪವಾಗುತ್ತದೆ:

B ಗೆ ಸಮನಾದುವು ಒಂದಕ್ಕೊಂದು ಸಮವಾಗಿರುತ್ತವೆ
A ಮತ್ತು C ಗಳು B ಗೆ ಸಮವಾದುವು

---

∴ A ಮತ್ತು C ಸಮವಾದುವು.

ಇದು ಸಾಧುವಾದ ಸಿಲಜಿಸಂ ರೂಪದಲ್ಲಿರುತ್ತದೆ.

ಆದರೆ ಮೊದಲನೆಯ ವಾಕ್ಯವನ್ನು ಆಧಾರವಾಕ್ಯ (Premise) ವಾಗಿ ಗಣಿಸಲಾಗುವುದಿಲ್ಲ; ಅದು ಆಧಾರತತ್ತ್ವ (Principle) ವೆಂದು ಮಾತ್ರ ಹೇಳಲು ಸಾಧ್ಯ. ಆಧಾರವಾಕ್ಯವೇ ಬೇರೆ, ಆಧಾರತತ್ತ್ವವೇ ಬೇರೆ, ಆಧಾರತತ್ತ್ವವನ್ನು ಆಧಾರವಾಕ್ಯವಾಗಿ ಭಾವಿಸುವುದು ಒಂದು ಭ್ರಾಂತಿ. ಮೇಲಿನ ವಾದದಲ್ಲಿ ನಾವು ಸಮಾನತತ್ತ್ವಕ್ಕನುಸಾರವಾಗಿ (According to the principle of equality) ವಾದಮಾಡಿರುತ್ತೇವೆ, ಸಮಾನತತ್ತ್ವವನ್ನು ಆಧಾರವಾಕ್ಯವಾಗಿ ಇಟ್ಟುಕೊಂಡು ವಾದಿಸಿಲ್ಲ; **ನಿರ್ಣಯವು ಆಧಾರತತ್ತ್ವಕ್ಕನುಗುಣವಾಗಿದೆ, ಆದರೆ ಆಧಾರವಾಕ್ಯದಿಂದ** (From the Premise) **ಹುಟ್ಟಿಲ್ಲ.** ಎಲ್ಲ ಮನುಷ್ಯರೂ ಮರ್ತ್ಯರು, ಸಾಕ್ರೆಟೀಸ್ ಮಾನವ, ಆದ್ದರಿಂದ ಸಾಕ್ರೆಟೀಸ್ ಮರ್ತ್ಯ ಎಂಬ ಸಿಲಜಿಸಂನಲ್ಲಿ ಹಾಗಿಲ್ಲ. ಅಲ್ಲಿ ನಾವು 'ಎಲ್ಲ ಮಾನವರೂ ಮರ್ತ್ಯರು' ಎಂಬ ಆಧಾರವಾಕ್ಯದಿಂದ ನಿರ್ಣಯವನ್ನು ಪಡೆಯುತ್ತೇವೆ. ಆ ಸಿಲಜಿಸಂನ ಆಧಾರತತ್ತ್ವ 'ಡಿಕ್ಟಂ'; ಅದು ಆಧಾರವಾಕ್ಯವಲ್ಲ.

ವಿಶೇಷ್ಯ ವಿಶೇಷಣ ಸಂಬಂಧಕ್ಕೆ ಅನುಗುಣವಾದ ನ್ಯಾಯರೂಪಕ್ಕೆ 'ಸಿಲಜಿಸಂ' ಎಂದು ಹೆಸರು. ವಿಶೇಷ್ಯ ವಿಶೇಷಣ ಸಂಬಂಧತತ್ತ್ವವನ್ನು ಆಧಾರವಾಗಿ ಉಳ್ಳ ಸಿಲಜಿಸಂ ರೂಪವೇ ಬೇರೆ, ಸಮಾನ ಸಂಬಂಧವನ್ನು ಆಧಾರವಾಗಿ ಉಳ್ಳ ನ್ಯಾಯರೂಪವೇ ಬೇರೆ. ಅದು 'ಸಿಲಜಿಸಂ' ರೂಪವಾಗಲಾರದು. ಅದಕ್ಕೆ 'ಸಿಲಜಿಸಂ' ರೂಪ ಕೊಡುವುದು ಅನುಚಿತ. ಹಾಗೆಯೇ ದೇಶ ಕಾಲ ಸಂಬಂಧ ತತ್ತ್ವವನ್ನು ಆಧಾರತತ್ತ್ವವಾಗಿ ಉಳ್ಳ ನ್ಯಾಯಗಳನ್ನು 'ಸಿಲಜಿಸಂ' ಎಂದು ಕರೆಯುವುದೂ ಅನುಚಿತ. ಇಂಥ ನ್ಯಾಯಗಳಿಗೆ ಬಲವಂತವಾಗಿ ಸಿಲಜಿಸಂ ರೂಪ ಕೊಡಲು ಪ್ರಯತ್ನಿಸಿದಾಗ ನಾವು ಅವೆರಡಕ್ಕೂ ಆಧಾರವಾದ ತತ್ತ್ವಗಳು ಬೇರೆ ಬೇರೆ ಎಂಬುದನ್ನು ಅಲಕ್ಷಿಸುತ್ತೇವೆ. ಹೀಗೆ ಅಲಕ್ಷಿಸುವುದು ಅಕ್ಷಮ್ಯ.

ಸಿಲಜಿಸಂನ ಅವಯವಗಳು ಅನ್ಯೋನ್ಯಾಶ್ರಯಗಳಾಗಿರುವುದಿಲ್ಲ; ಅವುಗಳ ಸಂಬಂಧ ಏಕಪಕ್ಷೀಯ (Onesided). ಆದರೆ ಸಂಬಂಧಮೂಲ ನ್ಯಾಯದ ಅವಯವಗಳು ಒಂದು ವ್ಯವಸ್ಥೆಗೆ ಸೇರಿದ ಪರಸ್ಪರ ಸಂಬಂಧವುಳ್ಳ ಅಂಶಗಳು. ಸಿಲಜಿಸಂನಲ್ಲಿ ನಾವು ಆಧಾರವಾಕ್ಯಗಳಿಂದ ನಿರ್ಣಯವನ್ನು ಪಡೆಯಬಹುದು. ಆದರೆ ನಿರ್ಣಯ ಮತ್ತು ಪಕ್ಷವಾಕ್ಯದಿಂದ ಸಾಧ್ಯವಾಕ್ಯವನ್ನು ಪಡೆಯಲಾಗುವುದಿಲ್ಲ. ಸಾಕ್ರೆಟೀಸ್ ಮರ್ತ್ಯ ಮತ್ತು ಸಾಕ್ರೆಟೀಸ್ ಮಾನವ—ಈ ಎರಡ

ರಿಂದ ಎಲ್ಲ ಮಾನವರೂ ಮರ್ತ್ಯರು ಎಂಬ ಪ್ರತಿಜ್ಞೆಯನ್ನು ಪಡೆಯಲಾಗು ವುದಿಲ್ಲ. ಆದರೆ ಪರಸ್ಪರ ಸಂಬಂಧಪಡೆದಿರುವ ಅಂಶಗಳುಳ್ಳ ವ್ಯವಸ್ಥಿತವಾದ ಸಂಬಂಧಮೂಲ ನ್ಯಾಯದಲ್ಲಾದರೋ ನಾವು ಅದರ ಯಾವ ಎರಡು ಭಾಗ ಗಳಿಂದಾದರೂ ಹೊರಟು ಮೂರನೆಯ ಭಾಗವನ್ನು ಮುಟ್ಟಬಹುದು. ಆಧಾರ ವಾಕ್ಯಗಳಿಂದ ನಿರ್ಣಯವನ್ನು ಪಡೆಯಬಹುದಲ್ಲದೆ, ನಿರ್ಣಯ ಮತ್ತು ಒಂದು ಆಧಾರವಾಕ್ಯದಿಂದ ಇನ್ನೊಂದು ಆಧಾರವಾಕ್ಯವನ್ನು ಪಡೆಯಬಹುದು. ಆದ್ದ ರಿಂದ ಸಂಬಂಧಮೂಲ ನ್ಯಾಯವನ್ನು ವ್ಯವಸ್ಥಿತ ನ್ಯಾಯ, ಸಿಸ್ಟಮ್ಯಾಟಿಕ್ ಡಿಡಕ್ಷನ್ (Systematic deduction) ಎಂದು ಕೆಲವು ಪಾಶ್ಚಾತ್ಯ ತಾರ್ಕಿ ಕರು ಕರೆದಿರುತ್ತಾರೆ.[1]

ಇಂಥ ವ್ಯವಸ್ಥಿತ ನ್ಯಾಯರೂಪಗಳು ಅರಿಸ್ಟಾಟಲ್‌ನ 'ಸಿಲಜಿಸಂ'ಗಿಂತ ಹೆಚ್ಚಾಗಿ ವಿಜ್ಞಾನದ ಬೆಳವಣಿಗೆಗೆ ಸಹಾಯಮಾಡಿವೆ. ಆದರೂ ಸಿಲಜಿಸಂ ಮತ್ತು ಸಂಬಂಧಮೂಲ ನ್ಯಾಯ—ಇವು ತೀರ ಭಿನ್ನವಾದುವೆಂದು ತಿಳಿಯ ಕೂಡದು. ಮೊದಲನೆಯದರಲ್ಲೂ ವ್ಯವಸ್ಥೆ ಇದೆ. ಆದರೆ ಅದು ಎರಡನೆಯದರಲ್ಲಿ ರುವಷ್ಟು ಪುಷ್ಟವಾಗಿಲ್ಲ.

## ಅಭ್ಯಾಸಗಳು (೧೬)

೧. ಸಂಬಂಧಮೂಲ ನ್ಯಾಯವೆಂದರೇನು ?
೨. ಸಂಬಂಧಮೂಲ ನ್ಯಾಯಕ್ಕೂ ಸಿಲಜಿಸಂಗೂ ಇರುವ ವ್ಯತ್ಯಾಸವೇನು ?
೩. ಸಂಬಂಧಮೂಲ ನ್ಯಾಯವನ್ನು ಅರಿಸ್ಟಾಟಲಿನ ನ್ಯಾಯವಾಗಿ ಪರಿವರ್ತಿಸಬಹುದೆ ?
೪. ಸಂಬಂಧಮೂಲ ನ್ಯಾಯವನ್ನು ವ್ಯವಸ್ಥಿತ ನಿಗಮನ ಎಂದು ಏಕೆ ಕರೆಯುತ್ತಾರೆ ?

---

[1] J. E. Creighton, *An Introductory Logic*, p. 190, "We must distinguish that type of reasoning exemplified in the simple categorical syllogism from what we have ventured to call systematic deduction. Systematic deduction proceeds on the fact that everything is an element in a system and has its characteristics determined by its relations to other elements within the same system."

## ೧೭. ಸಮಧ್ಯಮ ಅನುಮಾನದ ಪ್ರಾಮಾಣ್ಯ
## (Validity of the Syllogism)

ಭಾರತೀಯ ತರ್ಕಶಾಸ್ತ್ರ ಚರಿತ್ರೆಯನ್ನೂ ಪಾಶ್ಚಾತ್ಯ ತರ್ಕಶಾಸ್ತ್ರ ಚರಿತ್ರೆಯನ್ನೂ ಪರಿಶೀಲಿಸಿದರೆ ಕೆಲವು ತಾರ್ಕಿಕರು ಸಮಧ್ಯಮ ಅನುಮಾನ (Syllogism) ವನ್ನು ಪ್ರಮಾಣವಾಗಿ ಒಪ್ಪುವುದಿಲ್ಲವೆಂದು ಸ್ಪಷ್ಟಪಡುತ್ತದೆ. ಭಾರತೀಯ ತಾರ್ಕಿಕರಲ್ಲಿ ಚಾರ್ವಾಕರು ಸಮಧ್ಯಮ ಅನುಮಾನ ಪ್ರಮಾಣವಲ್ಲವೆಂದು ವಾದಿಸಿ ಅದರ ಪ್ರಾಮಾಣ್ಯವನ್ನು ನಿರಾಕರಿಸುತ್ತಾರೆ. ಜೆ. ಎಸ್. ಮಿಲ್ ಎಂಬ ಪಾಶ್ಚಾತ್ಯ ತಾರ್ಕಿಕನೂ ಹೆಚ್ಚು ಕಡಮೆ ಚಾರ್ವಾಕರಂತೆಯೇ ವಾದಮಾಡಿ ಸಮಧ್ಯಮ ಅನುಮಾನದ ಪ್ರಾಮಾಣ್ಯವನ್ನು ನಿರಾಕರಿಸುತ್ತಾನೆ. ಅದರ ಪ್ರಾಮಾಣ್ಯವನ್ನು ನಿರಾಕರಿಸಲು ಅವನು ಹೂಡಿರುವ ವಾದದಲ್ಲಿ ಎರಡು ಭಾಗಗಳಿವೆ.

(೧) ಪರಿಪೂರ್ಣರೂಪವೆಂದು ಬಗೆದಿರುವ ಮೊದಲನೆಯ ಆಕೃತಿಯ ರೂಪದಲ್ಲಿ ನಿರ್ಣಯವನ್ನು ಸ್ಥಾಪಿಸುವುದಕ್ಕೆ ಪೂರ್ಣಾನ್ವಯ ಪ್ರತಿಜ್ಞೆಯುಳ್ಳ ಸಾಧ್ಯವಾಕ್ಯ (Major Premise) ವನ್ನು ಆಧಾರವಾಗಿ ಇಟ್ಟುಕೊಳ್ಳಲಾಗಿದೆ.

ಎಲ್ಲ ಮಾನವರೂ ಮರ್ತ್ಯರು
ಸಾಕ್ರೆಟೀಸ್ ಮಾನವ

---

∴ ಸಾಕ್ರೆಟೀಸ್ ಮರ್ತ್ಯ

ಇಲ್ಲಿ 'ಸಾಕ್ರೆಟೀಸ್ ಮರ್ತ್ಯ' ಎಂಬ ನಿರ್ಣಯವನ್ನು ಸ್ಥಾಪಿಸಲು 'ಎಲ್ಲ ಮಾನವರೂ ಮರ್ತ್ಯರು' ಎಂಬ ಸಾಧ್ಯವಾಕ್ಯವನ್ನು ಆಧಾರವಾಗಿ ಕುರಿಯಲಾಗಿದೆ. ಆದರೆ 'ಎಲ್ಲ ಮಾನವರೂ ಮರ್ತ್ಯರು' ಎಂದು ಹೇಳಿದಾಗ ಅದರಲ್ಲಿ 'ಸಾಕ್ರೆಟೀಸ್ ಮಾನವ' ಎಂಬುದೂ ಸೇರಿದೆ. ಹಾಗೆ ಅದರಲ್ಲಿ ಸೇರದಿದ್ದರೆ ನಾವು 'ಎಲ್ಲ ಮಾನವರೂ ಮರ್ತ್ಯರು' ಎಂದು ಹೇಳಲಾಗುವುದಿಲ್ಲ. 'ಎಲ್ಲ ಮಾನವರೂ ಮರ್ತ್ಯರು' ಎಂಬ ವಾಕ್ಯದಲ್ಲಿ ಸಾಕ್ರೆಟೀಸ್ ಮಾನವ ಎಂಬುದು ಸೇರಿದ್ದರೆ, ಸಿಲಜಿಸಂ ಮೂಲಕ ನಾವು ಸಾಧಿಸಬೇಕಾದದ್ದೇನಿದೆ? ಏನೂ ಇಲ್ಲ. ಅದು ನಿರ್ಣಯವನ್ನು ಸಾಧಿಸಲು ಮಂಡಿಸಿದ ವಾದ ಎಂದು ಗಣಿಸುವುದಾದರೆ ಆ ವಾದ ಅಸಾಧುವಾಗುತ್ತದೆ; ಚಕ್ರಕ ದೋಷ

(Petitio principii) ಕ್ಕೆ ಈಡಾಗುತ್ತದೆ. ನಾವು ಯಾವುದನ್ನು ಸ್ಥಾಪಿಸ ಬೇಕೋ ಅದನ್ನು ಮೊದಲೇ 'ಎಲ್ಲ ಮಾನವರೂ ಮರ್ತ್ಯರು' ಎಂಬ ಸಾಧ್ಯ ವಾಕ್ಯದಲ್ಲಿ ಪ್ರಮಾಣವಿಲ್ಲದೆಯೇ ಅಂಗೀಕರಿಸಿದಂತಾಗುತ್ತದೆ.

(೨) ನಿರ್ಣಯಿಸಬೇಕಾದ ಅಂಶ, ಅಂದರೆ 'ಸಾಕ್ರೆಟೀಸ್ ಮರ್ತ್ಯ' ಎಂಬ ಅಂಶ, ಸಾಧ್ಯವಾಕ್ಯದಲ್ಲಿ ನಿಜವಾಗಿ ಸಪ್ರಮಾಣವಾಗಿ ಸೇರಿದೆ ಎಂದು ವಾದಕ್ಕಾಗಿ ಇಟ್ಟುಕೊಳ್ಳೋಣ. ಹಾಗೆ ಅಂಗೀಕರಿಸಿದಾಗ ನಾವು ಏನನ್ನು ಸಾಧಿಸಿದಂತಾಯಿತು? ಸಾಧ್ಯವಾಕ್ಯದಲ್ಲಿ ಸೇರಿರುವುದನ್ನೇ ಪುನಃ ನಿರ್ಣಯ ದಲ್ಲಿ ಹೇಳಿದಂತಾಗುವುದಿಲ್ಲವೆ? ಸಿಲಜಿಸಂ ಮೂಲಕ ನಾವೇನಾದರೂ ಹೊಸ ದನ್ನು ತಿಳಿದುಕೊಂಡಂತಾಗುತ್ತದೆಯೆ? ಹಾಗೆ ಹೊಸದನ್ನು ತಿಳಿಸದ ಸಿಲಜಿಸಂ ನಿರರ್ಥಕ; ಅದು ವ್ಯರ್ಥ ಪ್ರಲಾಪ. ಒಂದು ಪಕ್ಷ ವಾದಕ್ಕಾಗಿ ಸಾಧ್ಯವಾಕ್ಯದಲ್ಲಿಲ್ಲದ್ದು ಹೊಸದಾಗಿ ನಿರ್ಣಯದಲ್ಲಿ ಇದೆ ಎಂದು ಹೇಳುವು ದಾದರೆ ಆ ವಾದ ಅಸಾಧುವಾಗುತ್ತದೆ. ಸಿಲಜಿಸಂ ಸಾಧುವಾಗಬೇಕಾದರೆ ಆಧಾರವಾಕ್ಯಗಳಲ್ಲಿ ಸೇರದಿರುವ ಯಾವುದೂ ನಿರ್ಣಯದಲ್ಲಿ ಇರಕೂಡದು. ಈ ಉಭಯಸಂಕಟದ ಪರಿಸ್ಥಿತಿಯನ್ನು ಒಂದು ಇಕ್ಕೋಡಿನ ರೂಪದಲ್ಲಿ ಮನ ಮುಟ್ಟುವಂತೆ ತಿಳಿಸಬಹುದು.

ಒಂದು ಮಧ್ಯವರ್ತಿ ಅನುಮಾನದಲ್ಲಿ ಆಧಾರವಾಕ್ಯಗಳಲ್ಲಿ ಸೇರದ ಹೊಸ ಅಂಶವನ್ನು ನಿರ್ಣಯವು ಪಡೆಯದಿದ್ದರೆ, ಆ ಅನುಮಾನವು ವ್ಯರ್ಥ; ನಿರ್ಣಯವು ಆಧಾರವಾಕ್ಯಗಳಲ್ಲಿಲ್ಲದ್ದನ್ನೇನಾದರೂ ಒಳಗೊಂಡಿದ್ದರೆ, ಆ ಅನುಮಾನ ಅಸಾಧು.

ನಿರ್ಣಯವು ಆಧಾರವಾಕ್ಯಗಳಲ್ಲಿ ಇಲ್ಲದಿರುವುದನ್ನು ಪಡೆದಿರಬೇಕು ಅಥವಾ ಪಡೆಯದಿರಬೇಕು.

ಆದ್ದರಿಂದ ಆ ಅನುಮಾನ ವ್ಯರ್ಥ ಅಥವಾ ಅಸಾಧು.

ಮಿಲ್ ಮಂಡಿಸಿರುವ ಮೊದಲಿನ ಆಕ್ಷೇಪವನ್ನು ಪರೀಕ್ಷಿಸೋಣ. 'ಎಲ್ಲ ಮಾನವರೂ ಮರ್ತ್ಯರು' ಎಂಬ ಪೂರ್ಣಾನ್ವಯ ಪ್ರತಿಜ್ಞೆಯು ಕೇವಲ ಎಣಿಕೆಯ ಆಧಾರದ ಮೇಲೆ ಏರ್ಪಟ್ಟ ಸಾಮಾನ್ಯ (Enumerative universal) ಪ್ರತಿಜ್ಞೆ ಎಂದು ಮಿಲ್ ಭಾವಿಸಿರುತ್ತಾನೆ. ಅವನ ಅಭಿಪ್ರಾಯ ದಲ್ಲಿ ಎಲ್ಲ ಮಾನವರೂ ಮರ್ತ್ಯರು ಎಂಬ ಪ್ರತಿಜ್ಞೆಯು A, B, C, D, E, F, . . . X, Y, Z, ಮರ್ತ್ಯರು ಎಂಬುದಕ್ಕೆ ಸಮ. ಸಾಮಾನ್ಯ ಅಥವಾ ಪೂರ್ಣಾನ್ವಯ ಪ್ರತಿಜ್ಞೆಗಳೆಲ್ಲ ಈರೀತಿಯವಾಗಿದ್ದರೆ ಮಿಲ್ ಮಹಾಶಯನ

ವಾದಕ್ಕೆ ಪ್ರತಿ ಹೇಳಲು ಅಸಾಧ್ಯವಾಗುತ್ತದೆ. ಮಧ್ಯವರ್ತಿ ಅನುಮಾನವು ನಿರ್ಣಯದಲ್ಲಿ ಸಾಧಿಸಬೇಕಾದ್ದನ್ನು ಸಾಧ್ಯವಾಕ್ಯದಲ್ಲೇ ಅಂಗೀಕರಿಸಿದಂತಾಗುತ್ತದೆ. ಆದರೆ ಸಾಮಾನ್ಯ ಪ್ರತಿಜ್ಞೆಗಳೆಲ್ಲ ಮಿಲ್ ಹೇಳಿದಂತೆ ಕೇವಲ ಪ್ರತ್ಯೇಕಗಳ ಸಮೂಹ (Aggregate of Particulars)ವಲ್ಲ. ಅಂಥ ಪ್ರತ್ಯೇಕಗಳ ಸಮೂಹಗಳನ್ನು ಸಾಮಾನ್ಯ ಪ್ರತಿಜ್ಞೆಗಳೆಂದು ಕರೆಯುವುದು ತಪ್ಪು. ಒಂದು ಪ್ರತ್ಯೇಕ (Particular) ಸಾಮಾನ್ಯವಲ್ಲದಿದ್ದರೆ ಅಂಥ ಪ್ರತ್ಯೇಕಗಳ ಕಂತೆಯನ್ನು ಸಾಮಾನ್ಯವೆಂದು ಕರೆಯಬಹುದೆ? ನಾವು ಸಾಮಾನ್ಯಗಳೆಂದು ನ್ಯಾಯವಾಗಿ ಕರೆಯಬಹುದಾದ ಪ್ರತಿಜ್ಞೆ ಮಿಲ್ ಹೇಳುವಂತೆ ಕೇವಲ ಪ್ರತ್ಯೇಕಗಳ ಕಂತೆಯಲ್ಲ; ಅದನ್ನು ಪಡೆಯುವ ವಿಧಾನವೂ ಬರಿಯ ಎಣಿಕೆಯ ವಿಧಾನ (Enumerative method)ವಲ್ಲ. ನಾವು ಸಾಮಾನ್ಯಪ್ರತಿಜ್ಞೆಯನ್ನು ಸ್ಥಾಪಿಸುವುದು ಅವಶ್ಯಸಂಬಂಧ (Necessary relation)ದ ಆಧಾರದಮೇಲೆ. 'ಎಲ್ಲ ಮಾನವರೂ ಮರ್ತ್ಯರು' ಎಂಬ ಸಾಮಾನ್ಯಪ್ರತಿಜ್ಞೆಯನ್ನು ನಾವು ಮನುಷ್ಯರೆಲ್ಲರನ್ನೂ ಎಣಿಕೆಮಾಡಿ ಪಡೆಯುವುದಿಲ್ಲ. ಮಾನವತ್ವ ಮತ್ತು ಮರ್ತ್ಯತ್ವಗಳಿಗೆ ನಿಕಟಸಂಬಂಧವಿರುವುದರಿಂದ, ಎಲ್ಲಿ ಮಾನವತ್ವವಿದೆಯೋ ಅಲ್ಲಿ ಮರ್ತ್ಯತ್ವವಿದೆ ಎಂದು ನಿಶ್ಚಯಿಸುತ್ತೇವೆ. ನಿಕಟಸಂಬಂಧವನ್ನು ಮೂಲ ಆಧಾರವಾಗಿ ಪಡೆಯದ ಯಾವ ಪ್ರತಿಜ್ಞೆಯೂ ಸಾಮಾನ್ಯಪ್ರತಿಜ್ಞೆಯಾಗಲಾರದು. ಅಂಥ ಸಾಮಾನ್ಯಪ್ರತಿಜ್ಞೆಯ ಆಧಾರವಿಲ್ಲದೆ ಯಾವ ಅನುಮಾನವೂ ಸಿದ್ಧಿಸಲಾರದು.

'ಎಲ್ಲ ಮಾನವರೂ ಮರ್ತ್ಯರು' ಎಂಬ ಸಾಮಾನ್ಯಪ್ರತಿಜ್ಞೆ ಎಣಿಕೆಯ ಆಧಾರದಮೇಲೆ ನಿಂತಿಲ್ಲ. ಅವಶ್ಯಸಂಬಂಧದ ಆಧಾರದಮೇಲೆ ನಿಂತಿರುವುದರಿಂದ, 'ಎಲ್ಲ ಮಾನವರೂ ಮರ್ತ್ಯರು' ಎಂದು ಹೇಳಿದಾಗ ಸಾಕ್ರೆಟೀಸ್‌ನ ವಿಚಾರ ಅದರಲ್ಲಿ ಸೇರಿರುವುದಿಲ್ಲ. ಅದರಲ್ಲಿ ಸೇರಿರುವುದು ಮಾನವತ್ವಕ್ಕೂ ಮರ್ತ್ಯತ್ವಕ್ಕೂ ಇರುವ ನಿಕಟಸಂಬಂಧ ಮಾತ್ರ. ಇವೆರಡಕ್ಕೂ ಇರುವ ನಿಕಟಸಂಬಂಧವನ್ನು ಸಾಕ್ರೆಟೀಸಿಗೆ ಅನ್ವಯಿಸಿ ಸಾಕ್ರೆಟೀಸ್ ಮರ್ತ್ಯ ಎಂಬ ನಿರ್ಣಯವನ್ನು ಪಡೆದಿದೆ. ಮಿಲ್ ಭಾವಿಸಿರುವಂತೆ ಪ್ರತ್ಯೇಕಗಳ ಸಮೂಹವನ್ನು ನಾವು ಸಾಮಾನ್ಯಪ್ರತಿಜ್ಞೆಯಾಗಿ ಭಾವಿಸುವುದಿಲ್ಲ. ಸಾಮಾನ್ಯ ಪ್ರತಿಜ್ಞೆಯನ್ನು ನಾವು ಎಣಿಕೆಯ ಮೂಲಕವೂ ಸ್ಥಾಪಿಸುವುದಿಲ್ಲ. ಆದುದರಿಂದ ಸಾಧಿಸಬೇಕಾದ ನಿರ್ಣಯವು ಪ್ರಮಾಣವಿಲ್ಲದೆ ಸಾಧ್ಯವಾಕ್ಯದಲ್ಲಿ ಅಂಗೀಕೃತವಾಗಿದೆ ಎಂಬ ವಾದವನ್ನು ನಾವು ಒಪ್ಪಲಾರೆವು.

ಮಿಲ್ ಮಂಡಿಸಿರುವ ಎರಡನೆಯ ಆಕ್ಷೇಪವೂ ನಿಲ್ಲತಕ್ಕದ್ದಲ್ಲ. ಸಾಮಾನ್ಯ

ವಾಗಿ ಇಕ್ಕೋಡಿನ ವಾದ ಅಸಾಧುವಾಗಿರುವಂತೆ ಇವನ ವಾದವೂ ಅಸಾಧು. ಮೇಲೆ ಪ್ರತಿಪಾದಿಸಿರುವ ಇಕ್ಕೋಡಿನಲ್ಲಿ ಎಲ್ಲ ಪಕ್ಷಗಳೂ ಸೇರಿಲ್ಲ; ಅವು ಒಂದನ್ನೊಂದು ಬಹಿಷ್ಕರಿಸುವುದೂ ಇಲ್ಲ. ಆಧಾರವಾಕ್ಯಗಳಲ್ಲಿ ನಿರ್ಣಯ ಸೇರಿರಬಾರದು ಎಂದು ಹೇಳಿದಾಗ, ಅವು ಒಂದೊಂದೂ ಪೃಥಕ್ಕಾಗಿ ಅಂದರೆ ಬೇರೆ ಬೇರೆಯಾಗಿ ಇದ್ದಾಗ ಪಡೆದಿರಕೂಡದು ಎಂದು ಅರ್ಥಮಾಡಿಕೊಳ್ಳ ಬೇಕು. ಸಿಲಜಿಸಂ ಒಂದು ಹೊಸ ಅಂಶವನ್ನು ವ್ಯಕ್ತಗೊಳಿಸಬೇಕಾದರೆ ಆಧಾರವಾಕ್ಯಗಳು ನಿರ್ಣಯವನ್ನು ಪಡೆದಿರಕೂಡದು. ಆದರೆ ಆಧಾರವಾಕ್ಯ ಗಳೆರಡೂ ಒಟ್ಟಿಗೆ ಸೇರಿದಾಗ ಆ ಸಮ್ಮಿಳನದಲ್ಲಿ ನಿರ್ಣಯ ಸೇರಿರಬೇಕು. ನಿರ್ಣಯಕ್ಕೂ ಆಧಾರವಾಕ್ಯಗಳಿಗೂ ನಿಕಟಸಂಬಂಧವಿರಬೇಕಾದರೆ ಆಧಾರ ವಾಕ್ಯಗಳೆರಡೂ ಮಿಳನವಾದಾಗ ಅಲ್ಲಿ ಅದು ಸೇರಿರಬೇಕು. ನಾವು ಹೀಗೆ ಅರ್ಥಮಾಡಿಕೊಂಡು ಇಕ್ಕೋಡಿನ ವಾದವನ್ನು ಸ್ಪಷ್ಟವಾಗಿ ಮಂಡಿಸಿದಾಗ ಅದು ಈ ರೀತಿಯಾಗಿ ಇರುತ್ತದೆ.

ಒಂದು ಮಧ್ಯವರ್ತಿ ನ್ಯಾಯದ ಆಧಾರವಾಕ್ಯಗಳು ಬೇರೆ ಬೇರೆ ಯಾಗಿ ಪಡೆಯದಿರುವುದನ್ನು ನಿರ್ಣಯವು ಪಡೆದಿದ್ದರೆ ಅದು ವ್ಯರ್ಥವಲ್ಲ. ಆಧಾರವಾಕ್ಯಗಳು ಒಟ್ಟಾಗಿ ಸೇರಿದಾಗ ಅವುಗಳಲ್ಲಿಲ್ಲದ್ದು ಯಾವುದೂ ನಿರ್ಣಯದಲ್ಲಿ ಇಲ್ಲವಾದುದರಿಂದ ಅದು ಅಸಾಧುವಲ್ಲ.

ಆಧಾರವಾಕ್ಯಗಳು ಬೇರೆ ಬೇರೆಯಾಗಿ ಪಡೆಯದ್ದನ್ನು ನಿರ್ಣಯವು ಪಡೆದಿರಬೇಕು. ಅಥವಾ ಆಧಾರವಾಕ್ಯಗಳೆರಡೂ ಸೇರಿದಾಗ ಅವುಗಳು ಪಡೆಯದಿದ್ದ ಯಾವುದೂ ನಿರ್ಣಯವು ಪಡೆದಿರಕೂಡದು.

∴ ಅದು ವ್ಯರ್ಥವೂ ಅಲ್ಲ ಅಸಾಧುವೂ ಅಲ್ಲ.

ಮಿಲ್ ಕೈಬಿಟ್ಟಿದ್ದ ತೃತೀಯ ಪಕ್ಷವೊಂದು ಸಾಧ್ಯ ಎಂಬುದನ್ನು ಮೇಲಿನ ವಾದವು ಸ್ಪಷ್ಟಪಡಿಸುತ್ತದೆ. ಆಧಾರವಾಕ್ಯಗಳು ಸೇರಿದಾಗ ಅವುಗಳಲ್ಲಿ ಅವ್ಯಕ್ತವಾಗಿ ಇರುವುದನ್ನು ನಿರ್ಣಯವು ವ್ಯಕ್ತಗೊಳಿಸುತ್ತದೆ ಎಂಬುದು ಆ ತೃತೀಯಪಕ್ಷ. ನಿಜವಾಗಿ ಅನುಮಾನಕ್ರಿಯೆಯ ಕೆಲಸ ಇದು. ಆಧಾರವಾಕ್ಯಗಳು ಪೃಥಕ್ಕಾಗಿ ಪಡೆಯದ ಹೊಸದೊಂದು ಅಂಶವು ಅವು ಸೇರಿದಾಗ ನಿರ್ಣಯದ ರೂಪದಲ್ಲಿ ಉತ್ಪತ್ತಿಯಾಗುತ್ತದೆ. ಅದ್ದರಿಂದ ಮಧ್ಯ ವರ್ತಿ ಅನುಮಾನದಲ್ಲಿ ಹೊಸದೊಂದು ಅಂಶವಿದ್ದು ಅದು ಉಪಯೋಗಕರ ವಾಯಿತು. ಆಧಾರವಾಕ್ಯಗಳು ಎರಡೂ ಸೇರಿದಾಗ ಅವು ಪಡೆಯದಿದ್ದ ಯಾವುದೂ ನಿರ್ಣಯದಲ್ಲಿರುವುದಿಲ್ಲ. ಆದ್ದರಿಂದ ಆಧಾರವಾಕ್ಯಗಳಲ್ಲಿದ್ದು

ನಿರ್ಣಯದಲ್ಲಿ ಇರಕೂಡದು ಎಂಬ ನಿಯಮವನ್ನು ಪಾಲಿಸಿದಂತಾಯಿತು. ಆಧಾರವಾಕ್ಯಗಳ ಸಮ್ಮಿಳನಕ್ರಿಯೆ ಅನುಮಾನಕ್ರಿಯೆ; ಆ ಸಮ್ಮಿಳನವೇ ಅದರ ಜೀವಾಳ. ಇದು ಅವಶ್ಯವಾದದ್ದನ್ನೂ ಮತ್ತು ಹೊಸದಾದ್ದನ್ನೂ ಎರಡನ್ನೂ ಸಾಧಿಸುತ್ತದೆ.

ಅನುಮಾನವು ಅವಶ್ಯವಾದುದ್ದನ್ನೂ ಹೊಸದಾದದ್ದನ್ನೂ—ಎರಡನ್ನೂ ಸಾಧಿಸುತ್ತದೆ ಎಂಬುದನ್ನು ಅನುಮಾನಕ್ರಿಯೆಗೆ ಸಾದೃಶ್ಯವಾದ ಒಂದು ರಾಸಾಯನಿಕಕ್ರಿಯೆಯನ್ನು ವರ್ಣಿಸಿ ಸ್ಪಷ್ಟಪಡಿಸಬಹುದು. ಆಮ್ಲಜನಕ ಜಲ ಜನಕಗಳು ಬೇರೆ ಬೇರೆಯಾಗಿದ್ದಾಗ ಅವು ನೀರನ್ನು ಪಡೆದಿರುವುದಿಲ್ಲ. ಆದರೆ ಅವೆರಡೂ ಒಂದು ಗೊತ್ತಾದ ಪ್ರಮಾಣದಲ್ಲಿ ಸೇರಿದಾಗ, ನೀರು ಅಗತ್ಯವಾಗಿ ಉತ್ಪತ್ತಿಯಾಗಲೇಬೇಕು. ಆಮ್ಲಜನಕ ಜಲಜನಕಗಳು ಸೇರಿ ದಾಗ ಅವುಗಳಲ್ಲಿ ಇಲ್ಲದ್ದು ಯಾವುದೂ ನೀರಿನಲ್ಲಿಲ್ಲ. ಆದರೂ ನೀರು ಹೊಸ ವಸ್ತು. ಹಾಗೆಯೇ ಆಧಾರವಾಕ್ಯಗಳು ಸೇರಿದಾಗ ಅವೆರಡರಲ್ಲೂ ಇಲ್ಲದ್ದು ಯಾವುದೂ ನಿರ್ಣಯದಲ್ಲಿಲ್ಲ. ಆದರೂ ನಿರ್ಣಯ ಹೊಸದು; ಆಧಾರವಾಕ್ಯ ಗಳನ್ನು ಬೇರೆ ಬೇರೆಯಾಗಿ ತೆಗೆದುಕೊಂಡಾಗ ಅವುಗಳಲ್ಲಿ ನಿರ್ಣಯ ಕಾಣುವುದಿಲ್ಲ.

## ಅಭ್ಯಾಸಗಳು (೧೭)

೧. 'ಸಿಲಜಿಸಂ' ಚಕ್ರಕ ದೋಷಕ್ಕೆ ಪಾತ್ರವಾಗಿದೆ ಎಂದು ಮಿಲ್ ವಾದಿಸಿರುತ್ತಾನೆ. ಅವನ ವಾದವನ್ನು ವಿವರಿಸಿ ಮತ್ತು ವಿಮರ್ಶಿಸಿ.

೨. ಸಿಲಜಿಸಂನ ವಿಚಾರವಾಗಿ ಮಿಲ್ ಮಾಡಿರುವ ಆಪಾದನೆಯನ್ನು ಒಂದು ಇಕ್ಕೋಡಿನ ವಾದದ ರೂಪವಾಗಿ ತಿಳಿಸಿ. ಆ ಇಕ್ಕೋಡಿನ ದೋಷವನ್ನು ವ್ಯಕ್ತಪಡಿಸಲು ಅದಕ್ಕೆ ಪ್ರತಿಯಾದ ಇಕ್ಕೋಡಿನ ವಾದವನ್ನು ಮಂಡಿಸಿ.

## ೧೮. ನಿಗಮನನ್ಯಾಯಕ್ಕೆ ಸಂಬಂಧಪಟ್ಟ ದೋಷಗಳು
## (Fallacies of Deductive Reasoning)

ಆಂಗ್ಲ ಭಾಷೆಯಲ್ಲಿ 'ಫ್ಯಾಲಸಿ' (Fallacy) ಎಂಬ ಪದಕ್ಕೆ ಅಸಾಧುವಾದ ನ್ಯಾಯ ಅಥವಾ ದೋಷಯುತವಾದ ವಾದ ಎಂದು ಅರ್ಥ. ಪಾಶ್ಚಾತ್ಯ ತಾರ್ಕಿಕರಲ್ಲಿ ಕೆಲವರು ಈ ಪದವನ್ನು ದುಷ್ಟವಾದಗಳಿಗಲ್ಲದೆ ಎಲ್ಲ ವಿಧವಾದ ಆಲೋಚನೆಯ ತಪ್ಪುಗಳಿಗೂ ಅನ್ವಯಿಸುತ್ತಾರೆ. ಭಾರತೀಯ ತಾರ್ಕಿಕರೆಲ್ಲರೂ ತಾರ್ಕಿಕ ಆಭಾಸಗಳನ್ನು ವಾದದ ದೋಷಗಳೆಂದು ಪರಿಗಣಿಸಿರುತ್ತಾರೆ. ಆದ್ದರಿಂದ ಭಾರತೀಯ ತರ್ಕದಲ್ಲಿ ಆಭಾಸಗಳ ವಿವರಣೆ ತುಂಬ ಸಂಗ್ರಹ ವಾಗಿರುತ್ತದೆ. ನ್ಯಾಯಾಭಾಸಗಳು ಮೂರು ಅಥವಾ ಐದು. ಇವೆಲ್ಲವೂ ಹೇತುವಿಗೆ ಸಂಬಂಧಪಟ್ಟುವು. ಆದ್ದರಿಂದ ಅವುಗಳನ್ನು ಭಾರತೀಯ ತಾರ್ಕಿಕರು ಹೇತ್ವಾಭಾಸಗಳೆಂದು ಕರೆದಿರುತ್ತಾರೆ. 'ಫ್ಯಾಲಸಿ' ಅಥವಾ 'ತಾರ್ಕಾಭಾಸ' ಎಂಬ ಪದವನ್ನು ಕಟ್ಟುನಿಟ್ಟಾದ ಈ ಅರ್ಥದಲ್ಲಿ ಉಪ ಯೋಗಿಸುವುದೇ ನ್ಯಾಯವಾದರೂ, ಅದನ್ನು ಆಲೋಚನೆಯ ತಪ್ಪುಗಳು ಎಂಬ ವಿಶಾಲವಾದ ಅರ್ಥದಲ್ಲಿ ಉಪಯೋಗಿಸುವುದು ಒಂದು ರೀತಿಯಲ್ಲಿ ಉಪ ಯುಕ್ತವಾದುದೆಂದು ಹೇಳಬಹುದು. ಅನೇಕ ವೇಳೆ ವಾಕ್ಯಗಳನ್ನು ತಪ್ಪಾಗಿ ಅರ್ಥಮಾಡಿಕೊಳ್ಳುವುದರಿಂದ ವಾದವು ದೋಷಯುತವಾಗುತ್ತದೆ; ತಪ್ಪಾದ ನಿರ್ಣಯಕ್ಕೆ ಬರಲು ಅವಕಾಶ ಉಂಟಾಗುತ್ತದೆ. ಆದ್ದರಿಂದ ಅರಿಸ್ಟಾಟಲಿನ ಕಾಲದಿಂದಲೂ ಆಭಾಸಗಳನ್ನು ವಿವರಿಸುವ ಪ್ರಕರಣದಲ್ಲಿ ಮಧ್ಯವರ್ತಿ ಅನುಮಾನದ ದೋಷಗಳ ಜೊತೆಗೆ, ಅರ್ಥವಿವರಣೆಯ ದೋಷಗಳನ್ನೂ ಅಂದರೆ 'ಶಬ್ದಬೋಧ' ದೋಷಗಳನ್ನೂ ಸೇರಿಸುವುದು ವಾಡಿಕೆಯಾಗಿದೆ. ನಾವು ಲಕ್ಷಣ ನಿರೂಪಣೆ (Definition) ಮತ್ತು ಶಬ್ದಬೋಧ (Import of propositions) ಮುಂತಾದ ವಿಷಯಗಳನ್ನು ಕುರಿತು ಪ್ರಸ್ತಾಪ ಮಾಡಿ ದಾಗ ಅವುಗಳಿಗೆ ಸಂಬಂಧಪಟ್ಟ ದೋಷಗಳನ್ನೂ ಸೂಚಿಸಿರುತ್ತೇವೆ. ಅವುಗಳ ನ್ನೆಲ್ಲ ಒಟ್ಟಿಗೆ ಒಂದು ಕಡೆ ಸೇರಿಸಿ ನೋಡಿದಾಗ ನಮ್ಮ ದೃಷ್ಟಿ ವಿಹಂಗಮ ದೃಷ್ಟಿಯಾಗುತ್ತದೆ. ಅವುಗಳನ್ನೆಲ್ಲ ವರ್ಗೀಕರಣಮಾಡಿದರೆ ಅವು ಈ ರೂಪ ಪಡೆಯುತ್ತವೆ:


ಆಲೋಚನೆಯ ತಪ್ಪುಗಳು
ಶಬ್ದಬೋಧ ಅಥವಾ ಅರ್ಥ ವಿವರಣೆಯ ದೋಷಗಳು
(i) ಅಸಾಧುವಾದ ಲಕ್ಷಣ ನಿರೂಪಣೆ
(ii) ಅಸಾಧುವಾದ ವಿಭಜನೆ
(iii) ಸಮಕ್ಷ ಅನುಮಾನದ ದೋಷಗಳು
(iv) 'ಆ್ಯಂಫಿಬೊಲಿ' ದೋಷ
(v) 'ಆ್ಯಕ್ಸೆಂಟ್' ದೋಷ
ವಾದದೋಷಗಳು
(ಅ) ಅನುಮಾನದ ನಿಯಮಗಳನ್ನು ಉಲ್ಲಂಘಿಸುವಂಥವು
(i) ನಾಲ್ಕು ಪದಗಳ ದೋಷ
(ii) ಮಧ್ಯಮಪದ ಒಂದು ಸಲವಾದರೂ ಪೂರ್ಣ ನಿರ್ದೇಶನವ್ಯಾಪ್ತಿ ಪಡೆಯದಿರುವುದು
(iii) 'ಇಲ್ಲಿಸಿಟ್ ಮೇಜರ್'
(iv) 'ಇಲ್ಲಿಸಿಟ್ ಮೈನರ್'
(v) ಎರಡು ನೇತ್ಯರ್ಥಕಪ್ರತಿಜ್ಞೆಗಳುಳ್ಳ ನ್ಯಾಯ
(vi) ಎರಡು ಭಾಗಾನ್ವಯ ಪ್ರತಿಜ್ಞೆಗಳುಳ್ಳ ನ್ಯಾಯ
(vii) ಪೂರ್ವಪದವನ್ನು ನಿರಾಕರಿಸುವ ಸೋಪಾಧಿಕನ್ಯಾಯ
(viii) ಉತ್ತರಪದವನ್ನು ಸ್ಥಿರೀಕರಿಸುವ ಸೋಪಾಧಿಕನ್ಯಾಯ
(ix) ಒಂದನ್ನೊಂದು ಬಹಿಷ್ಕರಿಸದ ಪಕ್ಷಗಳ ದೋಷ
ವಾದವಿಷಯಕ್ಕೆ ಸಂಬಂಧಿಸಿದ ದೋಷಗಳು
ಮರೆಮಾತು (Equivocation)
(i) ಸಂದಿಗ್ಧವಾದ ಮಾತು ಅಥವಾ ಹೊರಳುಮಾತು
(ii) 'ಕಾಂಪೊಸಿಷನ್' ದೋಷ
(iii) 'ಡಿವಿಷನ್' ದೋಷ
(iv) 'ಆ್ಯಕ್ಸಿಡೆಂಟ್' ದೋಷ
(v) ಇಕ್ಕೋಡಿನ ದೋಷ
ಅಸಾಧುವಾದ ಅಂಗೀಕರ
(Presumption)
(i) ಚಕ್ರಕ (Petitio principii)
(ii) ಕಾಂಪ್ಲೆಕ್ಸ್ ಕ್ವೆಶ್ಚನ್
(iii) ಇರ್‌ರೆಲೆವೆಂಟ್ ಕನ್‌ಕ್ಲೂಷನ್
(iv) ನಾನ್‌ಸಿಕ್ವಿಟಾರ್

## I ಶಬ್ದಬೋಧಕ್ಕೆ ಸಂಬಂಧಪಟ್ಟ ತಪ್ಪುಗಳು

ವಾಕ್ಯಗಳನ್ನು ಸರಿಯಾಗಿ ಅರ್ಥಮಾಡಿಕೊಳ್ಳದಿರುವುದರಿಂದ ಈ ಬಗೆಯ ತಪ್ಪುಗಳು ಹುಟ್ಟುತ್ತವೆ. ಆದ್ದರಿಂದ ಅವುಗಳನ್ನು ವಾದದ ದೋಷಗಳೆಂದು ಎಣಿಸಕೂಡದು. ಅಪಾರ್ಥಮಾಡಿಕೊಳ್ಳಬಹುದಾದ ವಾಕ್ಯಗಳು ವಾದದಲ್ಲಿ ಸೇರಿ, ನಾವು ಅವುಗಳನ್ನು ಅಪಾರ್ಥಮಾಡಿಕೊಂಡರೆ, ನಮ್ಮ ನಿರ್ಣಯ ತಪ್ಪಾಗುತ್ತದೆ. ಅಲ್ಲದೆ ನಾವು ವಾಕ್ಯಗಳನ್ನು ಅಪಾರ್ಥಮಾಡಿಕೊಳ್ಳುವುದು ಒಂದು ವಿಧವಾದ ತಿಳಿವಿನ ದೋಷವೇ. ಯಾರಾದರೂ ನಮ್ಮ ವಿವೇಚನೆಗಾಗಿ ನಮ್ಮ ಮುಂದೆ ಒಂದು ಪ್ರತಿಜ್ಞೆಯನ್ನು ಇಟ್ಟಾಗ ಅದರ ಅರ್ಥವನ್ನು ಸ್ಪಷ್ಟವಾಗಿ ತಿಳಿದುಕೊಳ್ಳಲು ಪ್ರಯತ್ನಿಸಬೇಕು. ನಾವು ಹೇಳಿದ ವಾಕ್ಯಗಳನ್ನೇ ಆಗಲಿ ಇತರರ ಬಾಯಿಂದ ಹೊರಜಿದ್ದ ವಾಕ್ಯಗಳನ್ನೇ ಆಗಲಿ ಅವುಗಳ ಒಂದೊಂದು ಭಾಗವನ್ನೂ ನಾವು ಕಣ್ಣಿಟ್ಟು ಪರೀಕ್ಷಿಸಬೇಕು. ಅವುಗಳ ಅರ್ಥ ಅಸ್ಪಷ್ಟವಾಗಿ ತೋರಿದಾಗ ಅಥವಾ ಸಂದಿಗ್ಧವಾಗಿ ತೋರಿದಾಗ, ಯಾವುದು ಅವುಗಳ ನಿರ್ದಿಷ್ಟವಾದ ಅರ್ಥ ಎಂಬುದನ್ನು ನಿಶ್ಚಯಿಸಬೇಕು. ಹಾಗೆ ಮಾಡುವುದರಿಂದ ಎಷ್ಟೋ ಅಪವಾದಗಳು ತಪ್ಪುತ್ತವೆ.

**(೧) ಲಕ್ಷಣ ನಿರೂಪಣೆಯ ದೋಷಗಳು**—ನಾವು ಯಾವುದಾದರೂ ಪದದ ಲಕ್ಷಣ (Definition) ವನ್ನು ತಿಳಿಸಿದಾಗ, ನಾವು ಹೇಳಿದ ಲಕ್ಷಣ ಅತಿ ವಿಶಾಲವಾಗಿಯೂ ಇರಕೂಡದು ಅತಿ ಸಂಕುಚಿತವಾಗಿಯೂ ಇರಕೂಡದು; ಅದು ಸರಿಯಾಗಿ ಹೊಂದಿಕೊಳ್ಳಬೇಕು. ಮನುಷ್ಯನು ಪ್ರಾಣಿ ಎಂದು ಲಕ್ಷಣ ಹೇಳಿದಾಗ, ಪ್ರಾಣಿ ಎಂಬ ಭಾವನೆ ಮನುಷ್ಯ ಎಂಬ ಭಾವನೆಯನ್ನು ನಮ್ಮ ಮನಸ್ಸಿನಲ್ಲಿ ಹುಟ್ಟಿಸಬೇಕಾದ್ದಿಲ್ಲ; ಅನೇಕ ವೇಳೆ ಹುಟ್ಟಿಸುವುದಿಲ್ಲ. ಪ್ರಾಣಿ ಎಂದಾಗ ನಮ್ಮ ಮನಸ್ಸಿನ ಮುಂದೆ ಕತ್ತೆ ಎಂಬ ಭಾವನೆಯಾದರೂ ಬರಬಹುದು, ಕೋತಿ ಎಂಬ ಭಾವನೆಯಾದರೂ ಬರಬಹುದು. ಮನುಷ್ಯ ಎಂಬ ಪದಕ್ಕೆ ಮಾಧ್ವರು ಎಂದು ಲಕ್ಷಣ ಹೇಳಿದರೆ, ಅರ್ಥ ತೀರ ಸಂಕುಚಿತವಾಗುತ್ತದೆ; ಮಾಧ್ವರು ಮಾತ್ರ ಮನುಷ್ಯರು, ಇತರರು ಮನುಷ್ಯರೇ ಅಲ್ಲ ಎಂಬ ಅರ್ಥ ಬರುತ್ತದೆ. ಅರ್ಥನಿರೂಪಣೆ ಚಕ್ರಕವಾಗಿದ್ದಾಗಲೂ, ರೂಪಕವಾಗಿದ್ದಾಗಲೂ, ನಮಗೆ ಪದದ ನಿಜವಾದ ಅರ್ಥ ಬೋಧೆಯಾಗುವುದಿಲ್ಲ. ಇವುಗಳನ್ನೆಲ್ಲ ಲಕ್ಷಣನಿರೂಪಣೆಯ ಅಧ್ಯಾಯದಲ್ಲಿ ವಿಸ್ತಾರವಾಗಿ ವಿವರವಾಗಿ ತಿಳಿಸಲಾಗಿದೆ.

**(೨) ವಿಭಜನೆಯ ದೋಷಗಳು**—ಇವು ಎರಡು; ಅಡ್ಡ ವಿಭಜನೆ, ಅಪೂರ್ಣ ವಿಭಜನೆ. ನಾವು ಒಂದು ವರ್ಗವನ್ನು ಉಪವರ್ಗಗಳಾಗಿ ವಿಭಾಗ ಮಾಡಿದಾಗ, ಅವು ಬೇರೆ ಬೇರೆ ಪಕ್ಷಗಳಾಗುತ್ತವೆ. ಆ ವರ್ಗದ ತಿಳಿವು ಪೂರ್ಣವಾಗಬೇಕಾದರೆ, ನಾವು ಅದರಲ್ಲಿ ಸೇರಿರುವ ಎಲ್ಲ ಉಪವರ್ಗಗಳನ್ನು ನೋಡಬೇಕು. ಹಾಗೆ ನಾವು ನೋಡದಿದ್ದಾಗ ನಮ್ಮ ತಿಳಿವು ಅಪೂರ್ಣವಾಗುತ್ತದೆ. ವಿಭಾಗವಾದ ಉಪವರ್ಗಗಳು ಒಂದನ್ನೊಂದು ನಿರಾಕರಿಸದಿದ್ದರೆ ನಮ್ಮ ತಿಳಿವು ತೊಡಕಾಗುತ್ತದೆ. ಇಂಥ ವಿಭಜನೆಯನ್ನು ಆಧಾರವಾಗಿ ಉಳ್ಳ ಪಕ್ಷಾಂತರ ಪ್ರತಿಜ್ಞೆಗಳು ಅನುಮಾನದ ಆಧಾರವಾಕ್ಯಗಳಾದಾಗ, ನಿರ್ಣಯ ದೋಷಯುತವಾಗುತ್ತದೆ. ಈ ದೋಷವನ್ನು ಈಗಾಗಲೇ ತಿಳಿಸಲಾಗಿದೆ. ಇದರ ಪ್ರಸ್ತಾಪ ಮುಂದೆ ಇನ್ನೊಂದು ಸಂದರ್ಭದಲ್ಲೂ ಬರುತ್ತದೆ.

**(೩) ಅಸಾಧುವಾದ ಸಮಕ್ಷ ಅನುಮಾನಗಳು**—ಇವು ಎರಡು ವಿಧವಾಗಿರುತ್ತವೆ: (ಅ) ಚತುರ್ವಿಧ ನಿರುಪಾಧಿಕ ಪ್ರತಿಜ್ಞೆಗಳ ಪರಸ್ಪರ ಸಂಬಂಧಗಳನ್ನು ಅರಿಯದೆ, ಒಂದರ ಸತ್ಯಾಸತ್ಯದಿಂದ ಮತ್ತೊಂದರ ಸತ್ಯಾಸತ್ಯವನ್ನು ಸರಿಯಾಗಿ ನಿರ್ಣಯಿಸದಿರುವುದು, ಒಂದು ವಿಧವಾದ ಸಮಕ್ಷ ಅನುಮಾನದ ತಪ್ಪುಗಳು. (ಆ) ಒಂದು ಪ್ರತಿಜ್ಞೆಯನ್ನು ವಿಘಟಿಸುವಾಗ ತಪ್ಪಾಗಿ ವಿಘಟಿಸುವುದು ಇನ್ನೊಂದು ಬಗೆಯಾದ ಸಮಕ್ಷ ಅನುಮಾನದ ತಪ್ಪುಗಳು.

(ಅ) ಎಲ್ಲ ಮಾನವರೂ ತಪ್ಪುಮಾಡುತ್ತಾರೆ ಎಂಬ ಪ್ರತಿಜ್ಞೆ ನಿಜವಾದರೆ, ಯಾವ ಮನುಷ್ಯನೂ ತಪ್ಪುಮಾಡುವುದಿಲ್ಲ ಎಂಬುದು ಅಸತ್ಯವಾಗುತ್ತದೆ, ಎಲ್ಲ ಮನುಷ್ಯರೂ ತಪ್ಪುಮಾಡುತ್ತಾರೆ ಎಂಬ ಪ್ರತಿಜ್ಞೆ ಅಸತ್ಯವಾದರೆ, ಯಾವ ಮನುಷ್ಯನೂ ತಪ್ಪುಮಾಡುವುದಿಲ್ಲ ಎಂಬ ಪ್ರತಿಜ್ಞೆ ಸತ್ಯ ಎಂದು ಕೆಲವು ವೇಳೆ ತಪ್ಪಾಗಿ ವಾದಿಸುತ್ತೇವೆ. E ಸತ್ಯವಾದರೆ A ಅಸತ್ಯ. ಆದರೆ ನಾವು E ಅಸತ್ಯವಾದರೆ A ಸತ್ಯವಾಗುತ್ತದೆ ಎಂದು ಕೆಲವು ವೇಳೆ ತಪ್ಪಾಗಿ ವಾದಿಸುತ್ತೇವೆ. A ಸತ್ಯವಾದರೆ I ಕೂಡ ಸತ್ಯ; E ಸತ್ಯವಾದರೆ O ಕೂಡ ಸತ್ಯ. ಕೆಲವು ವಾಕ್ಯಗಳನ್ನು ಭಾಗಾನ್ವಯ (Particular) ಪ್ರತಿಜ್ಞೆಯಾಗಿ ಅರ್ಥಮಾಡಿಕೊಂಡಾಗ ಅವು ಸತ್ಯವಾಗಿ ಇರುತ್ತವೆ. ಆದರೆ ಅನೇಕ ವೇಳೆ ಅವುಗಳನ್ನು ಪೂರ್ಣಾನ್ವಯ (Universal) ಪ್ರತಿಜ್ಞೆಗಳಾಗಿ ಅರ್ಥಮಾಡಿಕೊಂಡು ಆಗಲೂ ಅವು ಸತ್ಯವಾದುವೆಂದು ತಿಳಿದುಕೊಳ್ಳುತ್ತೇವೆ. ಈ ವಿಧವಾದ ವಾದ ಎಷ್ಟುಘೋರ ದುಷ್ಪರಿಣಾಮಕಾರಿ ಎಂಬುದನ್ನು ಥೂಲೆಸ್ ಎಂಬ ತಾರ್ಕಿಕನು, *Straight and Crooked Thinking* ಎಂಬ ತರ್ಕ ಪುಸ್ತಕದಲ್ಲಿ

ಬಹಳ ಚೆನ್ನಾಗಿ ವಿವರಿಸಿರುತ್ತಾನೆ. "ಒಂದು ದೇಶದಮೇಲೆ ಮತ್ತೊಂದು ದೇಶ, ಒಂದು ಮತದ ಜನರಮೇಲೆ ಮತ್ತೊಂದು ಮತದ ಜನರು, ಒಂದು ಬುಡಕಟ್ಟಿನವರಮೇಲೆ ಮತ್ತೊಂದು ಬುಡಕಟ್ಟಿನವರು, ಒಂದು ಕೋಮಿನವರಮೇಲೆ ಮತ್ತೊಂದು ಕೋಮಿನವರು, ಒಂದು ರಾಜಕೀಯ ಪಕ್ಷದವರಮೇಲೆ ಇನ್ನೊಂದು ರಾಜಕೀಯ ಪಕ್ಷದವರು ಅಪಪ್ರಚಾರ ನಡಸುವಾಗ, 'ಕೆಲವು' ಮತ್ತು 'ಎಲ್ಲ' ಎಂಬ ಪದಗಳಿಗಿರುವ ವ್ಯತ್ಯಾಸವನ್ನು ಅಲಕ್ಷಿಸಿ, 'ಕೆಲವು' ಎಂದು ಮಾತ್ರ ಅವರು ಅರ್ಥಮಾಡಿಕೊಳ್ಳಬೇಕಾದ ವಾಕ್ಯಗಳನ್ನು ಆತುರಪಟ್ಟು 'ಎಲ್ಲ' ಎಂಬ ಅರ್ಥ ಪಡೆದಂತೆ ನಿರ್ಧರಿಸಿಕೊಳ್ಳುತ್ತಾರೆ." 'ಕೆಲವು' ಮತ್ತು 'ಎಲ್ಲ' ಎಂಬ ಪದಗಳ ಗೊಂದಲ, ಮಧ್ಯಯುಗದಲ್ಲಿ ಸಾಮೂಹಿಕವಾಗಿ ಯೆಹೂದ್ಯರ ಕೊಲೆಗೂ, ಫ್ರಾನ್ಸ್‌ನ ಮಹಾಕ್ರಾಂತಿಯ ಕಾಲದಲ್ಲಿ ಸಾಮೂಹಿಕವಾಗಿ ಶ್ರೀಮಂತರ ಕೊಲೆಗೂ ನಮ್ಮ ಕಾಲದಲ್ಲಿ ಕಮ್ಯೂನಿಸ್ಟರ, ಕಮ್ಯೂನಿಸ್ಟರ ವಿರೋಧಿಗಳ ಕೊಲೆಗೂ ಕಾರಣವಾಗಿದೆ.* ಮಧ್ಯಯುಗದಲ್ಲಿ ಯೆಹೂದ್ಯರಲ್ಲಿ ಷೈಲಾಕಿನಂಥ ಧನಪಿಶಾಚಿಗಳು ಕೆಲವರು ಇದ್ದರು. ಯೆಹೂದ್ಯರಲ್ಲದವರಲ್ಲೂ ಧನಪಿಶಾಚಿಗಳು ಕೆಲವರು ಇದ್ದರು. ಹಾಗೆಯೇ ಫ್ರಾನ್ಸಿನ ಮಹಾ ಕ್ರಾಂತಿಯ ಕಾಲದಲ್ಲಿ ಶ್ರೀಮಂತರಲ್ಲೂ ಕೆಲವರು ಕೆಟ್ಟವರಿದ್ದರು, ಬಡವರಲ್ಲೂ ಕೆಲವರು ಕೆಟ್ಟವರಿದ್ದರು. ಹಾಗೆಯೇ ಈಗಿನ ಕಾಲದಲ್ಲಿ ಕಮ್ಯೂನಿಸ್ಟರಲ್ಲಿ ಕೆಲವರು ಕೆಟ್ಟವರಿರುತ್ತಾರೆ, ಕಮ್ಯೂನಿಸ್ಟೇತರರಲ್ಲೂ ಕೆಲವರು ಕೆಟ್ಟವರಿರುತ್ತಾರೆ. ಆದರೆ ಕ್ರೈಸ್ತರು ಯೆಹೂದ್ಯರನ್ನು ಕುರಿತು

---

* R. H. Thouless, *Straight and Crooked Thinking*, Chapter II entitled All and Some, p. 37.

"A Common form of dishonest argument is the statement 'A is B' when 'some A is B' would be true, but in which the untrue statement 'all A is B' is implied for the rest of the argument. The world of propaganda and argumentation is full of such statements."

"Massacres of the Jews in the Middle ages, of Aristocrats in the French Revolution, of Communists and anti-communists in countries of our own time which are more blood-thirsty in their politics than we are—these are all examples of the readiness by men to act on the proposition that 'all A's are evil' when A stands for men of another nation, race or creed. Yet it is apparent to the impartial observer that the truth is merely that 'some A's are evil' (as equally as some are not A's). Cruelty and injustice are resulting now, as they have throughout the history of the world from this Crooked Thinking."

ಮಾತನಾಡುವಾಗ,—ತಮ್ಮಲ್ಲಿರುವಂತೆಯೇ ಅವರಲ್ಲೂ ಕೆಲವರು ಮಾತ್ರ ಧನಪಿಶಾಚಿಗಳಾಗಿರುತ್ತಾರೆ ಎಂಬುದನ್ನು ಮರೆತುಬಿಟ್ಟು—ಎಲ್ಲ ಯೆಹೂದ್ಯರೂ ಧನಪಿಶಾಚಿಗಳು, ಎಲ್ಲ ಯೆಹೂದ್ಯರನ್ನೂ ನಿರ್ಮೂಲಮಾಡಬೇಕು ಎಂದು ಆರ್ಭಟಿಸುತ್ತಿದ್ದರು. ಆದರೆ ಕ್ರೈಸ್ತರ ವಿಚಾರವಾಗಿ ಮಾತನಾಡುವಾಗ ಮಾತ್ರ ತಮ್ಮಲ್ಲಿ ಕೆಲವರೇ ಕೆಟ್ಟವರು ಎಂಬುದನ್ನು ಸ್ಪಷ್ಟಪಡಿಸುತ್ತಿದ್ದರು. ಇಂಥ 'ಡಬಲ್ ಟಾಕ್', ಎರಡು ನಾಲಿಗೆಯ ಮಾತನ್ನು ಜವಾಹರಲಾಲ್ ನೆಹ್ರೂ ಅವರು ನಿರ್ದಾಕ್ಷಿಣ್ಯವಾಗಿ ಖಂಡಿಸುತ್ತಿದ್ದಾರೆ. ಬಂಡವಾಳಗಾರರ ರಾಜ್ಯದಲ್ಲೂ ನ್ಯೂನತೆಗಳಿವೆ, ಕಮ್ಯೂನಿಸ್ಟ್ ರಾಜ್ಯಗಳಲ್ಲೂ ನ್ಯೂನತೆಗಳಿವೆ. ಸಹವಾಸ ಅಸಹ್ಯವಾಗುವಷ್ಟು ಯಾವ ದೇಶವೂ ಪೂರ್ಣವಾಗಿ ದೋಷ ಯುತವಲ್ಲ ಎಂಬ ನೀತಿ 'ಕೆಲವು' ಮತ್ತು 'ಎಲ್ಲ' ಎಂಬ ಗೊಂದಲದಿಂದ ಪಾರಾಗಿದೆ.

**(ಆ) ಅಸಾಧುವಾದ ಆಬ್ವರ್ಷನ್ ಮತ್ತು ಕನ್ವರ್ಷನ್**—ಆಬ್ವರ್ಷನ್ ಎಂಬ ವಿಘಟನಾ ರೂಪದಲ್ಲಿ ಮೂಲವಾಕ್ಯದಲ್ಲಿ ಅಡಗಿರುವ ಭಾವವನ್ನೇ ಮೂಲವಾಕ್ಯದ ಪ್ರತಿರೂಪದಲ್ಲಿ ತಿಳಿಸುತ್ತೇವೆ. ಅನೇಕವೇಳೆ ನಾವು ಮೂಲ ವಾಕ್ಯದಲ್ಲಿ ಅಡಗಿರುವ ಅರ್ಥವನ್ನು ಗ್ರಹಿಸದೆ, ಅಸ್ತ್ಯರ್ಥಕ ಪ್ರತಿಜ್ಞೆಯನ್ನು ಅದೇ ಅರ್ಥವುಳ್ಳ ನೇತ್ಯರ್ಥಕ ಪ್ರತಿಜ್ಞೆಯಾಗಿಯೂ, ನೇತ್ಯರ್ಥಕ ಪ್ರತಿಜ್ಞೆಯನ್ನು ಅದೇ ಅರ್ಥವುಳ್ಳ ಅಸ್ತ್ಯರ್ಥಕ ಪ್ರತಿಜ್ಞೆಯನ್ನಾಗಿ ವಿಘಟಿಸಲು ಪ್ರಯತ್ನಿಸಿದಾಗ, ದೋಷಗಳು ಹುಟ್ಟುತ್ತವೆ. ಉದಾಹರಣೆಗಾಗಿ, 'ಪ್ರಮಾಣಿಕತೆ ಒಳ್ಳೆಯ ನೀತಿ' ಎಂಬುದರ ಭಾವವನ್ನು ಸರಿಯಾಗಿ ಗ್ರಹಿಸದೆ 'ಅಪ್ರಾಮಾಣಿಕತೆ ಕೆಟ್ಟನೀತಿ' ಎಂದು ವಿಘಟಿಸುತ್ತೇವೆ. ಇವೆರಡೂ ಸಮಾನಾರ್ಥ ಪ್ರತಿಜ್ಞೆಗಳಲ್ಲ. ಮೊದಲನೆಯದಕ್ಕೆ ಸಮಾನಾರ್ಥವುಳ್ಳ ಆಬ್ವರ್ಸ್ 'ಯಾವ ಸಂದರ್ಭದಲ್ಲೂ ಪ್ರಾಮಾಣಿಕತೆ ಕೆಟ್ಟ ನೀತಿಯಾಗಿರುವುದಿಲ್ಲ' (S$e\bar{P}$) ಮೊದಲನೆಯದಕ್ಕೆ ಸಮಾನವಾದ ಪೂರ್ಣ ಇನ್ವರ್ಸ್ 'ಕೆಲವು ವೇಳೆ ಅಪ್ರಾಮಾಣಿಕತೆ ಕೆಟ್ಟ ನೀತಿ' ($\bar{S}i\bar{P}$). 'ಪೌರರಲ್ಲದವರು ಮತಕೊಡುವ ಹಕ್ಕನ್ನು ಪಡೆದಿರುವುದಿಲ್ಲ' ಎಂಬ ವಾಕ್ಯವು 'ಎಲ್ಲ ಪೌರರೂ ಮತಕೊಡುವ ಹಕ್ಕನ್ನು ಪಡೆದಿರುತ್ತಾರೆ' ಎಂಬ ವಾಕ್ಯವೂ ಒಂದೇ ಅರ್ಥ ಉಳ್ಳವು ಎಂದು ತಪ್ಪಾಗಿ ತಿಳಿದುಕೊಳ್ಳುತ್ತೇವೆ. ಆದರೆ ಎರಡನೆಯದು ಮೊದಲನೆಯದರ ಇನ್ವರ್ಸ್ ಅಲ್ಲ; ಮೊದಲನೆಯದಕ್ಕೆ ಸಮಾನವಾದ ಅರ್ಥವುಳ್ಳ ಅಸ್ತ್ಯರ್ಥಕ ಪ್ರತಿಜ್ಞೆಯಲ್ಲ. ಸರಿಯಾದ ಇನ್ವರ್ಸ್ ರೂಪ ಇದು: 'ಕೆಲವು ಪೌರರು ಮತಕೊಡುವ ಹಕ್ಕನ್ನು ಪಡೆದಿರುತ್ತಾರೆ' ($\bar{S}iP$). ಈ ಉದಾಹರಣೆಗಳಲ್ಲೂ

'ಎಲ್ಲ' ಮತ್ತು 'ಕೆಲವು' ಪದಗಳ ಗೊಂದಲ ಕಾಣುತ್ತದೆ. 'ಕೆಲವು ಪೌರರು ಮತಕೊಡುವ ಹಕ್ಕನ್ನು ಪಡೆದಿರುತ್ತಾರೆ' ಎಂದು ನಿರ್ಣಯಿಸಬಹುದಾದ ಸಂದರ್ಭದಲ್ಲಿ 'ಎಲ್ಲ ಪೌರರೂ ಮತಕೊಡುವ ಹಕ್ಕನ್ನು ಪಡೆದಿರುತ್ತಾರೆ' ಎಂದು ತರ್ಕಕ್ಕೆ ವಿರುದ್ಧವಾಗಿ ನಿರ್ಣಯಿಸುವುದುಂಟು. ಮೂಲವಾಕ್ಯವನ್ನು SeP ರೂಪವಾಗಿ ಇಟ್ಟುಕೊಂಡು SeP ಅನ್ನು PeS ಆಗಿಯೂ, PeS ಅನ್ನು Pa$\bar{S}$ ಆಗಿಯೂ, Pa$\bar{S}$ ಅನ್ನು $\bar{S}$iP ಆಗಿಯೂ ವಿಘಟಿಸದೆ ನೇರವಾಗಿ ಮೊದಲನೆಯದರಿಂದ ಅದರ ಇನ್ವರ್ಸ್ ರೂಪವನ್ನು ಪಡೆಯಲು ಪ್ರಯತ್ನಿಸಿದರೆ ಬಹುಶಃ ಅನೇಕರು ಈ ತಪ್ಪನ್ನು ಮಾಡುತ್ತಾರೆ.

ಒಂದು ಪೂರ್ಣಾನ್ವಯ ಅಸ್ತ್ಯರ್ಥಕ ಪ್ರತಿಜ್ಞೆಯಿಂದ ಕನ್ವರ್ಷನ್ ಮೂಲಕ ನಿರ್ಣಯವನ್ನು ಸ್ಥಾಪಿಸುವಾಗಲೂ, ವಿಶೇಷಣಪದದ ನಿರ್ದೇಶನ ವ್ಯಾಪ್ತಿಯನ್ನು ಸರಿಯಾಗಿ ತಿಳಿದುಕೊಳ್ಳದೆ, ಅದರ ನಿರ್ದೇಶನವ್ಯಾಪ್ತಿಯನ್ನು ಮಿತಗೊಳಿಸದೆ ಅದು ಪೂರ್ಣವ್ಯಾಪ್ತಿಯನ್ನು ಪಡೆದಂತೆ ಅದನ್ನು ನಿರ್ಣಯದ ವಿಶೇಷ್ಯಪದವಾಗಿ ಉಪಯೋಗಿಸುವುದುಂಟು. 'ಧೀರರಾದವರೆಲ್ಲರೂ ಉದಾರಿಗಳು' ಎಂಬ ಪ್ರತಿಜ್ಞೆಯಿಂದ 'ಉದಾರಿಗಳೆಲ್ಲರೂ ಧೀರರಾದವರು' ಎಂಬ ನಿರ್ಣಯವನ್ನು ಪಡೆದರೆ ಆ ವಾದ ತಪ್ಪಾಗುತ್ತದೆ ; ಕನ್ವರ್ಷನ್ ನಿಬಂಧನೆಯನ್ನು ಉಲ್ಲಂಘಿಸಿದಂತಾಗುತ್ತದೆ. 'ಹೊಳಪಿರುವುದೆಲ್ಲ ಚಿನ್ನವಲ್ಲ' ಎಂಬ ನಾಣ್ಣುಡಿ ಈ ನಿಬಂಧನೆಯನ್ನು ಉಲ್ಲಂಘಿಸದಂತೆ ಎಚ್ಚರಿಕೆ ಕೊಡುತ್ತದೆ. ಚಿನ್ನವೆಲ್ಲ ಹೊಳೆಯುತ್ತದೆಯಾದುದರಿಂದ, ಹೊಳೆಯುವುದೆಲ್ಲ ಚಿನ್ನ ಎಂದು ಜನರು ಭ್ರಾಂತರಾಗುತ್ತಾರೆ. ಜನರು ಆ ಭ್ರಾಂತಿಗೆ ತುತ್ತಾಗದಂತೆ ಈ ನಾಣ್ಣುಡಿ ಬೋಧಿಸುತ್ತದೆ. ಉದ್ದೇಶಪೂರ್ವಕವಾಗಿ ಪ್ರತಿಪಕ್ಷದವರ ಕಣ್ಣಿಗೆ ಮಣ್ಣೆರಚಲು ಹೀಗೆ ವಾದಮಾಡಬಹುದು. ಅನೇಕವೇಳೆ ಅಂಥ ದುರುದ್ದೇಶವಿಲ್ಲದೆಯೂ ಹೀಗೆ ವಾದಮಾಡಬಹುದು. ಭಾವೋದ್ರೇಕದಿಂದ ವಾದಿಸಿದಾಗ ಅಥವಾ ತುಂಬ ಆತುರದಿಂದ ವಾದಿಸಿದಾಗ, ಈ ರೀತಿ ವಾದ ಮಾಡುವುದು ಸಹಜ. 'ತರ್ಕಶಾಸ್ತ್ರದ ಅಭ್ಯಾಸ ಸ್ಪಷ್ಟವಾಗಿ ಆಲೋಚಿಸುವುದಕ್ಕೆ ಸಹಕಾರಿ' ಎಂದು ಹೇಳುತ್ತಿದ್ದಾಗ ಪ್ರತಿಪಕ್ಷದವರು 'ತರ್ಕಶಾಸ್ತ್ರವನ್ನು ಕಲಿಯದವರು ಸ್ಪಷ್ಟವಾಗಿ, ಆಲೋಚಿಸುತ್ತಾರೆ' ಎಂದು ಹೇಳಿ ಅಂಥವರ ಹೆಸರುಗಳನ್ನು ಕೊಡಬಹುದು. ಆದರೆ 'ತರ್ಕಶಾಸ್ತ್ರವು ಸ್ಪಷ್ಟವಾದ ಆಲೋಚನೆಗೆ ಸಹಕಾರಿ' ಎಂದು ಹೇಳಿದಾಗ ಸ್ಪಷ್ಟವಾಗಿ ಆಲೋಚಿಸುವುದಕ್ಕೆ ತರ್ಕಶಾಸ್ತ್ರದ ಅಭ್ಯಾಸವೊಂದೇ ಸಾಧನ ಎಂಬ ಅರ್ಥವಾಗಲಿ, ಸ್ಪಷ್ಟವಾಗಿ ಯೋಚಿಸಿದವರೆಲ್ಲ ತರ್ಕಶಾಸ್ತ್ರವನ್ನು ಅಭ್ಯಾಸಮಾಡಿದವರೆಂಬ

ಅರ್ಥವಾಗಲಿ ಅದರಲ್ಲಿ **ಅಡಗಿರುವುದಿಲ್ಲ;** ಅದನ್ನು ಪ್ರತಿಭಟಿಸುವ ಆತುರದಲ್ಲಿ ಪ್ರತಿಪಕ್ಷದವರು **ಆರೋಪಿಸಿದ** ಅರ್ಥಗಳು ಅವು. 'ತರ್ಕಶಾಸ್ತ್ರದ ಅಭ್ಯಾಸ ಸ್ಪಷ್ಟ ಆಲೋಚನೆಗೆ ಸಹಕಾರಿ' 'S a P' ಎಂಬ ಪ್ರತಿಜ್ಞೆಯ ಕಾನ್ವರ್ಸ್‌ರೂಪ 'ಸ್ಪಷ್ಟವಾಗಿ ಆಲೋಚನೆಗೆ ಸಹಕಾರಿಗಳಾದ ಕೆಲವುದರಲ್ಲಿ ತರ್ಕಶಾಸ್ತ್ರದ ಅಭ್ಯಾಸ ಒಂದು' (P i s).

ಕನ್ವರ್ಷನ್ನಿನ ದೋಷವನ್ನು ಸ್ವಾರಸ್ಯವಾಗಿ ತಿಳಿಸುವ ಉದ್ದೇಶದಿಂದ ಜೆಪ್ಸನ್ ಎಂಬ ತಾರ್ಕಿಕನು, ಲ್ಯೂಯಿ ಕ್ಯಾರೋಲ್ ಬರೆದಿರುವ *Alice in Wonderland* ಎಂಬ ಪುಸ್ತಕದಿಂದ ಒಂದು ಭಾಗವನ್ನು ಉದ್ಧರಿಸಿರುತ್ತಾನೆ. ಅದನ್ನು ಭಾಷಾಂತರಿಸದೆ, ಇಂಗ್ಲೀಷಿನಲ್ಲಿರುವಂತೆಯೆ ಇಲ್ಲಿ ಕೊಡಲಾಗಿದೆ.

"I believe I can guess that," Alice added aloud.

"Do you mean that you think you can find out the answer to it?" said the March Hare.

"Exactly so" said Alice.

"Then you should say what you mean," the March Hare went on.

"I do" Alice hastily replied; "at least — at least I mean what I say, that is the same thing, you know."

"Not the same thing a bit!" said the Hatter.

"You might just as well say, that 'I see what I eat' is the same thing as 'I eat what I see.'"

"You might just as well say," added the March Hare, "that 'I like what I get' is the same thing as 'I get what I like.'"

**(೪) ಆ್ಯಂಫಿಬೊಲಿ**—ಎಂಬ ದೋಷ ವಾಕ್ಯದ ರಚನೆ ಸಂದಿಗ್ಧವಾಗಿರುವುದರಿಂದ ಹುಟ್ಟುತ್ತದೆ. ಇಂಥ ಸಂದಿಗ್ಧವಾದ ರಚನೆಯುಳ್ಳ ವಾಕ್ಯಗಳು ಗ್ರೀಕ್ ಮತ್ತು ಲ್ಯಾಟಿನ್ ಭಾಷೆಗಳಲ್ಲಿ ಹೇರಳವಾಗಿದೆ. ಆಂಗ್ಲಭಾಷೆಯಲ್ಲಿ ತುಂಬ ವಿರಳ. 'The Greeks the Romans Conquer'. 'I hope that you the enemy will slay'. 'The Duke yet lives that Henry shalt depose.' ಈ ವಾಕ್ಯಗಳು ಸಂದಿಗ್ಧವಾದ ರಚನೆಯುಳ್ಳ ವಾಕ್ಯಗಳು. ಮೊದಲನೆಯ ವಾಕ್ಯವನ್ನು 'ಗ್ರೀಕರು ರೋಮನ್ನರನ್ನು ಗೆಲ್ಲುತ್ತಾರೆ' ಎಂದಾದರೂ ಅರ್ಥಮಾಡಿಕೊಳ್ಳಬಹುದು, ಅದಕ್ಕೆ ವಿರುದ್ಧವಾಗಿ 'ರೋಮನ್ನರು ಗ್ರೀಕರನ್ನು ಗೆಲ್ಲುತ್ತಾರೆ' ಎಂದಾದರೂ ಅರ್ಥಮಾಡಿಕೊಳ್ಳಬಹುದು.

ಎರಡನೆಯ ವಾಕ್ಯವನ್ನು 'ನೀನು ಶತ್ರುವನ್ನು ಕೊಲ್ಲುತ್ತೀಯೆ' ಎಂದಾದರೂ ಅರ್ಥಮಾಕೊಳ್ಳಬಹುದು, ಅದಕ್ಕೆ ವಿರುದ್ಧವಾಗಿ 'ಶತ್ರುವು ನಿನ್ನನ್ನು ಕೊಲ್ಲುತ್ತಾನೆ' ಎಂದಾದರೂ ಅರ್ಥಮಾಡಿಕೊಳ್ಳಬಹುದು. ಮೂರನೆಯ ವಾಕ್ಯವೂ ಹಾಗೆಯೇ. ವಾಕ್ಯರಚನೆ ಸಂದಿಗ್ಧವಾಗಿ ಎರಡು ಪರಸ್ಪರ ವಿರುದ್ಧ ಅರ್ಥಗಳಿಗೆ ಅವಕಾಶ ಕೊಡುತ್ತದೆ. ಕನ್ನಡದಲ್ಲಿ ಇಂಥ ಉದಾಹರಣೆಗಳನ್ನು ಕೊಡುವುದು ಕಷ್ಟ. "ಕ್ರೋಸಿಯಸ್ ಪಾರಸಿಕರೊಡನೆ ಯುದ್ಧ ಹೂಡಿದರೆ, ಅವನು ಒಂದು ಮಹಾಚಕ್ರಾಧಿಪತ್ಯವನ್ನು ನಾಶಗೊಳಿಸುತ್ತಾನೆ." ಎಂಬ ವಾಕ್ಯದಲ್ಲಿ ಒಂದು ಮಹಾಚಕ್ರಾಧಿಪತ್ಯ ಎಂಬುದರ ಅರ್ಥ ಸಂದಿಗ್ಧವಾಗಿದೆ. ಆ ಮಹಾಚಕ್ರಾಧಿಪತ್ಯ ಕ್ರೋಸಿಯಸ್ಸಿನದಾದರೂ ಆಗಬಹುದು, ಪಾರಸಿಕರ ಚಕ್ರಾಧಿಪತ್ಯವಾದರೂ ಆಗಬಹುದು. ಕಣಿಹೇಳುವವರು ಹೀಗೆ ಸಂದಿಗ್ಧವಾದ ಭಾಷೆಯನ್ನು ಬಳಸುವುದು ವಾಡಿಕೆ.

**(೫) ಆ್ಯಕ್ಸೆಂಟ್ ದೋಷ**—ಉಚ್ಚಾರಣೆಗೆ ಸಂಬಂಧಪಟ್ಟದ್ದು. ಒಂದು ವಾಕ್ಯದಲ್ಲಿ ಸಲ್ಲದ ಪದವನ್ನು ಒತ್ತಿ ಉಚ್ಚರಿಸುವುದು. ಬೈಬಲಿನಲ್ಲಿನ ಒಂದು ವಾಕ್ಯವನ್ನು ಇದಕ್ಕೆ ಉದಾಹರಣೆಯಾಗಿ ಕೊಡುವುದುಂಟು. And he spake to his son saying, saddle me the ass. And they saddled him. 'me the ass' ಎಂಬ ಭಾಗದಲ್ಲಿ 'me' ಎಂಬುದನ್ನು ಒತ್ತಿ ಹೇಳಿದರೆ, ಕತ್ತೆಯಾದ ನನ್ನ ಮೇಲೆ ಜೀನನ್ನು ಹಾಕು ಎಂದು ಅರ್ಥವಾಗುತ್ತದೆ. 'me' ಎಂಬುದನ್ನು ಒತ್ತಿ ಹೇಳದೆ, 'the ass' ಎಂಬುದನ್ನು ಒತ್ತಿ ಹೇಳಿದರೆ, ನನಗಾಗಿ ಕತ್ತೆಯಮೇಲೆ ಜೀನನ್ನು ಹಾಕು ಎಂದು ಅರ್ಥವಾಗುತ್ತದೆ. 'And they saddled him' ಎಂಬ ಭಾಗದಲ್ಲಿ 'him' ಎಂಬ ಪದ ಕತ್ತೆಗಾದರೂ ಅನ್ವಯಿಸಬಹುದು, ಮನುಷ್ಯನಿಗಾದರೂ ಅನ್ವಯಿಸಬಹುದು. 'Thou shalt not bear false witness against thy neighbour' 'ನೀನು ನಿನ್ನ ನೆರೆಯುವನಿಗೆ ವಿರೋಧವಾಗಿ ಸಾಕ್ಷ್ಯ ಕೊಡಕೂಡದು', ಎಂಬ ವಾಕ್ಯದಲ್ಲಿ 'ನೆರೆಯುವನಿಗೆ' ಎಂಬ ಪದವನ್ನು ಒತ್ತಿ ಹೇಳಿದರೆ, ನೆರೆಯುವರಲ್ಲದವರಿಗೆ ವಿರೋಧವಾಗಿ ಸಾಕ್ಷ್ಯ ಕೊಡಬಹುದು ಎಂಬ ಭಾವ ಬರುತ್ತದೆ. ನಾವು ಒಂದು ವಾಕ್ಯದಲ್ಲಿರುವ ಪದವನ್ನಾಗಲಿ, ವಾಕ್ಯಭಾಗವನ್ನಾಗಲಿ, ಅದು ಉಪಯೋಗವಾಗಿರುವ ಸನ್ನಿವೇಶದಿಂದ ಬೇರ್ಪಡಿಸಿ, ಅಥವಾ ಆ ಸನ್ನಿವೇಶವನ್ನು ಸೂಚಿಸದೆಯೆ ಅದನ್ನು ಉದ್ಧರಿಸಿದಾಗ, ಅದು ಅಪಾರ್ಥಕ್ಕೆ ಒಳಗಾಗುತ್ತದೆ. ಹೀಗೆ ಅಪಾರ್ಥ ಕೊಡುವಂತೆ ಒಂದು ವಾಕ್ಯಭಾಗವನ್ನು ಉದ್ಧರಿಸುವುದು ವೃತ್ತಪತ್ರಿಕೆಗಳವರು ಮಾಡುವ ಕುತಂತ್ರ. ಲಾಯರುಗಳೂ ವಾದ

ಮಾಡುವಾಗ ಅನೇಕ ವೇಳೆ ಇದೇ ವಿಧವಾದ ತಂತ್ರ ಹೂಡುತ್ತಾರೆ. ಅವರು ಕಕ್ಷಿಗೆ ಸಂಬಂಧಪಟ್ಟ ವಿಷಯಗಳನ್ನು ತಪ್ಪಾಗಿ ತಿಳಿಸುವುದಿಲ್ಲ. ಆದರೆ ಕೆಲವು ವಿಷಯಗಳನ್ನು ಲಂಬಿಸಿ, ಒತ್ತಿ ಹೇಳಿ, ತಮ್ಮ ಪಕ್ಷಕ್ಕೆ ಅನಾನುಕೂಲವಾದ ವಿಷಯಗಳನ್ನು ಮರೆಯಿಸಿ, ತಮ್ಮ ಪಕ್ಷಕ್ಕೆ ಅನುಕೂಲವಾದ ವಿಷಯಗಳನ್ನೇ ಮುಖ್ಯವಾಗಿ ಮಾಡುತ್ತಾರೆ. ಹೀಗೆ ಮಾಡಿದಾಗ ಆ ಕಕ್ಷಿಯ ಬಣ್ಣವೇ ಬದಲಾಯಿಸುವಂತೆ ಮಾಡಬಹುದು.

## II. (ಅ) ಸಮಧ್ಯಮ ಅನುಮಾನದ ನಿಬಂಧನೆಗಳನ್ನು ಉಲ್ಲಂಘಿಸುವ ಅಸಾಧು ನ್ಯಾಯಗಳು

ಸಮಧ್ಯಮ ಅನುಮಾನವನ್ನು ವಿವರಿಸಿದ ಸಂದರ್ಭದಲ್ಲೇ ಆ ಅನುಮಾನದ ನಿಬಂಧನೆಗಳನ್ನು ಮುರಿಯುವಂಥ ಅಸಾಧು ನ್ಯಾಯಗಳನ್ನು ಬೇರೆ ಬೇರೆಯಾಗಿ ತಿಳಿಸಿದೆ. ಆದ್ದರಿಂದ ಅವೆಲ್ಲವನ್ನೂ ತಿಳಿಸದೆ ಇಲ್ಲಿ ಮುಖ್ಯವಾದ ಕೆಲವನ್ನು ಮಾತ್ರ ಕೊಟ್ಟಿದೆ.

**(೧) ನಾಲ್ಕು ಪದಗಳ ದೋಷ**—ನಿರುಪಾಧಿಕ ಸಮಧ್ಯಮ ಅನುಮಾನದ ಮೊದಲನೆಯ ನಿಬಂಧನೆಗೆ ಅನುಸಾರವಾಗಿ ಮಧ್ಯವರ್ತಿ ನ್ಯಾಯದಲ್ಲಿ ಮೂರೇ ತಾರ್ಕಿಕಪದ (Terms) ಗಳಿರಬೇಕು. ಅವಕ್ಕಿಂತ ಹೆಚ್ಚಾಗಿದ್ದರೆ ಅದು ದೋಷ. ಮಧ್ಯವರ್ತಿ ನ್ಯಾಯದಲ್ಲಿ ಹೀಗೆ ನಾಲ್ಕುಪದಗಳಿದ್ದಾಗ ಸಾಮಾನ್ಯವಾಗಿ ಮಧ್ಯವರ್ತಿಪದ ಸಂದಿಗ್ಧವಾಗಿರುತ್ತದೆ. ಅದು ಎರಡು ಆಧಾರವಾಕ್ಯಗಳಲ್ಲೂ ಒಂದೇ ಅರ್ಥದಲ್ಲಿ ಉಪಯೋಗವಾಗಿರುವುದಿಲ್ಲ. ಅದು ಒಂದು ಆಧಾರವಾಕ್ಯದಲ್ಲಿ ಒಂದು ಅರ್ಥದಲ್ಲೂ ಇನ್ನೊಂದು ಆಧಾರವಾಕ್ಯದಲ್ಲಿ ಬೇರೆಯ ಅರ್ಥದಲ್ಲೂ ಉಪಯೋಗವಾಗಿರುತ್ತದೆ. ಮಧ್ಯವರ್ತಿ ನ್ಯಾಯದಲ್ಲಿ ಪಕ್ಷ ಮತ್ತು ಸಾಧ್ಯಪದಗಳನ್ನು ಮಧ್ಯವರ್ತಿಯಾದುದರೊಡನೆ ಹೋಲಿಸಿ ನಿರ್ಣಯ ಮಾಡಬೇಕು. ಅನುಮಾನ ನಿಂತಿರುವುದು ಮಧ್ಯವರ್ತಿ ಪದದ ಆಧಾರದ ಮೇಲೆ. ಯಾವುದರೊಡನೆ ನಾವು ಎರಡು ಪದಗಳನ್ನು ಹೋಲಿಸಿ, ಆ ಹೋಲಿಕೆಯ ಆಧಾರದ ಮೇಲೆ ಒಂದನ್ನು ಇನ್ನೊಂದರ ವಿಶೇಷ್ಯವಾಗಿ ತಿಳಿಯುತ್ತೇವೆಯೊ, ಅದು ಒಂದೇ ಆಗಿರಬೇಕು. ಹಾಗಿಲ್ಲದಿದ್ದರೆ ಕೆಳಗಿನ ವಾದದಂತೆ ಅದು ಅಸಾಧುವಾಗುತ್ತದೆ. ಮಧ್ಯವರ್ತಿ ಪದ ಒಂದು 'ಮಾನ,' ಅಳತೆಯ ಪ್ರಮಾಣ. ಒಂದು ಗುಡ್ಡೆಯನ್ನು ಸೇರಿನಿಂದ ಅಳೆದು ಅದರಲ್ಲಿ ಮೂರಿವೆ ಎಂದು ಹೇಳಬಹುದು. ಇನ್ನೊಂದು ಗುಡ್ಡೆಯನ್ನು ಪಾವಿನಿಂದ ಅಳೆದು ಅದರಲ್ಲೂ ಮೂರಿವೆ ಎಂದು ಹೇಳಬಹುದು.

ಆದ್ದರಿಂದ ಎರಡು ಗುಡ್ಡೆಗಳೂ ಸಮ ಎಂದು ಹೇಳಬಹುದೆ? ಹಾಗೆ ಹೇಳುವುದು ಆಭಾಸಕರ. ಹಾಗೆಯೇ ಹೋಲಿಕೆಗೆ ಪ್ರಮಾಣವಾದ ಮಾನ ಒಂದೇ ನ್ಯಾಯದಲ್ಲಿ ಬೇರೆ ಬೇರೆಯಾಗಿ ಉಪಯೋಗವಾದರೂ ಆಭಾಸಕರ.

ನಾವು ಒಳ್ಳೆಯ ನಿಯಮಕ್ಕೆ ವಿಧೇಯರಾಗಬೇಕು.
ಗುರುತ್ವಾಕರ್ಷಣ ನಿಯಮ ಒಳ್ಳೆಯ ನಿಯಮ.
∴ ಗುರುತ್ವಾಕರ್ಷಣ ನಿಯಮಕ್ಕೆ ವಿಧೇಯರಾಗಿರಬೇಕು.

ಮೊದಲನೆಯ ವಾಕ್ಯದಲ್ಲಿ 'ಒಳ್ಳೆಯ ನಿಯಮ' ಎಂಬ ಪದಕ್ಕೆ "ಧಾರ್ಮಿಕ ನಿಯಮ" ಎಂದು ಅರ್ಥ, ಎರಡನೆಯ ವಾಕ್ಯದಲ್ಲಿ "ಒಳ್ಳೆಯ ನಿಯಮ" ಎಂಬುದಕ್ಕೆ ಸರಿಯಾಗಿ ಸಿದ್ಧಾಂತವಾದ ಭೌತಶಾಸ್ತ್ರ ನಿಯಮ ಎಂದು ಅರ್ಥ. ಮೊದಲನೆಯ ವಾಕ್ಯದಲ್ಲಿ ಹೇಳಿರುವ ಧಾರ್ಮಿಕ ನಿಯಮ ನಾವು ಪಾಲಿಸಬೇಕಾದದ್ದು, ಆದರೆ ಅದನ್ನು ಪಾಲಿಸದೆ ಇರಬಹುದು. ಆದರೆ ಭೌತಶಾಸ್ತ್ರ ನಿಯಮ ನಾವು ಪಾಲಿಸಬೇಕಾದ ನಿಯಮವಲ್ಲ. ಅದನ್ನು ಪಾಲಿಸುವುದು ಬಿಡುವುದು ನಮ್ಮ ಅಧೀನದಲ್ಲಿಲ್ಲ. ನಮ್ಮ ಯತ್ನಕ್ಕೆ ಒಳಪಡದೆ ಅಗತ್ಯವಾಗಿ ನಡೆಯಬೇಕಾದುದಕ್ಕೆ ವಿಧೇಯವಾಗಿರಬೇಕು ಎಂಬುದು ಅರ್ಥವಿಲ್ಲದ ಮಾತು. ಮಧ್ಯಮಪದ ಪೂರ್ಣ ನಿರ್ದೇಶನವ್ಯಾಪ್ತಿ ಪಡೆಯದಿರುವುದು ಇನ್ನೊಂದು ಬಗೆಯ ಮಧ್ಯಮಪದದ ದೋಷ. ಈ ದೋಷಕ್ಕೆ ಆ್ಯಲೀಸ್ ಇನ್ ವಂಡರ್‌ಲ್ಯಾಂಡ್ ಪುಸ್ತಕದಿಂದ ಜೆಪ್ಸನ್* ಸ್ವಾರಸ್ಯವಾದ ಈ ಉದಾಹರಣೆ ಕೊಡುತ್ತಾನೆ.

ಹಾವುಗಳಿಗೆ ಮೊಟ್ಟೆಗಳನ್ನು ಕಂಡರೆ ಆಸೆ
ಸಣ್ಣ ಹುಡುಗಿಯರಿಗೆ ಮೊಟ್ಟೆಗಳನ್ನು ಕಂಡರೆ ಆಸೆ
∴ ಸಣ್ಣ ಹುಡುಗಿಯರು ಹಾವುಗಳು.

---

* Alice, in one of her very tall moments, finds herself looking down into a nest of pigeon's eggs in the topmost branch of a tree. "Serpent!" screamed the Pigeon . . . "You are a serpent; and there is no use denying it, I suppose you will be telling me that you have never tasted an egg!" "Little girls eat eggs quite as much as serpents do, you know". "I don't believe it, said the Pigeon; but if they do, why then, they're a kind of serpent, that is all I can say."

Now the pigeon's argument ran:
All serpents like eggs.
Little girls like eggs.
∴ Little girls are serpents.

ಸಾಧ್ಯ ಮತ್ತು ಪಕ್ಷಪದಗಳನ್ನು ಆಧಾರವಾಕ್ಯಗಳಲ್ಲಿ ಒಂದು ಅರ್ಥ ದಲ್ಲಿಯೂ, ನಿರ್ಣಯದಲ್ಲಿ ಬೇರೆಯ ಅರ್ಥದಲ್ಲೂ ಉಪಯೋಗಿಸಿದಾಗ ನಾಲ್ಕು ಪದಗಳ ದೋಷ ಹುಟ್ಟುತ್ತದೆ.

ಸಮಧ್ಯಮ ಅನುಮಾನವನ್ನು ವಿವರಿಸಿದಾಗ ಇತರ ಸಮಧ್ಯಮ ವಾದದ ದೋಷಗಳನ್ನು ವಿಸ್ತಾರವಾಗಿ ತಿಳಿಸಿರುವುದರಿಂದ, ಇಲ್ಲಿ ಅವುಗಳನ್ನು ವಿವರಿಸದೆ ಬಿಟ್ಟಿದೆ.

## II ವಿಷಯಕ್ಕೆ ಸಂಬಂಧಪಟ್ಟ ಆಭಾಸಗಳು (Material fallacies)

ತಾರ್ಕಿಕ ನಿಯಮಗಳನ್ನು ಉಲ್ಲಂಘಿಸುವ ವಾದಗಳನ್ನು ಮಾತ್ರ ತಾರ್ಕಿಕ ದೋಷಗಳಾಗಿ ಭಾವಿಸಬೇಕು, ವಾದವಿಷಯಕ್ಕೆ ಸಂಬಂಧಪಟ್ಟ ದೋಷಗಳು ತರ್ಕಶಾಸ್ತ್ರಕ್ಕೆ ಸಂಬಂಧಪಟ್ಟುವಲ್ಲವಾದ್ದರಿಂದ ಅವುಗಳನ್ನು ತರ್ಕಗ್ರಂಥಗಳಲ್ಲಿ ಸೇರಿಸಕೂಡದು ಎಂದು ಕೆಲವು ಪಾಶ್ಚಾತ್ಯ ತಾರ್ಕಿಕರು ವಾದಿಸಿರುತ್ತಾರೆ. ಇದು ಒಂದು ದೃಷ್ಟಿಯಲ್ಲಿ ಒಪ್ಪತಕ್ಕದ್ದೇ. ಆದರೂ ಇವುಗಳ ಹುಟ್ಟಿಗೂ ನ್ಯಾಯ ನಿಯಮಗಳ ಉಲ್ಲಂಘನೆ ಕಾರಣವಾದ್ದರಿಂದ ಅವುಗಳನ್ನು ತಿಳಿಸುವುದೂ ಆವಶ್ಯಕ. (ಅ) ಮರೆಮಾತು (Eqivocation) ಇವುಗಳ ಹುಟ್ಟಿಗೆ ಒಂದು ಕಾರಣ. (ಆ) ಪ್ರಮಾಣದ ಆಧಾರವಿಲ್ಲದೆಯೆ ಒಂದು ಪ್ರತಿಜ್ಞೆಯನ್ನು ಪ್ರಮಾಣವಾಗಿ ಅಂಗೀಕರಿಸುವುದು (Presumption) ಎರಡನೆಯ ಕಾರಣ. ಇವೆರಡೂ ತರ್ಕದ ನಿಯಮಗಳನ್ನು ಉಲ್ಲಂಘಿಸುತ್ತವೆ. ನ್ಯಾಯಬದ್ಧವಾದ ಎಲ್ಲ ವಾದಗಳಲ್ಲೂ ಉಪಯೋಗಿಸುವ ಪದಗಳು ಸ್ಪಷ್ಟವಾಗಿರಬೇಕು; ವಾದದ ಉದ್ದಕ್ಕೂ ಅವು ಒಂದೇ ನಿರ್ದಿಷ್ಟ ಅರ್ಥದಲ್ಲಿ ಉಪಯೋಗವಾಗಬೇಕು. ಮರೆಮಾತು ಈ ನಿಬಂಧನೆಯನ್ನು ಉಲ್ಲಂಘಿಸುತ್ತದೆ. ಒಂದು ನಿರ್ಣಯವನ್ನು ನಾವು ಸಾಧಿಸದೆಯೆ ಅದನ್ನು ಸಾಧಿಸಿದಂತೆ ಇಟ್ಟುಕೊಳ್ಳಬಾರದು. ಅದು ಆಧಾರವಾಕ್ಯಗಳಿಂದ ನೇರವಾಗಿ ಹೊರಬೀಳಬೇಕು. ಆಧಾರವಿಲ್ಲದ ಅಂಗೀಕರಣ ಈ ನ್ಯಾಯತತ್ತ್ವಕ್ಕೆ ವಿರುದ್ಧವಾದದ್ದು.

**(ಅ) ಮರೆಮಾತಿನ ದೋಷಗಳು**—(೧) ಸಂದಿಗ್ಧವಾದ ಮಾತು, ಅಥವಾ ಹೊರಳು ಮಾತು, ಸಾಮಾನ್ಯವಾಗಿ ನಾಲ್ಕು ಪದಗಳುಳ್ಳ ನ್ಯಾಯಕ್ಕೆ ಕಾರಣ. ಒಂದೇ ಪದ ವಾದದ ಒಂದು ಭಾಗದಲ್ಲಿ ಒಂದು ಅರ್ಥದಲ್ಲೂ, ಮತ್ತೊಂದು ಭಾಗದಲ್ಲಿ ಇನ್ನೊಂದು ಅರ್ಥದಲ್ಲೂ ಉಪಯೋಗವಾಗಬಹುದು. ಇದಕ್ಕೆ ಒಂದು ಉದಾಹರಣೆಯನ್ನು ಕೊಟ್ಟು ಸ್ಪಷ್ಟಪಡಿಸಬಹುದು:

'ಮಾಡಬೇಕಾದದ್ದು ಕಾನೂನಿನ ಮೂಲಕ ವಿಧಿಸಲ್ಪಡಬೇಕಾದದ್ದು. ದಾನ ಮಾಡಬೇಕಾದದ್ದು.' ಅದ್ದರಿಂದ ಅದು ಕಾನೂನಿನ ಮೂಲಕ ವಿಧಿಸಲ್ಪಡ ಬೇಕಾದದ್ದು.' ಮೊದಲನೆಯ ಆಧಾರವಾಕ್ಯದಲ್ಲಿ "ಮಾಡಬೇಕಾದದ್ದು" ಎಂಬುದಕ್ಕೆ ಬಲಾತ್ಕಾರವಾಗಿ, ಶಿಕ್ಷೆಯ ಬೆದರಿಕೆಯಿಂದ ಆಚರಣೆಗೆ ತರಬಹು ದಾದದ್ದು ಎಂದು ಅರ್ಥ. ಎರಡನೆಯದರಲ್ಲಿ "ಮಾಡಬೇಕಾದದ್ದು" ಎಂಬ ಪದಕ್ಕೆ ಕರ್ತವ್ಯ ಎಂದು ಅರ್ಥ. ಕರ್ತವ್ಯ ಬಲಾತ್ಕಾರವಾಗಿ ಆಚರಣೆಗೆ ತರಬಹುದಾದ್ದಲ್ಲ. ಮೇಲಿನ ವಾದದಲ್ಲಿ ಮಧ್ಯವರ್ತಿಪದ ಬೇರೆ ಬೇರೆ ಅರ್ಥ ಗಳಲ್ಲಿ ಉಪಯೋಗವಾಗಿದೆ. ಸಾಧ್ಯಪದವೂ ಮತ್ತು ಪಕ್ಷಪದವೂ ಹೀಗೆಯೇ ವಾದದ ಬೇರೆ ಬೇರೆ ಭಾಗಗಳಲ್ಲಿ ಬೇರೆ ಬೇರೆ ಅರ್ಥಗಳಲ್ಲಿ ಉಪಯೋಗವಾಗ ಬಹುದು. ಒಂದು ಮಾತಿನ ಅರ್ಥಗಳು ಬೇರೆ ಬೇರೆಯಾಗಿರಬಹುದು ಎಂಬುದನ್ನು ಗಮನಿಸದೆ ಮಾತಿನ ರೂಪವನ್ನು ಮಾತ್ರ ಲಕ್ಷಿಸಿದರೆ ಆ ವಾದರೂಪ ಸರಿಯಾಗಿಯೇ ಕಾಣುತ್ತದೆ. ನಾವು ಆಧಾರವಾಕ್ಯಗಳ ಅಥವಾ ನಿರ್ಣಯದ ವಿಷಯವನ್ನು ಪರೀಕ್ಷಿಸಿದಾಗ ಮಾತ್ರ ಅವುಗಳಲ್ಲಿ ಒಂದೇ ಪದ ಬೇರೆ ಬೇರೆ ಅರ್ಥಗಳಲ್ಲಿ ಉಪಯೋಗವಾಗಿದೆ ಎಂದು ವ್ಯಕ್ತವಾಗುತ್ತದೆ. ಆದ್ದರಿಂದಲೇ ಈ ದೋಷವನ್ನು ವಾದವಸ್ತುವಿಗೆ ಸಂಬಂಧಪಟ್ಟ ದೋಷ ಎಂದು ಗಣಿಸಿರುವುದು.

**(೨) ಫ್ಯಾಲಸಿ ಆಫ್ ಕಾಂಪೊಸಿಷನ್**—ಒಂದು ವಸ್ತುವಿನ ಅಥವಾ ಒಂದು ವರ್ಗದ ಒಂದೊಂದು ಭಾಗಕ್ಕೆ ಮಾತ್ರ ಬೇರೆ ಬೇರೆಯಾಗಿ ಅನ್ವಯ ಮಾಡಬಹುದಾದದ್ದನ್ನು, ಒಟ್ಟಾಗಿ ಆ ವಸ್ತುವಿಗೆ ಅಥವಾ ವರ್ಗಕ್ಕೆ ಅನ್ವಯಿ ಸಿದಾಗ 'ಫ್ಯಾಲಸಿ ಆಫ್ ಕಾಂಪೊಸ್ಸಿಷನ್' (Fallacy of composition) ಹುಟ್ಟುತ್ತದೆ. 'ಎಲ್ಲ' ಎಂಬುದನ್ನು 'ಒಂದೊಂದು' ಎಂಬ ಅರ್ಥದಲ್ಲಿಯೂ 'ಒಟ್ಟಾಗಿ' ಎಂಬ ಅರ್ಥದಲ್ಲೂ ಉಪಯೋಗಿಸಬಹುದು. ಆದರೆ ಒಂದು ವಾದದಲ್ಲಿ ಉದ್ದಕ್ಕೂ ಆ ಪದ ಒಂದೇ ಅರ್ಥದಲ್ಲಿ ಉಪಯೋಗವಾಗಬೇಕು. ಒಂದು ಭಾಗದಲ್ಲಿ 'ಒಂದೊಂದು' ಎಂಬ ಅರ್ಥದಲ್ಲೂ, ಇನ್ನೊಂದು ಭಾಗದಲ್ಲಿ 'ಒಟ್ಟಾಗಿ' ಎಂಬ ಅರ್ಥದಲ್ಲೂ ಉಪಯೋಗಿಸಿದಾಗ ವಾದ ತಪ್ಪಾಗುತ್ತದೆ. ವಾದದ ವಿಷಯವನ್ನು ಕಣ್ಣಿಟ್ಟು ನೋಡಿದ ವಿನಾ ಅದು ಯಾವ ಅರ್ಥದಲ್ಲಿ ಉಪಯೋಗವಾಗಿದೆ ಎಂದು ಹೇಳಲಾಗುವುದಿಲ್ಲ. ಆದ್ದರಿಂದಲೇ ಇದನ್ನು ವಾದ ವಸ್ತುವಿಗೆ ಸಂಬಂಧಪಟ್ಟ ದೋಷ ಎಂದು ಹೇಳುವುದು. ಒಂದು ಉದಾಹರಣೆಯನ್ನು ಕೊಟ್ಟು ಇದನ್ನು ಸ್ಪಷ್ಟಪಡಿಸಬಹುದು.

ತ್ರಿಕೋನದ ಎಲ್ಲ ಕೋನಗಳೂ ೧೮೦ ಡಿಗ್ರಿಗಳಿಗಿಂತ ಕಡಿಮೆ.
A, B ಮತ್ತು C ಗಳು ತ್ರಿಕೋನದ ಎಲ್ಲ ಕೋನಗಳು.

∴ A, B ಮತ್ತು C ಗಳು ೧೮೦ ಡಿಗ್ರಿಗಳಿಗಿಂತ ಕಡಿಮೆ

ಮೊದಲನೆಯ ವಾಕ್ಯದಲ್ಲಿ 'ಎಲ್ಲ' ಎಂಬುದು 'ಒಂದೊಂದು' ಎಂಬ ಅರ್ಥದಲ್ಲೂ, ಎರಡನೆಯ ವಾಕ್ಯದಲ್ಲಿ 'ಒಟ್ಟಿಗೆ' ಎಂಬ ಅರ್ಥದಲ್ಲಿ ಉಪಯೋಗವಾಗಿರುತ್ತದೆ. ತ್ರಿಕೋನಗಳ ವಿಷಯ ಸರಿಯಾಗಿ ತಿಳಿದ ವಿನಾ ನಾವು ಈ ಬೇರೆ ಬೇರೆ ಅರ್ಥಗಳನ್ನು ಗಮನಿಸುವುದಿಲ್ಲ.

**(೩) ಫ್ಯಾಲಸಿ ಆಫ್ ಡಿವಿಷನ್**—ಇದು ಫ್ಯಾಲಸಿ ಆಫ್ ಕಾಂಪೊಸಿಷನ್ನಿನ ವಿಪರ್ಯಯ ರೂಪ. ಒಟ್ಟಾಗಿ ಒಂದಕ್ಕೆ ಅನ್ವಯವಾಗುವುದನ್ನು, ಬೇರೆ ಬೇರೆಯಾದುದಕ್ಕೆ ಅನ್ವಯ ಮಾಡಿದಾಗ ಈ ದೋಷ ಹುಟ್ಟುತ್ತದೆ. ಇದಕ್ಕೆ ಈ ಉದಾಹರಣೆ ಕೊಡಬಹುದು :

ತ್ರಿಕೋನದ ಎಲ್ಲ ಕೋನಗಳೂ ೧೮೦ ಡಿಗ್ರಿಗಳುಳ್ಳದ್ದಾಗಿರುತ್ತವೆ.
A ಯು ತ್ರಿಕೋನದ ಕೋನ

∴ A ಯು ೧೮೦ ಡಿಗ್ರಿಗಳುಳ್ಳದ್ದಾಗಿರುತ್ತದೆ.

**(೪) ಫ್ಯಾಲಸಿ ಆಫ್ ಆ್ಯಕ್ಸಿಡೆಂಟ್**—ಒಂದು ವಸ್ತುವಿಗೆ ಅಗತ್ಯವಾದ ಗುಣಕ್ಕೂ ಕೇವಲ ಆಗಂತುಕವಾಗಿರುವ ಅದರ ಗುಣಕ್ಕೂ ಇರುವ ವ್ಯತ್ಯಾಸವನ್ನು ಅಲಕ್ಷಿಸಿ, ಸಾಮಾನ್ಯವಾಗಿ ಒಂದು ವಸ್ತುವಿನಲ್ಲಿ ಅಗತ್ಯವಾಗಿ ಇರುವುದನ್ನು ಒಂದು ವಿಶೇಷ ಸಂದರ್ಭದಲ್ಲೂ ಅದು ಪಡೆದಿದೆ ಎಂದು ವಾದಿಸುವುದೂ ಅಥವಾ ಒಂದು ವಸ್ತು ವಿಶೇಷಸಂದರ್ಭದಲ್ಲಿ ಪಡೆದಿರುವುದನ್ನು ಅದು ಸಾಮಾನ್ಯವಾಗಿ ಪಡೆದಿರುವಂತೆ ವಾದಿಸುವುದೂ ಫ್ಯಾಲಸಿ ಆಫ್ ಆ್ಯಕ್ಸಿಡೆಂಟಿನ ಎರಡು ರೂಪಗಳು. ಮೊದಲನೆಯದನ್ನು ಪ್ರಾಚೀನ ಪಾಶ್ಚಾತ್ಯ ತಾರ್ಕಿಕರು A dicto simpliciter ad dictum secundum quid ಎಂದು ವಿವರಿಸುತ್ತಿದ್ದರು. ಮೊದಲನೆಯದರ ವಿಪರ್ಯಯರೂಪವಾದ ಎರಡನೆಯದು A dicto secundum quid ad dictum simpliciter. ಸಾಮಾನ್ಯವಾಗಿ ಅನ್ವಯವಾಗಬಹುದಾದ್ದನ್ನು ವಿಶೇಷಸಂದರ್ಭದಲ್ಲೂ, ವಿಶೇಷ ಸಂದರ್ಭಗಳಲ್ಲಿ ಅನ್ವಯವಾಗಬಹುದಾದ್ದನ್ನು ಸಾಮಾನ್ಯ ಪರಿಸ್ಥಿತಿಗೂ ಅನ್ವಯಿಸುವುದು ಎಂದು ಈ ಲ್ಯಾಟಿನ್ ಸೂತ್ರಗಳ ಅರ್ಥ.

ಮನುಷ್ಯನು ವಿವೇಚನೆಯುಳ್ಳವನು, ಆದ್ದರಿಂದ ಕುಡುಕನೂ ವಿವೇಚನೆಯುಳ್ಳವನು ಎಂದು ವಾದಿಸುವುದು ಮೊದಲನೆಯದಕ್ಕೆ ದೃಷ್ಟಾಂತ. ಸಾರಾಯಿ ಔಷಧವಾಗಿ ಉಪಯೋಗಿಸಿದಾಗ ಒಳ್ಳೆಯದು. ಆದ್ದರಿಂದ ಒಬ್ಬನು ಆರೋಗ್ಯವಾಗಿರುವಾಗಲೂ ಅದನ್ನು ಕುಡಿಯುವುದು ಒಳ್ಳೆಯದು ಎಂದು ವಾದಿಸುವುದು ಎರಡನೆಯದಕ್ಕೆ ದೃಷ್ಟಾಂತ.

**(೫) ಇಕ್ಕೋಡಿನ ವಾದದ ದೋಷ**—ಆಧಾರವಾಕ್ಯಗಳಲ್ಲಿ ಮಾತುಗಳನ್ನು ಬೇರೆ ಬೇರೆ ಅರ್ಥದಲ್ಲಿ ಉಪಯೋಗಿಸುವುದರಿಂದ ಅಥವಾ ಮಾತು ಹೊರಳಿಸುವುದರಿಂದ ಇಕ್ಕೋಡಿನ ದೋಷ ಹುಟ್ಟುತ್ತದೆ. ಇದನ್ನು ಹಿಂದಿನ ಅಧ್ಯಾಯ ಒಂದರಲ್ಲಿ ಸವಿಸ್ತಾರವಾಗಿ ಚರ್ಚೆಮಾಡಿದೆ. ಆದ್ದರಿಂದ ಇಲ್ಲಿ ಈ ವಿಚಾರವನ್ನು ಕುರಿತು ಹೆಚ್ಚಾಗಿ ಹೇಳಬೇಕಾದ ಅವಶ್ಯಕತೆ ಇರುವುದಿಲ್ಲ.

**(ಆ) ಆಧಾರವಿಲ್ಲದ ಅಂಗೀಕರಣದ** ದೋಷಗಳು ಆರು.

(೧) ಚಕ್ರಕ ದೋಷ, ತೊಡಕಾದ ಪ್ರಶ್ನೆ (Complex question).

(೨) ವಾದಕ್ಕೆ ಪ್ರಕೃತವಲ್ಲದ್ದನ್ನು ನಿರ್ಣಯಿಸುವುದು (*Begging the question or peitio principii*).

(೩) ಅಪ್ರಕೃತವಾದ (*Ignoratio elenchi*).

(೪) ಆರ್ಗ್ಯುಮೆಂಟುಂ ಆ್ಯಡ್ ಮಿಸರಿಕಾರ್ಡಿಯಂ (*Argumentum ad misericordium*).

(೫) ಅಸಂಬದ್ಧ ನಿರ್ಣಯ (*Non sequitur or the fallacy of the consequence*).

(೬) ಅಸಾಧುಕಾರಣ (*False cause, non causa pro causa*).

**(೧) ಚಕ್ರಕ ದೋಷ**—ಸಾಧಿಸಬೇಕಾದ್ದನ್ನೇ ಅದಕ್ಕೆ ಪ್ರಮಾಣವಾಗಿ ಇಟ್ಟುಕೊಳ್ಳುವುದು. ಸಾಧಿಸಬೇಕಾದ್ದಕ್ಕೆ ಅದೇ ಅರ್ಥವಿರುವ ಬೇರೆ ಮಾತನ್ನು ಆಧಾರವಾಗಿ ಇಟ್ಟುಕೊಳ್ಳುವುದು. 'ಇದು ಕೆಟ್ಟ ನಡವಳಿಕೆ. ಏಕೆಂದರೆ ಇದು ಅಧರ್ಮ.' 'ಭಿಕ್ಷೆ ಕೊಡಬೇಕು ಏಕೆಂದರೆ ದಾನಮಾಡುವುದು ನಮ್ಮ ಕರ್ತವ್ಯ.' ಈ ವಾದಗಳು ಚಕ್ರಕಗಳು. ಕೆಟ್ಟ ನಡವಳಿಕೆ ಅಂದರೆ ಅಧರ್ಮವಾದದು, ಭಿಕ್ಷೆಕೊಡುವುದು ದಾನ. ಈ ವಾದಗಳಲ್ಲಿ ಯಾವ ವಿಶೇಷಣವನ್ನು ನಾವು ಸ್ಥಾಪಿಸಬೇಕೊ ಅದನ್ನೇ ಬೇರೆ ಮಾತಿನಲ್ಲಿ ಹೇಳಿ ಅದನ್ನು ಸಾಧಿಸಿದಂತೆ ಭಾವಿಸಲಾಗಿದೆ.

ಚಕ್ರಕದ ಇನ್ನೊಂದು ವಿಶೇಷ ರೂಪವುಂಟು. "ನಾನು ಈ ಕೆಲಸವನ್ನು ಮಾಡಕೂಡದು, ಏಕೆಂದರೆ ಅದು ತಪ್ಪು." "ಅದು ಏಕೆ ತಪ್ಪು ? ಅದು ತಪ್ಪು

ಎಂಬುದು ನಿನಗೆ ಹೇಗೆ ಗೊತ್ತು ?" ಎಂದು ಕೇಳಿದಾಗ "ಏಕೆಂದರೆ ಅದನ್ನು ಮಾಡಕೂಡದು ಎಂದು ನನಗೆ ಗೊತ್ತು" ಎಂದು ಉತ್ತರ ಕೊಡುವುದು ಈ ವಿಶೇಷರೀತಿಯ ಚಕ್ರಕ ದೋಷಕ್ಕೆ ಉದಾಹರಣೆ. ಅವನು ಕಳ್ಳ, ಏಕೆಂದರೆ ಅದನ್ನು ಬಚ್ಚಿಟ್ಟಿದ್ದಾನೆ. ಅವನು ಬಚ್ಚಿಟ್ಟಿದ್ದಾನೆ ಎಂಬುದು ನಿನಗೆ ಹೇಗೆ ತಿಳಿದಿದೆ ಎಂದು ಕೇಳಿದಾಗ ಅದಕ್ಕೆ ಉತ್ತರವಾಗಿ 'ಅವನು ಕಳ್ಳನಾದುದರಿಂದ' ಎಂದು ಹೇಳುವುದೂ ಇನ್ನೊಂದು ಉದಾಹರಣೆ. ಇದನ್ನು ಉದಾಹರಿಸಲು ಜೆಪ್ಸನ್ (*Alice in Wonderland*) ಪುಸ್ತಕದಿಂದ ಈ ಸ್ವಾರಸ್ಯವಾದ ಸಂಭಾಷಣೆಯನ್ನು ಉದ್ಧರಿಸಿದ್ದಾನೆ:* "ಈ ದಿಕ್ಕಿನಲ್ಲಿ ಹ್ಯಾಟರ್ ವಾಸಿಸುತ್ತದೆ, ಆ ದಿಕ್ಕಿನಲ್ಲಿ 'ಮಾರ್ಚ್ ಹೇರ್' ವಾಸಿಸುತ್ತದೆ. . . ಎರಡಕ್ಕೂ ಹುಚ್ಚು" ಎಂದು ಬೆಕ್ಕು ಹೇಳಿತು.

"ಆದರೆ ನನಗೆ ಹುಚ್ಚರ ಮಧ್ಯೆ ಇರಲು ಇಷ್ಟವಿಲ್ಲ" ಎಂದಳು ಆ್ಯಲೀಸ್.

"ಓ! ಅದು ಸಾಧ್ಯವಿಲ್ಲ. ಇಲ್ಲಿರುವ ನಾವೆಲ್ಲ ಹುಚ್ಚರು; ನನಗೆ ಹುಚ್ಚು, ನಿನಗೆ ಹುಚ್ಚು" ಎಂದಿತು ಬೆಕ್ಕು.

"ನನಗೆ ಹುಚ್ಚು ಹಿಡಿದಿದೆ ಎಂಬುದು ನಿನಗೆ ಹೇಗೆ ಗೊತ್ತು ?" ಎಂದು ಆ್ಯಲೀಸ್ ಕೇಳಿದಳು.

"ನಿನಗೆ ಹುಚ್ಚು ಹಿಡಿದೇ ಇರಬೇಕು, ಹಾಗಿಲ್ಲದಿದ್ದರೆ ನೀನು ಇಲ್ಲಿಗೆ ಬರುತ್ತಿರಲಿಲ್ಲ" ಎಂದಿತು ಬೆಕ್ಕು. ಅದು ರುಜುವಾತಾಯಿತೆಂದು ಆ್ಯಲೀಸ್ ಬಗೆಯಲಿಲ್ಲ.

ಸಾಮಾನ್ಯವಾಗಿ ಇಂಥ ವಾದಗಳ ಕೊನೆಯಲ್ಲಿ 'ಇದು ಸ್ಪಷ್ಟ,' ಇದು ನಿರ್ವಿವಾದವಾದದ್ದು 'ಇದನ್ನು ಪ್ರಾಜ್ಞರೆಲ್ಲ ಒಪ್ಪಿರುತ್ತಾರೆ.' ಎಂಬ ಮಾತುಗಳನ್ನು ಸೇರಿಸುವುದುಂಟು. ವಾದದಲ್ಲಿರುವ ದೋಷವನ್ನು ಮುಚ್ಚುವುದಕ್ಕೆ ಇದೊಂದು ಉಪಾಯ. ಕುಡಿತಕ್ಕೆ ಬಡತನ ಕಾರಣ, ಬಡತನಕ್ಕೆ ಕುಡಿತ ಕಾರಣವೆಂದೂ ಯುದ್ಧಕ್ಕೆ ಆಯುಧಗಳ ತಯಾರಿಕೆ ಕಾರಣ, ಆಯುಧಗಳ ತಯಾರಿಕೆಗೆ ಯುದ್ಧ ಕಾರಣವೆಂದೂ ವಾದಿಸುವುದನ್ನೂ ಚಕ್ರಕ ದೋಷ

---

* "In that direction," the cat said, "lives a Hatter: and in that direction lives a March Hare. ... They are both mad."

"But I don't want to go among mad people," Alice remarked.

"Oh, you can't help that," said the cat: "we're all mad here. I'm mad, you are mad."

"How do you know I'm mad ?" said Alice.

"You must be," said the cat, "or you wouldn't have come here." Alice didn't think that proved it at all.

ವೆಂದು ಹೇಳುವುದುಂಟು. ಆದರೆ ಈ ಉದಾಹರಣೆಗಳಲ್ಲಿ ಅಡಗಿರುವ ವಾದ ಚಕ್ರಕವಲ್ಲ.

**(೨) ತೊಡಕಾದ ಪ್ರಶ್ನೆ**—ಚಕ್ರಕಕ್ಕೆ ಪ್ರಶ್ನೆಯ ರೂಪವನ್ನು ಕೊಟ್ಟಾಗ ಅದು ತೊಡಕಾದ ಪ್ರಶ್ನೆಯ ದೋಷವಾಗುತ್ತದೆ. 'ಹೆಂಡತಿಯನ್ನು ಹೊಡೆಯು ವುದನ್ನು ಬಿಟ್ಟಿರುತ್ತೀಯಾ?' ಎಂಬ ಪ್ರಶ್ನೆ ತೊಡಕಾದ ಪ್ರಶ್ನೆಗೆ ಉದಾಹರಣೆ. ಈ ಪ್ರಶ್ನೆಯಲ್ಲಿ ಅವನು ಹೆಂಡತಿಯನ್ನು ಹೊಡೆಯುತ್ತಿದ್ದ ಎಂಬುದು ಪ್ರಮಾಣವಿಲ್ಲದೆಯೆ ಅಂಗೀಕೃತವಾಗಿದೆ. ಈ ಪ್ರಶ್ನೆಗೆ 'ಹೌದು' ಅಥವಾ 'ಇಲ್ಲ' ಎಂದು ಯಾವ ಉತ್ತರ ಕೊಟ್ಟರೂ ಉತ್ತರ ಕೊಟ್ಟವನು ತಾನು ಹೆಂಡತಿಯನ್ನು ಹೊಡೆಯುತ್ತಿದ್ದುದಾಗಿ ಒಪ್ಪಿಕೊಂಡಂತಾಗುತ್ತದೆ. ಈ ಪ್ರಶ್ನೆಗೆ ಹೀಗೆ ಉತ್ತರ ಕೊಡಬಹುದು: "ನನಗೆ ಹೆಂಡತಿಯನ್ನು ಹೊಡೆಯುವ ಅಭ್ಯಾಸವಿಲ್ಲ. ಆದ್ದರಿಂದ ಆ ಪದ್ಧತಿಯನ್ನು ಬಿಟ್ಟಿರುತ್ತೀಯಾ ಅಥವಾ ಇಟ್ಟುಕೊಂಡಿರುತ್ತೀಯಾ? ಎಂಬ ಪ್ರಶ್ನೆಗೆ ಅವಕಾಶವೇ ಇಲ್ಲ." ಆದರೆ ಹೀಗೆ ಉತ್ತರ ಕೊಡಲು ಸಾವಧಾನವಾಗಿ ಆಲೋಚಿಸಲು ಅವಕಾಶವಿರ ಬೇಕು. ಉತ್ತರ ಕೊಡುವವನಿಗೆ 'ದಾರ್ಷ್ಟೀಕ'ವಿರಬೇಕು. ಆದರೆ ಇಂಥಾ ಪ್ರಶ್ನೆಯನ್ನು ಕೇಳಿದಾಗ ಪ್ರಶ್ನಿಸಲ್ಪಟ್ಟವನು ಕಕ್ಕಾಬಿಕ್ಕಿಯಾಗುತ್ತಾನೆ ಅಥವಾ ಕೋಪಿಸಿಕೊಳ್ಳುತ್ತಾನೆ. ನೀನು ಕುಡಿಯುವುದನ್ನು ಬಿಟ್ಟಿದ್ದೀಯಾ? ಸುಳ್ಳು ಹೇಳುವುದನ್ನು ಬಿಟ್ಟಿದ್ದೀಯಾ? ಎಂದು ಯಾರನ್ನಾದರೂ ಕೇಳಿದಾಗ ಅವರಿಗೆ ಕೋಪ ಬರುವುದು ಸ್ವಾಭಾವಿಕ; ಕೆಲವರಿಗಂತೂ ನಡುಕ ಹುಟ್ಟು ತ್ತದೆ. ಹೀಗೆ ಭಾವೋದ್ರೇಕಗೊಳಿಸುವ ಪ್ರಶ್ನೆಗೆ ಸಾವಧಾನದಿಂದ ಉತ್ತರ ಕೊಡುವುದು ಅಸಂಭವ. ಹಾಗೆ ಉತ್ತರ ಕೊಡಬೇಕಾದವನು ವಾದದಲ್ಲಿ ಪಳಗಿದವನಾಗಿರಬೇಕು. ಇದರಲ್ಲಿ ಒಂದೇ ಪ್ರಶ್ನೆ ಇದ್ದ ಪಕ್ಷದಲ್ಲಿ ಅದಕ್ಕೆ ನೇರವಾಗಿ 'ಹೌದು' ಅಥವಾ 'ಇಲ್ಲ' ಎಂದು ಉತ್ತರ ಕೊಡಬಹುದು. ಆದರೆ ಇದರಲ್ಲಿ ಎರಡು ಪ್ರಶ್ನೆಗಳು ಸೇರಿವೆ: ನೀನು ಹೆಂಡತಿಯನ್ನು ಹೊಡೆಯುತ್ತಿದ್ದುದು ಉಂಟೆ? ಎಂಬುದು ಒಂದು; ಈಗ ಅದನ್ನು ಬಿಟ್ಟಿರು ತ್ತೀಯಾ? ಎಂಬುದು ಎರಡನೆಯದು. ಮೊದಲನೆಯದಕ್ಕೆ 'ಉಂಟು' ಎಂದು ಉತ್ತರ ಬಂದ ವಿನಾ ಎರಡನೆಯ ಪ್ರಶ್ನೆಗೆ ಅವಕಾಶವೇ ಇಲ್ಲ. ಇಷ್ಟೆಲ್ಲ ಯೋಚಿಸಿಕೊಂಡು ಉತ್ತರ ಹೇಳುವುದು ಸಾಮಾನ್ಯವಲ್ಲ.

ಎರಡನೆಯ ಚಾರಲ್ಸ್ ದೊರೆ ರಾಯಲ್ ಸೊಸೈಟಿಯ ವಿದ್ವಾಂಸರಿಗೆ ಹಾಕಿದ ಪ್ರಶ್ನೆ ತೊಡಕಾದ ಪ್ರಶ್ನೆಗೆ ಒಂದು ಸ್ವಾರಸ್ಯವಾದ ಉದಾಹರಣೆ. "ಒಂದು ನೀರಿನ ಪಾತ್ರೆಯಲ್ಲಿ ಸತ್ತ ಮೀನನ್ನು ಹಾಕಿದಾಗ ಅದರ ಭಾರ ಹೆಚ್ಚುತ್ತದೆ.

ಆದರೆ ಬದುಕಿರುವ ಮೀನನ್ನು ಹಾಕಿದಾಗ ಆ ಪಾತ್ರೆಯ ಭಾರ ಏಕೆ ಹೆಚ್ಚು ವುದಿಲ್ಲ? ರಾಯಲ್ ಸೊಸೈಟಿಯ ವಿದ್ವಾಂಸರು ಆ ಪ್ರಶ್ನೆಗೆ ಸಮರ್ಪಕವಾದ ಉತ್ತರ ಕೊಡಲಾಗಲಿಲ್ಲ. ಏಕೆಂದರೆ ಆ ಪ್ರಶ್ನೆ ಯಾವುದನ್ನು ವಾಸ್ತವವೆಂದು ಅಂಗೀಕರಿಸಿತ್ತೋ ಅದು ವಾಸ್ತವ ವಿಷಯವಾಗಿರಲಿಲ್ಲ.

**(೩) ಅಪ್ರಕೃತವಾದ ವಾದ**–ವಾದಕ್ಕೆ ಪ್ರಕೃತವಾದ ವಿಷಯ ಯಾವುದು ಎಂಬುದನ್ನು ತಿಳಿಯದೆಯೆ ವಾದಮಾಡುವುದು ಅಪ್ರಕೃತವಾದ. ವ್ಹಾಟ್ಲೆ ಎಂಬ ಹಿಂದಿನ ಕಾಲದ ತಾರ್ಕಿಕನು ಹೇಳುವಂತೆ "ಇದು ಪ್ರಶ್ನೆಗಳಿಲ್ಲದೆಯೇ ಉತ್ತರಗಳನ್ನು ಕಲಿತುಕೊಂಡಂತೆ". ಬಗೆಹರಿಸಬೇಕಾದ ಸಮಸ್ಯೆ ಯಾವುದು ಎಂಬುದನ್ನು ತಿಳಿಯದೆಯೆ ಉತ್ತರಗಳನ್ನು ಸಿದ್ಧಪಡಿಸಿದರೆ, ಆ ಉತ್ತರಗಳಿಂದ ಏನು ಪ್ರಯೋಜನ? ಚರ್ಚಾಕೂಟಗಳಲ್ಲಿ ವಿಷಯವನ್ನು ಬಿಟ್ಟು ಮಾತನಾಡುವುದು ತೀರ ಸಾಮಾನ್ಯ. ಆಗ ಅಧ್ಯಕ್ಷರು 'ವಿಷಯವನ್ನು ಬಿಟ್ಟು ಹೋಗಬೇಡಿ, ವಿಷಯಕ್ಕೆ ಬನ್ನಿ' ಎಂದು ಎಚ್ಚರಿಕೆ ಕೊಡುವುದನ್ನು ನಾವು ನೋಡಿಲ್ಲವೆ? ವಿಷಯವನ್ನು ಬಿಟ್ಟು ಮಾತನಾಡುವುದು ಅನೇಕ ರೂಪ ಗಳನ್ನು ಪಡೆಯಬಹುದು. (i) ಆರ್ಗುಮೆಂಟಂ ಆ್ಯಡ್ ಹಾಮಿನಂ (*Argumentum ad hominem*)–ಎಂಬುದು ಒಂದು. ಪಾನನಿರೋಧದ ಗೊತ್ತುವಳಿಯ ವಿಚಾರ ನ್ಯಾಯವಿಧಾಯಕ ಸಭೆಯಲ್ಲಿ ಚರ್ಚೆಯಾಗುತ್ತಿದ್ದಾಗ, ಅದನ್ನು ಪ್ರತಿಭಟಿಸಲು ಆ ಗೊತ್ತುವಳಿಯ ಪರ ಮಾತನಾಡುತ್ತಿರುವವನು ಅಯೋಗ್ಯ, ಕುಡುಕ ಎಂದು ವಾದಿಸುವುದು ಆರ್ಗ್ಯುಮೆಂಟಂ ಆ್ಯಡ್ ಹಾಮಿನಂ ವಾದಕ್ಕೆ ಉದಾಹರಣೆ. ಹಾಗೆಯೇ ಒಬ್ಬನ ನಡತೆ ಒಳ್ಳೆಯದು, ಅವನು ಸಮಾಜದಲ್ಲಿ ಗಣ್ಯನಾಗಿದ್ದಾನೆ ಎಂದು ವಾದಿಸಿ ಆದ್ದರಿಂದ ಅವನ ಅಭಿಪ್ರಾಯಗಳು ಸರಿ, ಎಂದು ವಾದಿಸುವುದೂ ಅಪ್ರಕೃತವಾದವೇ. ಒಬ್ಬ ವರ್ತಕನು ವರಮಾನದ ತೆರಿಗೆಯ ನಿಯಮವನ್ನೋ, ಮಾರಾಟದ ತೆರಿಗೆಯ ನಿಯಮವನ್ನೋ ಮುರಿ ದಿರುವನೆಂದು ಅವನ ಮೇಲೆ ಮೊಕದ್ದಮೆ ಹೂಡಿದಾಗ, ಆ ವರ್ತಕನ ಲಾಯರು ಅವನು ಈ ನಿಯಮಗಳನ್ನು ಮುರಿದಿಲ್ಲ ಎಂದು ವಾದಮಾಡದೆ, 'ಇವರು ತುಂಬ ದಾನ ಧರ್ಮ ಮಾಡಿದ್ದಾರೆ, ಇವರಿಗೆ ಧರ್ಮಪ್ರಕಾಶ ಎಂಬ ಬಿರುದು ಬಂದಿದೆ,' ಎಂದು ವಾದಿಸುವುದುಂಟು. ಚಾರಲ್ಸ್ ದೊರೆಯ ಆಡಳಿತ ಸರಿಯಾಗಿಲ್ಲ ಎಂದು ಜನ ಅವನನ್ನು ವಿಚಾರಣೆಗೆ ಗುರಿಮಾಡಿದಾಗ, ಅವನ ಪರವಾಗಿ ವಾದಿಸಿದವರು ಅವನ ಆಡಳಿತ ಸರಿಯಾದುದು ಎಂದು ವಾದಿಸ ಲಿಲ್ಲ. ಅವನು ಏಕಪತ್ನೀವ್ರತಸ್ಥ, ಮಕ್ಕಳ ಮೇಲೆ ತುಂಬ ಪ್ರೇಮವುಳ್ಳ ತಂದೆ, ದೇವರಲ್ಲಿ ತುಂಬ ಭಕ್ತಿಯುಳ್ಳವನು ಎಂದು ವಾದಿಸಿದರು. ಈ

ವಾದವನ್ನು ಕುರಿತು ಮಕಾಲೆ ಹೀಗೆ ಬರೆದಿರುತ್ತಾನೆ: "Ample apologies indeed for fifteen years of persecution, tyranny and falsehood." "ಹದಿನೈದು ವರ್ಷಗಳಕಾಲ ಒಂದೇಸಮನಾಗಿ ಕಿರುಕುಳಕೊಟ್ಟದ್ದಕ್ಕೆ, ದಬ್ಬಾಳಿಕೆ ನಡಿಸಿದ್ದಕ್ಕೆ ಸುಳ್ಳು ಹೇಳಿದ್ದಕ್ಕೆ, ಸಾಲದೆ ಈ ನೆಪಗಳು".

(ii) **ಆರ್ಗ್ಯುಮೆಂಟಂ ಆ್ಯಡ್ ವಿರಕಂಡಿಯಂ** (*Argumentum ad Veracundium*)—ಇನ್ನೊಂದು ವಿಧವಾದ ಅಪ್ರಕೃತವಾದ. ಜನರು ಒಬ್ಬನಲ್ಲಿಟ್ಟಿರುವ ಗೌರವವನ್ನು ಉಪಯೋಗಿಸಿಕೊಂಡು ಅವನ ಅಭಿಪ್ರಾಯ ಸರಿಯೆಂದು ಸಮರ್ಥಿಸಲು ಕೆಲವರು ಪ್ರಯತ್ನಿಸುತ್ತಾರೆ. 'ಈ ಅಭಿಪ್ರಾಯ ಸರಿ. ಏಕೆಂದರೆ ಮಹಾತ್ಮ ಗಾಂಧಿಯವರು ಹಾಗೆ ಹೇಳಿರುತ್ತಾರೆ' ಎಂದು ವಾದಿಸುವುದು ಅಪಕೃತವಾದ. ಮಹಾತ್ಮ ಗಾಂಧಿಯವರು ಅನೇಕ ವಿಚಾರಗಳಲ್ಲಿ ತಮ್ಮ ಅಭಿಪ್ರಾಯ ಕೊಟ್ಟಿರುತ್ತಾರೆ. ಅಹಿಂಸಾ ವಿಚಾರವಾಗಿಯೂ ವಾದಿಸಿರುತ್ತಾರೆ, ಹಾಲಿನ ಉಪಯೋಗದ ವಿಚಾರವಾಗಿಯೂ ವಾದಿಸಿರುತ್ತಾರೆ. ಕಾಹಿಲೆಗಳ ಚಿಕಿತ್ಸೆಯ ವಿಚಾರವಾಗಿಯೂ ವಾದಿಸಿರುತ್ತಾರೆ. ಅವರು ಅಹಿಂಸೆಯ ವಿಷಯವಾಗಿ ಬೋಧಿಸಿರುವುದು ಲೋಕಪ್ರಸಿದ್ಧವಾಗಿದೆ. ಅದನ್ನು ಆಚರಿಸಿದುದಕ್ಕಾಗಿ ಜನರು ಅವರನ್ನು ಗೌರವಿಸುತ್ತಾರೆ. ಕಾಹಿಲೆಗಳ ಚಿಕಿತ್ಸೆಯನ್ನು ಕುರಿತ ಅವರ ಅಭಿಪ್ರಾಯಗಳನ್ನು ಬಹುಶಃ ಅನೇಕರು ಗಮನಿಸಿಲ್ಲ; ಹೆಚ್ಚು ಜನ ಅವುಗಳನ್ನು ಒಪ್ಪಲಾರರು. ಯಾವ ವಿಚಾರದಲ್ಲಿ ಅವರ ವಾದ ಸಾಧುವಾದುದೋ, ಯಾವ ವಿಷಯವನ್ನು ಕುರಿತು ಅವರ ಅಭಿಪ್ರಾಯಗಳು ಮನ್ನಣೆ ಪಡೆದಿವೆಯೋ ಅವುಗಳನ್ನು ಪ್ರಸ್ತಾಪಮಾಡುವಾಗ ಬಹುಶಃ ಅವರ ಮಾತನ್ನು ಆಪ್ತವಚನವಾಗಿ ಪ್ರಮಾಣವಾಗಿ ಅಂಗೀಕರಿಸಬಹುದು. ಏಕೆಂದರೆ ಆ ವಿಚಾರವಾಗಿ ಅವರ ವಾದ ಸರಿಯಾಗಿರುತ್ತದೆ. ನಾವು ಮಹಾತ್ಮ ಗಾಂಧಿಯವರ ವಾದವನ್ನು ಒಪ್ಪುವುದು ಬರಿಯ ಅವರ ಹೆಸರಿನ ಆಧಾರದ ಮೇಲಲ್ಲ; ಅವರು ಹೇಳಿರುವುದು ಸಕಾರಣವಾಗಿರುವುದರಿಂದ. ಆದರೆ ಸಾಮಾನ್ಯವಾಗಿ ಅಪ್ರಕೃತವಾಗಿ ವಾದಮಾಡುವವರು ಇತರ ವಿಚಾರಗಳಲ್ಲೂ ಅವರ ಮಾತನ್ನು ಪ್ರಮಾಣವಾಗಿ ಕುರಿಯುತ್ತಾರೆ. ಮಹಾಯೋಧನ ಅಭಿಪ್ರಾಯವನ್ನು ತತ್ತ್ವವಿಚಾರಗಳಲ್ಲಿ ಪ್ರಮಾಣವಾಗಿಯೂ, ದೊಡ್ಡ ಸಂಗೀತಗಾರನ ಅಭಿಪ್ರಾಯವನ್ನು ಸಸ್ಯಶಾಸ್ತ್ರ ವಿಚಾರಗಳಲ್ಲಿ ಪ್ರಮಾಣವಾಗಿಯೂ ಕುರಿಯುದುಂಟು. ಹಾಗೆಯೇ ವೇದವನ್ನು ಆಧ್ಯಾತ್ಮಿಕ ವಿಷಯಗಳಲ್ಲಿ ಪ್ರಮಾಣವಾಗಿ ಪಡೆಯದೆ ಎಲ್ಲಕ್ಕೂ ಅದನ್ನು ಪ್ರಮಾಣವಾಗಿ ಉಪಯೋಗಿಸಿದಾಗಲೂ ವಾದ ಇದೇ ರೀತಿಯಾಗಿರುತ್ತದೆ. ವೇದ ಎಷ್ಟೇ

ನಂಬಲರ್ಹವಾದುದಾಗಲೀ ಅದು ಕಪ್ಪಾದದ್ದನ್ನು ಬಿಳಿಪಾಗಿ ಮಾಡಲಾರದು. ಕಪ್ಪು ಬಿಳುಪೆಂದು ಅದು ಹೇಳಿದರೆ, ಅದು ನಂಬಲು ಅರ್ಹವಲ್ಲ.

ಶಾಸ್ತ್ರವಿಚಾರವಾದ ವಾದಗಳಲ್ಲಿ ಪಾಶ್ಚಾತ್ಯ ದೇಶಗಳಲ್ಲಿ ಹಿಂದೆ ಒಂದು ಕಾಲದಲ್ಲಿ ಏನೊಂದು ಪ್ರಸಂಗ ಒದಗಲಿ ಅರಿಸ್ಟಾಟಲ್ ಹೀಗೆ ಹೇಳುತ್ತಾನೆ ಎಂದು ಅರಿಸ್ಟಾಟಲಿನ ಹೇಳಿಕೆಯನ್ನು ಪ್ರಮಾಣವಾಗಿ ಕುರಿಯುತ್ತಿದ್ದರು. ಇಂದಿನ ಕಾಲದ ಪಾಶ್ಚಾತ್ಯರೂ ಕೂಡ ಹಿಂದಿನವರ ದಾರಿಯನ್ನೇ ಅನುಸರಿಸುತ್ತಿದ್ದಾರೆ. ಪ್ರಪಂಚದ ಅರ್ಧ ಜನ ಸತ್ಯಾಸತ್ಯಗಳನ್ನು ಕಾರಲ್ ಮಾರ್ಕ್ಸ್‌ನ ಹೇಳಿಕೆಯ ಆಧಾರದ ಮೇಲೆ ನಿರ್ಧರಿಸುತ್ತಾರೆ. ಇನ್ನರ್ಧ ಜನಕ್ಕೆ ಅವನ ಹೆಸರೆತ್ತಿದರೆ ಆಗದು; ಅವನು ಹೇಳಿದುದೆಲ್ಲ ಅಸತ್ಯ, ಅಸಹ್ಯಕರವಾದದ್ದು. ಅವನ ಅನುಯಾಯಿಗಳ ಮೇಲೆ ಯುದ್ಧ ಹೂಡಲೂ ಸಿದ್ಧ. ಪ್ರಪಂಚದ ಅನೇಕ ಯುದ್ಧಗಳು ಹೀಗೆ ಅಸಂಬದ್ಧ ವಾದಗಳಿಂದ ಹುಟ್ಟುತ್ತವೆ.

(iii) **ಆರ್ಗ್ಯುಮೆಂಟಂ ಆ್ಯಡ್ ಪಾಪ್ಯುಲಂ** (*Argumentum ad populum*)—ಮೂರನೆಯ ವಿಧವಾದ ಅಪ್ರಕೃತವಾದ. ಈ ವಾದ ಜನರಲ್ಲಿರುವ ಮೂಢನಂಬಿಕೆಗಳನ್ನೂ ಪೂರ್ವವಿಶ್ವಾಸಗಳನ್ನೂ ಕೆರಳಿಸಿ ತಮ್ಮ ಕಡೆಗೆ ಜನರ ಮನಸ್ಸನ್ನು ಒಲಿಸಿಕೊಳ್ಳುತ್ತದೆ. 'ಇದು ಅಸಾಧು, ಏಕೆಂದರೆ ಹಿಂದೂ ಆದವನು ಯಾವನೂ ಹೀಗೆ ಹೇಳುವುದಿಲ್ಲ' 'ಇದು ಹೇಯ; ಆರ್ಯ ಸಂಪ್ರದಾಯವಲ್ಲ.' 'ಇದು ಗೋಮಾಂಸ ಭಕ್ಷಕರ ಅಭಿಪ್ರಾಯ.' 'ಇದು ಹೂಣಸಂಪ್ರದಾಯ.' ಇಂಥ ಮಾತುಗಳನ್ನಾಡಿ ಜನರ ಮನಸ್ಸನ್ನು ಕೆಡಿಸುವದನ್ನು ನಾವು ಪ್ರತಿನಿತ್ಯವೂ ನೋಡುತ್ತಿದ್ದೇವೆ. ಈ ವಿಧವಾದ ವಾದ ಕುತರ್ಕಿಗಳ ಕಾಮಧೇನು.

(iv) **ಆರ್ಗ್ಯುಮೆಂಟಮ್ ಆ್ಯಡ್ ಮಿಸರಿಕಾರ್ಡಿಯಂ** (*Argumentum ad misaricordium*)—ತೀರ್ಪು ಕೊಡುವವರ ಮುಂದೆ ಅವರಲ್ಲಿ ಕನಿಕರ ಹುಟ್ಟುವಂತೆ ಮೊರೆ ಇಡುವುದು ಈ ವಾದದ ಜೀವಾಳ. ರುಜುವಾತು ಕೊಟ್ಟು ಪಟ್ಟುಹಿಡಿದು ವಾದಮಾಡಿ ತಮ್ಮ ಕಕ್ಷಿಯನ್ನು ಗೆಲ್ಲಲಾಗದ ಸಂದರ್ಭಗಳಲ್ಲಿ ಲಾಯರುಗಳು ಈ ತಂತ್ರವನ್ನು ಹೂಡುವುದುಂಟು. ಪುರಾತನ ಗ್ರೀಸಿನಲ್ಲಿ ಲಾಯರುಗಳು ಗೋಳಾಡುವ ತಮ್ಮ ಕಕ್ಷಿಗಾರನ ಹೆಂಡತಿ ಮಕ್ಕಳನ್ನು ನ್ಯಾಯಾಧೀಶನ ಮುಂದೆ ನಿಲ್ಲಿಸಿ ನ್ಯಾಯಾಧೀಶನಲ್ಲಿ ಕನಿಕರ ಹುಟ್ಟಿಸಿ, ತಮ್ಮ ಕಕ್ಷಿಗಾರನನ್ನು ಕಠಿಣಶಿಕ್ಷೆಯಿಂದ ಪಾರುಮಾಡುತ್ತಿದ್ದರಂತೆ. ಭಾರತದಲ್ಲೂ ಅಂಥ ಲಾಯರುಗಳಿಲ್ಲದೆ ಇಲ್ಲ. ಹಿಂದಿನ ಕಾಲದ ಮೈಸೂರಿನ ಲಾಯರೊಬ್ಬರು

ಕೇಸು ಯಾವುದೇ ಆಗಲಿ ಕೋರ್ಟಿನಲ್ಲಿ ವಾದಮಾಡುವಾಗ ಅದರ ಮುಖ್ಯಾಂಶ ಹೀಗಿರುತ್ತಿತ್ತಂತೆ. "ನಾನು ನಮ್ಮ ಮನೆಯಲ್ಲಿ ನಿತ್ಯವೂ ಇಪ್ಪತ್ತು ವಾರದ ಹುಡುಗರಿಗೆ ಅನ್ನ ಹಾಕುತ್ತೇನೆ. ಅನ್ನ ದಾನಂ ಮಹಾದಾನಂ, ಬಡ ವಿದ್ಯಾರ್ಥಿಗಳಿಗೆ ಅನ್ನ ಹಾಕುವುದರ ಮೂಲಕ ಪರೋಕ್ಷವಾಗಿ ವಿದ್ಯಾದಾನಮಾಡಿದಂತಾಯಿತು. ಈ ದಾನಗಳನ್ನೆಲ್ಲ ಮಾಡುವುದಕ್ಕೆ ಧನ ಬೇಕು. ತೈಲವಿಲ್ಲದೆ ಎಣ್ಣೆ ಇಲ್ಲ. ಧನವಿಲ್ಲದೆ ದಾನವಿಲ್ಲ. ಏನೋ ಈ ವಕೀಲಿ ವೃತ್ತಿಯಿಂದ ನಾಲ್ಕು ಕಾಸು ಬಂದರೆ, ಆ ಬಡಹುಡುಗರ ಹಸಿವನ್ನಿಂಗಿಸಬಹುದು. ಕೇಸು ಗೆದ್ದರಲ್ಲವೆ ಕಾಸು. ಯುವರ್ ಆನರ್, ತಾವೇ ಯೋಚನೆ ಮಾಡಿ. ಈ ಕೇಸು ನನ್ನ ಪರ ತೀರ್ಮಾನವಾಗದಿದ್ದರೆ ಏನು ಗತಿ. ಯುವರ್ ಆನರ್, ತಾವು ಮಕ್ಕಳೊಂದಿಗರು. ತಮ್ಮ ಮಗು ನಾಗರಾಜು ಊಟವಿಲ್ಲದೆ ಸ್ಕೂಲಿಗೆ ಹೋದರೆ ತಮ್ಮ ಹೊಟ್ಟೆ ಚುರ್ ಅನ್ನುವುದಿಲ್ಲವೆ?" ವಿಷಯಕ್ಕೆ ಸಂಬಂಧಪಡದ ಈ ವಾದದಿಂದ ತಕ್ಕಮಟ್ಟಿಗೆ ಹಣವೂ ಆರ್ಜನೆಯಾಯಿತಂತೆ!

(v) **ಆರ್ಗ್ಯುಮೆಂಟಂ ಆ್ಯಡ್ ಇಗ್ನೊರಾಸಿಯಂ** (*Argumentum ad ignoratium*)—ಪ್ರತಿಪಕ್ಷ ಸ್ಥಾಪನೆಯಾಗಲಿಲ್ಲವೆಂದು ತೋರಿಸಿ ತನ್ನ ಪಕ್ಷ ಸ್ಥಾಪನೆಯಾದಂತೆ ವಾದಿಸುವುದು ಈ ವಾದದ ರೀತಿ. ಪರಪಕ್ಷ ಸಿದ್ಧಿಸದ ಮಾತ್ರಕ್ಕೆ ಸ್ವಪಕ್ಷ ಸಿದ್ಧಿಸಿದಂತಾಗುವುದಿಲ್ಲ. ಇನ್ನೊಬ್ಬನು ಅಜ್ಞನಾಗಿರಬಹುದು. ಅವನು ಅಜ್ಞನೆಂದು ತೋರಿಸಬಹುದು. ಆದ ಮಾತ್ರಕ್ಕೆ ತಾನು ಪ್ರಾಜ್ಞನೆಂದು ಸಮರ್ಥಿಸಿದಂತಾಗುವುದಿಲ್ಲ. ಆತ್ಮವನ್ನು ನಿರಾಕರಿಸಲು ಮಂಡಿಸಿದ ವಾದ ಅಸಾಧು ಎಂದು ತೋರಿಸಿದ ಮಾತ್ರಕ್ಕೆ 'ಆತ್ಮ ಇದೆ' ಎಂದು ಸ್ಥಿರೀಕರಿಸಿದಂತಾಯಿತೆ? "ಅಪ್ಸರೆಯರು ಇದ್ದೇ ಇರಬೇಕು, ಏಕೆಂದರೆ ಅಪ್ಸರೆಯರು ಇಲ್ಲವೆಂದು ಯಾರೂ ಸ್ಥಾಪಿಸಿಲ್ಲ." ಈ ವಾದಕ್ಕೆ ಇನ್ನೊಂದು ಉದಾಹರಣೆ.

(vi) **ಆರ್ಗ್ಯುಮೆಂಟಂ ಆ್ಯಡ್ ಬಕುಲಂ** (*Argumentum ad baculam*)—ಇದು ವಾದವೇ ಅಲ್ಲ; ಬೆದರಿಕೆ ಅಥವಾ ಬಲಪ್ರಯೋಗ. ಈ ವಾದವನ್ನು ಒಪ್ಪಿಕೊ ಇಲ್ಲವೇ ಪ್ರಾಣ ಒಪ್ಪಿಸು. ಇದೇ ಈ ವಾದದ ಸಾರಾಂಶ. ಯುದ್ಧದ ಮೂಲಕ ಸತ್ಯಾಸತ್ಯಗಳನ್ನು ನಿರ್ಧರಿಸಬಹುದೆಂಬುವರ ವಾದವೆಲ್ಲ ಹೀಗೆಯೇ.

**(೪) ಅಸಂಬದ್ಧ ನಿರ್ಣಯ** (*Non sequitur*)—ಆಧಾರವಾಕ್ಯಗಳಿಂದ ನಿರ್ಣಯವು ಹೊರಬೀಳದಿದ್ದಾಗ, ನಿರ್ಣಯಕ್ಕೂ ಆಧಾರವಾಕ್ಯಗಳಿಗೂ

ಸಂಬಂಧವೇ ಇಲ್ಲದಾಗ ಆ ನಿರ್ಣಯಕ್ಕೆ ಅಸಂಬದ್ಧ ನಿರ್ಣಯ ಎಂದು ಹೆಸರು. ಈ ಕೆಳಗೆ ಕೊಟ್ಟಿರುವ ವಾದ ತೀರ ಅಸಂಬದ್ಧ ನಿರ್ಣಯಕ್ಕೆ ಉದಾಹರಣೆ.

ಶ್ರೀರಂಗಪಟ್ಟಣ ಮೈಸೂರು ಜಿಲ್ಲೆಯಲ್ಲಿದೆ
ಶ್ರೀರಂಗಪಟ್ಟಣದ ಸುತ್ತ ಕಾವೇರಿ ನದಿ ಇದೆ
∴ ಶ್ರೀರಂಗಪಟ್ಟಣದ ಯುದ್ಧ ಮೈಸೂರು ಜಿಲ್ಲೆಯಲ್ಲಿ ನಡೆಯಿತು.

ನಿರ್ಣಯವು ಅಸಂಬದ್ಧ ಎಂಬುದು ತೀರ ಸ್ಪಷ್ಟ. ಇದು ಯಾರನ್ನೂ ವಂಚಿಸುವುದಿಲ್ಲ. ಆದರೆ ನಿರ್ಣಯಪದಗಳಿಗೂ ಆಧಾರವಾಕ್ಯಗಳಿಗೂ ಸುಮಾರಾಗಿ ಹೋಲಿಕೆ ಇರುವ ವಾದಗಳಲ್ಲಿ ನಿರ್ಣಯವು ಅಸಂಬದ್ಧವೆಂದು ಅಷ್ಟು ಸುಲಭವಾಗಿ ತಿಳಿಯುವುದಿಲ್ಲ. 'ಆದ್ದರಿಂದ' ಎಂಬ ಪದ ನಮ್ಮನ್ನು ಮೋಸಗೊಳಿಸಬಹುದು. ಈ ವಾದವನ್ನು ನೋಡಿ.

ಎಲ್ಲರೂ ಸುಖವನ್ನು ಬಯಸುತ್ತಾರೆ,
ಶೀಲವಂತರು ಸುಖಿಗಳು
ಆದ್ದರಿಂದ ಎಲ್ಲರೂ ಶೀಲವಂತರಾಗಿರಲು ಬಯಸುತ್ತಾರೆ.

ಇಲ್ಲಿ ನಿರ್ಣಯವು ಆಧಾರವಾಕ್ಯಗಳಿಗೆ ಸಂಬಂಧಿಸಿದಂತೆ ತೋರುತ್ತದೆ. ಆದ್ದರಿಂದ ನಿರ್ಣಯವನ್ನು ಸರಿಯೆಂದು ಒಪ್ಪಿಕೊಳ್ಳುವ ಸಂಭವವಿದೆ.

ಅರಿಸ್ಟಾಟಲ್ ಈ ದೋಷವನ್ನು ಸೋಪಾಧಿಕನ್ಯಾಯದ ದೋಷವಾಗಿ ಪರಿಗಣಿಸಿರುತ್ತಾನೆ. ಉತ್ತರಪದವನ್ನೂ ಪೂರ್ವಪದವನ್ನೂ ಅದಲುಬದಲು ಮಾಡಿದಾಗ ಈ ದೋಷ ಹುಟ್ಟುತ್ತದೆ. ಅಂಥಾ ವಾದಕ್ಕೆ ಇದು ಉದಾಹರಣೆ : ಆಕಾಶ ಮಂಜಿನಿಂದ ಕವಿದಿದ್ದರೆ ವಿಮಾನವು ತಡವಾಗಿ ಬರುತ್ತದೆ ; ವಿಮಾನವು ತಡವಾಗಿ ಬಂದಿದೆ, ಆದ್ದರಿಂದ ಆಕಾಶ ಮಂಜಿನಿಂದ ಕವಿದಿದೆ ; ಅಥವಾ ಆಕಾಶ ಮಂಜಿನಿಂದ ಕವಿದಿಲ್ಲ, ಆದ್ದರಿಂದ ವಿಮಾನವು ತಡವಾಗಿ ಬಂದಿಲ್ಲ.

(vii) **ಅಸಾಧುಕಾರಣ** (*False cause* ಅಥವಾ *Non causa pro causa*)– ಒಂದು ಪರಿಣಾಮಕ್ಕೆ ಕಾರಣವಲ್ಲದ್ದನ್ನು ಅದಕ್ಕೆ ಕಾರಣವಾಗಿ ತಿಳಿದಾಗ, ಅಂದರೆ ಅಕಾರಣವನ್ನು ಕಾರಣವಾಗಿ ತಿಳಿದಾಗ ಅಸಾಧುಕಾರಣ ದೋಷ ಹುಟ್ಟುತ್ತದೆ. ಅನಾನುಕೂಲ ಪರಿಸ್ಥಿತಿಯಲ್ಲಿ ಹೃಷ್ಟಪುಷ್ಟವಾಗಿ ಬೆಳೆದವನನ್ನು ತೋರಿಸಿ, ಅವನು ಹೃಷ್ಟಪುಷ್ಟವಾಗಿ ಬೆಳೆದಿರುವುದಕ್ಕೆ ಅನಾನುಕೂಲ ಪರಿಸ್ಥಿತಿ ಕಾರಣವೆಂದು ವಾದಿಸುವುದು ಈ ದೋಷಕ್ಕೆ ಉದಾಹರಣೆ. ಅವನು ಹೃಷ್ಟಪುಷ್ಟವಾಗಿ ಬೆಳೆದಿರುವುದಕ್ಕೆ ಅವನು ಅನಾನುಕೂಲ ಪರಿಸ್ಥಿತಿಯನ್ನು ಗೆಲ್ಲಬಲ್ಲ

ಸಹಿಷ್ಣುತೆ ಪಡೆದಿರುವುದು ಕಾರಣ. ಅನಾನುಕೂಲ ಪರಿಸ್ಥಿತಿ ಕಾರಣವಲ್ಲ. "ಈ ಹುಡುಗನು ಹುಟ್ಟಿದ ತಕ್ಷಣ ಅವನ ತಾಯಿ ಅವನನ್ನು ಮಳೆಯಲ್ಲಿ ಬಿಟ್ಟು ಹೊರಟು ಹೋದಳು. ಆದ್ದರಿಂದ ಇವನು ಎಷ್ಟು ಬಲಿಷ್ಟನಾಗಿದ್ದಾನೆ!" ನ್ಯಾಯವಾಗಿ ಆ ವಾಕ್ಯ ಹೀಗಿರಬೇಕು: 'ಹುಟ್ಟಿದ ತಕ್ಷಣ ಈ ಹುಡುಗನನ್ನು ಅವನ ತಾಯಿ ಮಳೆಯಲ್ಲಿ ಬಿಟ್ಟು **ಹೋದರೂ,** ಇವನು ಎಷ್ಟು ಬಲಿಷ್ಟನಾಗಿದ್ದಾನೆ!'. ಇದು ನ್ಯಾಯವಾಗಿ ಅನುಗಮನ ದೋಷವಾಗಿ ಪರಿಗಣಿಸಬೇಕಾದದ್ದು; ಇದು ನಿಗಮನನ್ಯಾಯದೋಷವಾದ ಅಸಂಬದ್ಧ ನಿರ್ಣಯಕ್ಕೆ ಸಂವಾದಿಯಾದ ಅನುಗಮನ ನ್ಯಾಯದೋಷ. ಇದರ ವಿಚಾರ ಸವಿಸ್ತಾರವಾಗಿ ಮುಂದೆ ಅನುಗಮನನ್ಯಾಯ ಭಾಗದಲ್ಲಿ ಬರುತ್ತದೆ.

## ಅಭ್ಯಾಸಗಳು (೧೮)

೧. ತಾರ್ಕಿಕ ಆಭಾಸ ಎಂದರೆ ಏನು? ಆಭಾಸಗಳನ್ನು ಪಾಶ್ಚಾತ್ಯ ತಾರ್ಕಿಕರು ಹೇಗೆ ವಿಭಾಗಮಾಡಿರುತ್ತಾರೆ?

೨. 'ಚಕ್ರಕ' ಎಂದರೆ ಏನು? ಅದಕ್ಕೆ ಒಂದು ಉದಾಹರಣೆಯನ್ನು ಕೊಡಿ.

೩. 'ಅಪ್ರಕೃತ ನಿರ್ಣಯ' ಎಂದರೆ ಏನು? ಅದು ಎಷ್ಟು ಬಗೆಯಾಗಿರಬಹುದು? ಒಂದೊಂದಕ್ಕೂ ಒಂದೊಂದು ಉದಾಹರಣೆಯನ್ನು ಕೊಡಿ.

೪. ಅಸಂಬದ್ಧ ವಾದಕ್ಕೆ ಒಂದು ಉದಾಹರಣೆಯನ್ನು ಕೊಡಿ.

೫. ಈ ವಾದಗಳನ್ನು ಪರೀಕ್ಷಿಸಿ.

(ಅ) ೩ ಮತ್ತು ೨ ಬೆಸ ಮತ್ತು ಸಮ.
ಐದು ೩ ಮತ್ತು ೨.
∴ ಐದು ಬೆಸ ಮತ್ತು ಸಮ.

(ಆ) ಕೆಲವು ಮನುಷ್ಯರು ಮಾತ್ರ ಸುಳ್ಳು ಹೇಳುವವರು, ಆದ್ದರಿಂದ ಮನುಷ್ಯರಲ್ಲದ ಕೆಲವರು ಸುಳ್ಳು ಹೇಳುವವರಿದ್ದಾರೆ.

(ಇ) "ಬಿಟ್ಟಿ ವಿದ್ಯಾಭ್ಯಾಸ, ಅನಂತರ ಬಿಟ್ಟಿ ಊಟ, ಈಗ ಬಿಟ್ಟಿ ಹಾಲು! ಹೀಗೇ ಆದರೆ ಸ್ವಲ್ಪ ಕಾಲದಲ್ಲೇ ಸಿನೆಮಾಕ್ಕೂ ಬಿಟ್ಟಿ ಟಿಕೆಟ್!"

(ಈ) ಎಲ್ಲ ನಾಯಿಗಳೂ ಪ್ರಾಣಿಗಳು, ಜಿಂಕೆ ಒಂದು ಪ್ರಾಣಿ; ಆದ್ದರಿಂದ ಜಿಂಕೆ ನಾಯಿ.

